# ಪ್ರಸ್ತಾವನೆ

**ನಮ್ಮ ಹಳ್ಳಿಯ ರಾಜ್ಯಘಟನೆ.**

ರಾಜ್ಯಘಟನೆ ಅಂದರೆ ರಾಜ್ಯಾಡಳಿತೆಯ ಯೋಜನೆ ಅಥವಾ ನಿಯಮ ದೇಶದ ಆಡಳಿತೆಯನ್ನು ರಾಜ್ಯಘಟನೆಯಂತೆ, ಕಾಯಿದೆ ಪ್ರಕಾರ ನಡಿಸಬೇಕಾಗುವದು ದೇಶದ ಆಡಳಿತೆ ಯಾವರೀತಿ ಇರುವದೋ ಅದರಂತೆಯೇ ಗ್ರಾಮದ ಆಡಳಿತೆ ಇರುವದು ಮತ್ತು ಅದನ್ನು ಕಟ್ಟುನಿಟ್ಟನಿಂದ ನಡಿಸಿದರೆ ಮಾತ್ರ ಅದು ಚೆನ್ನಾಗಿ ಸಾಗುವದು

ನಮ್ಮ ಗ್ರಾಮವೇ ರಾಜ್ಯವಂದು ಕಲ್ಪಿಸಿ ಅದರ ಆಡಳಿತೆಯ ಬಗ್ಗೆ ಯಾವ ಯೋಜನೆಯು ಸಿದ್ಧವಾಗುವದೋ ಅದೇ ನಮ್ಮ ಹಳ್ಳಿಯ ರಾಜ್ಯಘಟನೆಯು

ನಮ್ಮ ಹಳ್ಳಿಗಳ ರಾಜ್ಯಘಟನೆಯು ಹೇಗಿರಬೇಕೆಂಬುದನ್ನು ಮುಂಬೈ ಗ್ರಾಮ ಪಂಚಾಯತಿಗಳ ಕಾಯದೆಯಲ್ಲಿ ಕಲಮುಗಳನ್ನು ಅನುಕ್ರಮವಾಗಿ ಕೊಟ್ಟಿದೆ

ನಮ್ಮ ಗ್ರಾಮಗಳ ಆಡಳಿತದ ಸೂತ್ರಗಳು ನಾವೇ ಆರಿಸಿದಂಥ ಅಂದರೆ ನಮ್ಮ ಪ್ರತಿನಿಧಿಗಳ ಕೈಗಳಲ್ಲಿ ಇರಬೇಕೆಂಬುದೇ ಈ ಕಾಯದೆಯ ಆಧಾರಭೂತ ಕಲ್ಪನೆಯಾಗಿದೆ.

ಈ ಕಾಯಿದೆಯು ನಮಗೆ ನಮ್ಮ ಗ್ರಾಮಗಳ ಸುಧಾರಣೆಯನ್ನು ಸಾಧಿಸುವ ಶಕ್ತಿ ಮತ್ತು ಸಾಧನಗಳನ್ನು ದಯಪಾಲಿಸಿದೆ

ಇದರ ಸದುಪಯೋಗವನ್ನು ಮಾಡಿಕೊಳ್ಳುವ ಹೊಣೆಯು ನಮ್ಮಲ್ಲಿಯ ಪ್ರತಿಯೊಬ್ಬರ ಮೇಲೂ ಇದೆ

**ಕಾನೂನನ್ನು ನೋಡುವ ನಮ್ಮ ದೃಷ್ಟಿಕೋನ.**

೧೯೪೭ ರ ಪೂರ್ವದಲ್ಲಿ ಪರಕೀಯರ ರಾಜ್ಯಾಡಳಿತೆಯಲ್ಲಿ ಕಾಯದೆಯ ಕಡೆಗೆ ನೋಡುವ ನಮ್ಮ ದೃಷ್ಟಿಕೋನವು ಆದರವ್ಯಾಗಿರಲಿಲ್ಲ

ಪ್ರತಿಯೊಂದು ಕಾನೂನಿನ ಬಗ್ಗೆ ಪರಕೀಯರು ನಮ್ಮ ಮೇಲೆ ಹೇರಿದ ಯೋಜನೆಗಳಿಂದು ನಮ್ಮಲ್ಲಿ ಅನಾದರ ಭಾವನೆಯುಂಟಾಗಿ ಬಿಟ್ಟಿತ್ತು ಈಗ ಕಾನೂನಿನ ಕಡೆಗೆ ನೋಡುವ ನಮ್ಮ ದೃಷ್ಟಿಕೋನದಲ್ಲಿ ಬದಲಾವಣೆಯಾಗಬೇಕಾದ ಸಮಯ ಬಂದಿದೆ ನಮ್ಮ ಕಾನೂನುಗಳು ನಮ್ಮಿಂದಲೇ ನಮ್ಮ ಹಿತಕ್ಕಾಗಿ, ಮಾಡಲ್ಪಟ್ಟಿವೆ, ಅವು ಹಿತಕಾರಕವಾಗಿಲ್ಲವೆಂದು ಕಂಡುಬಂದರೆ ನಾವು ಅವುಗಳನ್ನು ಹಿಗ್ಗಿಸಬಹುದು ಅಥವಾ ಕುಗ್ಗಿಸಬಹುದು

ಗ್ರಾಮಪಂಚಾಯತಿ ಕಾನೂನುಗಳಲ್ಲಿ ಕೊಟ್ಟ ಯೋಜನೆಗಳು ನಮ್ಮ ಮತ್ತು ನಮ್ಮ ಹಳ್ಳಿಗಳ ಅನುಕೂಲತೆಗಾಗಿ ಮತ್ತು ಸುಧಾರಣೆಗಾಗಿ ಇರುತ್ತವೆ, ಮತ್ತು ಈ ಯೋಜನೆಗಳನ್ನು ಕೊನೆಗಾಣಿಸುವದು ನಮ್ಮ ಕರ್ತವ್ಯವಾಗಿದೆ ಎಂಬ ಭಾವನೆಯಿಂದ, ಗ್ರಾಮ ಪಂಚಾಯತಿ ಕಾಯದೆಯ ಕಡೆಗೆ ಅಷ್ಟೇ ಏಕೆ ಪ್ರತಿಯೊಂದು ಕಾಯದೆಯ ಕಡೆಗೆ ಈಗ ನೋಡುವಂಥವರಾಗಬೇಕು.

**ನಮ್ಮ ದೇಶೋದ್ಧಾರದ ಮಾರ್ಗ**

ನಮ್ಮ ದೇಶೋದ್ಧಾರದ ಮಾರ್ಗವು ಗ್ರಾಮಸುಧಾರಣೆಗಳ ಮುಖಾಂತರವಾಗಿ ಸಾಗಬೇಕಾಗಿದೆ

ಈ ಸುಧಾರಣೆಗಳಲ್ಲಿ ಗ್ರಾಮಪಂಚಾಯತಿಗಳಿಂದ ದೇಶದ ದೊಡ್ಡ ಕೆಲಸಗಳು ಆಗಬೇಕಾಗಿದೆ.

ಈ ದೃಷ್ಟಿಯಿಂದಲೇ ಸರಕಾರವು ಗ್ರಾಮಪಂಚಾಯತಿಯ ಸ್ಥಾಪನೆಯ ಕಡೆಗೂ ಕಾರ್ಯನಿರ್ವಹಣೆಯ ಕಡೆಗೂ ಇಂದು ವಿಶೇಷ ಲಕ್ಷವನ್ನು ಪೂರೈಸುತ್ತಲಿದೆ. ದೇಶದಲ್ಲಿಯ ಸಾವಿರಾರು ಪಂಚಾಯತಿಗಳು, ಅಂದರೆ, ಸಾವಿರಾರು ಸರಪಂಚರು, ಡೆಪ್ಯುಟಿ ಸರಪಂಚರು, ಸಭಾಸದರು, ಕಾರ್ಯದರ್ಶಿಗಳು ಮತ್ತು ಪಂಚಾಯತಿಯ ನೌಕರವರ್ಗದವರು ಮತ್ತು ಮತದಾರರು ಉತ್ಸಾಹದಿಂದ ಕೆಲಸ ಮಾಡಲು ಪ್ರಾರಂಭಿಸಿದರೆ ಬೇಗನೆ ದೇಶದ ಸ್ವರೂಪವು ಬದಲಾಗದೆ ಇರಲಾರದು

**ಯೋಜನೆಯ ಯಶಾಪಯಶವು.**

ಯಾವದೇ ಯೋಜನೆಯ ಯಶವು ಅದರಲ್ಲಿ ಕೆಲಸ ಮಾಡುವ ಜನರ ಮೇಲೆ ಅವಲಂಬಿಸಿರುತ್ತದೆ

ಈ ನ್ಯಾಯದಂತೆಯೇ ಪಂಚಾಯತ ಯೋಜನೆಯ ಯಶವು ಅದರ ಸಭಾಸದರನ್ನು ಅವಲಂಬಿಸಿದೆ

ಸಭಾಸದರನ್ನು ಆರಿಸಿಕೊಡುವ ಹೊಣೆ ಮತದಾರರ ಮೇಲ ಇದೆ ಸಾರಾಸಾರ ವಿಚಾರಮಾಡಿ ಯೋಗ್ಯರಾದ ಉಮೇದವಾರರಿಗೆ ನಮ್ಮ ಮತಗಳನ್ನು ಕೊಟ್ಟರೆ ಒಳ್ಳೆಯ ಜನರು **ಆರಿಸಿ ಬರುವರು** ಮತ್ತು ಅಂಥವರಿಂದ ನಮ್ಮ ಗ್ರಾಮಗಳ ಕಾರಭಾರವು ಸರಿಯಾಗಿ ಸಾಗಬಹುದು ಇಲ್ಲವಾದರೆ ಅಯೋಗ್ಯ ಜನರಿಗೆ ಮತಗಳು ಕೊಡಲ್ಪಟ್ಟು ನಾವಾಗಿಯೇ ನಮ್ಮ ಆಡಳಿತೆಯನ್ನು ಕೆಡಿಸಲು ಜನರ ಕೈಯಲ್ಲಿ ಕೊಟ್ಟಂತಾಗುವದೆಂಬುದು ಸ್ಪಷ್ಟವದೆ.

ಮತದಾರರು ಯಾವ ಪ್ರಮಾಣದಲ್ಲಿ ತಮ್ಮ ಮತದಾನದ ಕೆಲಸವನ್ನು ಒಳ್ಳೆಯ ರೀತಿಯಿಂದ, ನಿಸ್ಸಂಕೋಚವಾಗಿ ಕೊನೆಗಾಣಿಸುವರೋ ಅದೇ ಪ್ರಮಾಣದಲ್ಲಿ ಒಳ್ಳೆಯ ಉಮೇದವಾರರು ಚುನಾಯಿಸಲ್ಪಡುವ ಸಂಭವ ಇದೆ ಎಂಬುದು ಲೆಕ್ಕಾಚಾರದ ಮಾತೇ ಸರಿ.

**ಅಧಿಕಾರ ಪದದ ಉಗಮ.**

ಇತ್ತೀಚೆಗೆ ಎಲ್ಲ ಸಂಗತಿಗಳು ಬಹುಮತದಿಂದ ಇಲ್ಲವೆ ಚುನಾವಣೆಯ ನಿಯಮಗಳಂತೆ ನಡೆಯುತ್ತಲಿವೆ.

ಹಿಂದುಸ್ಥಾನದ ಅಧ್ಯಕ್ಷ ಪದದಿಂದ, ಹಿಡಿದು ಒಂದು ಚಿಕ್ಕ ಗ್ರಾಮಪಂಚಾಯತಿಯ ಸರಪಂಚನ ಅಧಿಕಾರಪದದವರೆಗೂ ಎಲ್ಲ ಅಧಿಕಾರ ಪದಗಳು ಚುನಾವಣೆಯ ಮೂಲಕ ಪ್ರಾಪ್ತವಾಗಬೇಕಾಗಿರುತ್ತದೆ.

ಯಶಸ್ವಿಯಾದ ಉಮೇದವಾರಿಗೆ ದೊರೆಯುವ ಅಧಿಕಾರಪದದ ಉಗಮವು ಮತದಾರರು ಚುನಾವಣೆಯ ಕಾಲಕ್ಕೆ ಕೊಟ್ಟ ಮತದಲ್ಲಿಯೇ ಉಂಟಾಗಿರುತ್ತದೆ. ಚುನಾವಣೆಯು ರಾಜ್ಯಕಾರಣದ ಶಾಲೆಯು. ಈ ರಾಜಕಾರಣದ ಶಾಲೆಯಲ್ಲಿಯ ಪ್ರಥಮ ಪಾಠವನ್ನು ನಮ್ಮ ಗ್ರಾಮದ ಚುನಾವಣೆಯ ಕಾಲಕ್ಕೆ ಕಲಿಯುವ ಸಂಧಿಯು ನಮಗೆ ದೊರೆಯಲಿದೆ.

ಈ ಸಂಧಿಯನ್ನು ಒಳ್ಳೇ ರೀತಿಯಿಂದ ಉಪಯೋಗಿಸೋಣ.

---

# ನಮ್ಮ ಹಳ್ಳಿಗಳ ನ್ಯಾಯಪದ್ಧತಿ

ಗ್ರಾಮಪಂಚಾಯತಿಯ ಅಧಿಕಾರ ಅಥವಾ ಕೆಲಸದಲ್ಲಿ ಎರಡು ವಿಭಾಗಗಳಿವೆ:—

(೧) ಆಡಳಿತೆಯ ವಿಷಯ (೨) ನ್ಯಾಯದಾನ ವಿಷಯ.

**ಆಡಳಿತೆ.**

ಆಡಳಿತೆಯ ವಿಭಾಗದಲ್ಲಿ ಕರ ಹೇರುವ, ಅದನ್ನು ವಸೂಲ ಮಾಡುವ ಮತ್ತು ಗ್ರಾಮದ ಆರೋಗ್ಯಕ್ಕಾಗಿ ಮತ್ತು ಸುಧಾರಣೆಗಾಗಿ ಅದನ್ನು ವೆಚ್ಚಮಾಡುವ ಅಧಿಕಾರ ಇಲ್ಲವೆ ಕೆಲಸ ಸಮಾವೇಶವಾಗುವವು.

**ನ್ಯಾಯದಾನ**

ನ್ಯಾಯದಾನ ವಿಭಾಗದಲ್ಲಿ ದಿವಾಣಿ ದಾವೆ ಮತ್ತು ಫೌಜದಾರಿ ಖಟ್ಲೆ ನಡಿಸುವ ಅಧಿಕಾರ ಇಲ್ಲವೆ ಕೆಲಸಗಳು ಬರುವವು.

**ನ್ಯಾಯದಾನ ಮಂಡಳ**

ಗ್ರಾಮಪಂಚಾಯತಿಯ ಸಭಾಸದರು ತಮ್ಮೊಳ್ಳಿಯ ಸಭಾಸದರ ಪೈಕಿ ೫ ಜನರನ್ನು ಚುನಾಯಿಸಿ ನ್ಯಾಯಮಂಡಳವನ್ನು ರಚಿಸಬೇಕಾಗುವದು. ಈ ನ್ಯಾಯಪಂಚಾಯತಿಯ ಕಡೆಗೆ ಅಥವಾ ನ್ಯಾಯದಾನ ಮಂಡಳದ ಕಡೆಗೆ ಗ್ರಾಮದ ಕೆಲವು ದಿವಾಣಿ ಮತ್ತು ಫೌಜದಾರಿ ಕೆಲಸಗಳನ್ನು ನಡಿಸುವ ಅಧಿಕಾರ ಒಪ್ಪಿಸಲು ಬರುವದು

ನ್ಯಾಯದಾನದ ಕಾರ್ಯಗಳು ಒಳ್ಳೆಯ ರೀತಿಯಿಂದ ಆಗಬೇಕಾದರೆ ಅವು ತತ್ಪರತೆಯಿಂದ ಮತ್ತು ನಿಃಪಕ್ಷಪಾತದಿಂದ ನಡೆಯಬೇಕು ಕಾಯದೆಯ ನಿಯಮಗಳು ನ್ಯಾಯದ ನಿಃಪಕ್ಷಪಾತಕ್ಕೆ ಪೋಷಕವಾಗಬೇಕೆಂದೇ ಮಾಡಲ್ಪಟ್ಟಿರುತ್ತವೆ

ಈ ಕಾನೂನಿನ ನಿಯಮಗಳನ್ನು ಸಭಾಸದರು ಚನ್ನಾಗಿ ಅವಗತ ಮಾಡಿಕೊಳ್ಳದ ಹೊರತು ಅವರು ತಮ್ಮ ನ್ಯಾಯದಾನದ ಅಧಿಕಾರದ ಉಪಯೋಗವನ್ನು ಯೋಗ್ಯರೀತಿಯಿಂದ ಮಾಡಲಾರರೆಂಬುದು ಸ್ಪಷ್ಟವದೆ

ಜನತೆಯೂ ಕೂಡ ತನ್ನ ಹಿತದ ದೃಷ್ಟಿಯಿಂದ ಈ ಕಾಯದೆಯ ನಿಯಮಗಳನ್ನು ತಿಳಿದುಕೊಳ್ಳುವದು ಅವಶ್ಯವಿರುವದು. ಹೀಗೆ ಮಾಡದೇ ಹೋದರೆ ಹಳ್ಳಿಯಲ್ಲಿಯೇ ನ್ಯಾಯ ದೊರೆಯುವಂತೆ ಮಾಡಿದ ಯೋಜನೆಯ ಉಪಯೋಗವನ್ನು ಮಾಡಿಕೊಳ್ಳಲು ಬರುವದಿಲ್ಲ.

ನನಗೆ ಹಾನಿಯು ಈ ರೀತಿಯಾಗಿ ತಟ್ಟದೆ ಅದು ತುಂಬಿ ದೊರೆಯಬಹುದೋ? ಇದಕ್ಕಾಗಿ ನಾನು ನ್ಯಾಯ ಬೇಡಲು ಯಾರ ಕಡೆಗೆ ಹೋಗಬೇಕು? ಅದನ್ನು ಹೇಗೆ ಬೇಡಬೇಕು?

ಈ ಮತ್ತು ಇಂಥ ಎಲ್ಲ ಗ್ರಾಮಪಂಚಾಯತ ನ್ಯಾಯದಾನ ವಿಷಯದ ಪ್ರಶ್ನೆಗಳ ಉತ್ತರಗಳನ್ನು ಈ ಪುಸ್ತಕದಲ್ಲಿ ಪ್ರಕರ್ಣವಾರ, ಕಲಮವಾರ ಕೊಡಲಾಗಿದೆ. ನಮ್ಮ ಹಳ್ಳಿಗಳ ನ್ಯಾಯಪದ್ಧತಿಯು, ಹೇಗಿರುವದೆಂಬುದನ್ನು ಅವುಗಳ ಮುಖಾಂತರ ಸ್ವಂತಕ್ಕೆ ತಿಳಿದುಕೊಳ್ಳಲು ಬರುವದು

**ಹೆದರಿಕೆ**

ನ್ಯಾಯದಾನದಂಥ ಹೊಣೆಗಾರಿಕೆಯ ಅಧಿಕಾರವನ್ನು ಹಳ್ಳಿಗಳಲ್ಲಿಯ ಅಶಿಕ್ಷಿತ ಅಥವಾ ಅರ್ಧ ಶಿಕ್ಷಿತ ನ್ಯಾಯಪಂಚಾಯತದ ಸಭಾಸದರಿಗೆ ಒಪ್ಪಿಸುವದರಲ್ಲಿ ಹೆದರಿಕೆ ಇಲ್ಲವೋ? ಎಂಬುದು ವಿಚಾರಾರ್ಹವಾದ ಪ್ರಶ್ನೆಯಾಗಿದೆ. ಈ ಪ್ರಶ್ನೆಯ ಸಾಧಕಬಾಧಕಗಳ ಬಗ್ಗೆ ವಿಚಾರ ಮಾಡಿಯೇ ಈ ಕಾಯದೆಯ ನ್ಯಾಯದಾನ ವಿಷಯದ ಯೋಜನೆಯನ್ನು ತಯಾರಿಸಲಾಗಿದೆ.

ಮೊದಲನೇ ಮಾತು —ನ್ಯಾಯದಾನ ಮಂಡಳವು ಸಿದ್ಧವಾದ ಕೂಡಲೇ ಪ್ರತಿಯೊಂದು ನ್ಯಾಯ ಪಂಚಾಯತಿಗೆ ( ಇಲ್ಲವೆ ಮಂಡಲಕ್ಕೆ ) ಈ ಅಧಿಕಾರಗಳು ಕಾಯದೆಯಿಂದ ತಮ್ಮಷ್ಟಕ್ಕೆ ತಾವೇ ದೊರೆಯುವದಿಲ್ಲ. ಸ್ಥಾನಿಕ ಪರಿಸ್ಥಿತಿಯ ಬಗ್ಗೆ ಪೂರ್ಣ ವಿಚಾರಮಾಡಿ 'ಸರಕಾರವು' ಈ 'ಅಧಿಕಾರಗಳನ್ನು' ಆರಿಸಿದ ನ್ಯಾಯಪಂಚಾಯತಿಗೆ 'ಒಪ್ಪಿಸ'ಬೇಕಾಗುತ್ತದೆ.

ಎರಡನೇ ಮಾತು:— ಕಾನೂನುಗಳಿಂದ ಹೇಳಿದ ಎಲ್ಲ ಅಧಿಕಾರಗಳು ಒಮ್ಮೆಲೆ ಕೊಡದೆ, ಅವುಗಳನ್ನು ಕ್ರಮವಾಗಿ ಕೊಡಬೇಕಾಗುವದು.

ಮೂರನೇ ಮಾತು:— ಈ ಅಧಿಕಾರಿಗಳ ದುರುಪಯೋಗವಾಗಹತ್ತಿದೆ ಎಂದು ತಿಳಿದು ಬಂದರೆ ಸರಕಾರಕ್ಕೆ ಆ ಅಧಿಕಾರಗಳನ್ನು ಕಸಿದುಕೊಳ್ಳುವ ಅಧಿಕಾರವಿದೆ.

ನಾಲ್ಕನೇ ಮಾತು:— ಕೊಡಲ್ಪಡಬಹುದಾದ ಅಧಿಕಾರಗಳು ಬಹಳೇ ಮರ್ಯಾದಿತವಾಗಿವೆ. ಸಾಮಾನ್ಯವಾಗಿ ತೊಡಕು ಇಲ್ಲದೆ ಇರುವ ೨೫ರೂಪಾಯಿಯ ವರೆಗಿನ ದಾವೆ ಮತ್ತು ಕಿರಕೋಳ ಸ್ವರೂಪದ ಖಟ್ಲೆಗಳನ್ನು ಮಾತ್ರ ನಡೆಯಿಸುವಷ್ಟು ಅಧಿಕಾರವನ್ನು ಇವುಗಳಿಗೆ ಕೊಡಲಾಗಿದೆ.

ಐದನೇ ಮಾತು:— ಸಕ್ತ ( ಕಠಿಣ ) ಕೂಲಿಯ ಇಲ್ಲವೆ ಸಾದಾ ಕೈದಿನ ಶಿಕ್ಷೆ ಕೊಡಲು ಬರುವದಿಲ್ಲ. ಸಾಮಾನ್ಯವಾಗಿ ದಂಡವನ್ನು (೨೦ ರೂಪಾಯಿಗಳವರೆಗೆ) ಮಾತ್ರ

ಮಾಡುವ ಅಧಿಕಾರ ಇರುವದು. ನ್ಯಾಯದಾನದ ಕೆಲಸವು ತತ್ವತಃ ಕಠಿಣವಾಗಿದ್ದರೂ ನ್ಯಾಯದಾನ ಮಂಡಳದ ಕಡೆಗೆ ಯಾವ ಪ್ರಕಾರದ ಕೆಲಸವನ್ನು ಒಪ್ಪಿಸಲಾಗುವದೋ ಅದು ಅಷ್ಟೊಂದು ಕಠಿಣವಾಗಿಲ್ಲ.

ಈ ವಿಷಯದಲ್ಲಿ ಮಾರ್ಗದರ್ಶನಕ್ಕಾಗಿ ೭ನೇ ಪ್ರಕರ್ಣದಲ್ಲಿ ಕೆಲಸ ನಡಿಸುವ ರೀತಿಯನ್ನು ಕಲಮುವಾರ ಕೊಡಲಾಗಿದೆ.

ಕಾನೂನಿನ ಕಲಮುಗಳಿಂದ ನ್ಯಾಯದಾನದ ಶರೀರವು ಸಿದ್ಧವಾಗುವದು, ಅದಕ್ಕೆ ಬರುವ ಜೀವಕಳೆಯು ಮಾತ್ರ ಸಭಾಸದರ ಅಂತಃಪ್ರೇರಣೆಯಿಂದಲೇ ನಿರ್ಮಾಣವಾಗಬೇಕಾಗುವದು

ನ್ಯಾಯಪಂಚಾಯತಿ ಸಭಾಸದರ ನಿಃಪಕ್ಷಪಾತ, ನ್ಯಾಯಬುದ್ಧಿ, ಮತ್ತು ಅಂತ ಕರಣ ಇವುಗಳ ಮೇಲೆಯೇ ನ್ಯಾಯದಾನ ಯೋಜನೆಯು ಯಶವು ಅವಲಂಬಿಸಿರುತ್ತದೆ

ದೇಶವು ಸರ್ವರಿಂದ, ಪ್ರತಿಯೊಬ್ಬರಿಂದ, ವಿಶೇಷತಃ ನ್ಯಾಯಪಂಚಾಯತ ಸಭಾಸದರಿಂದ ಕರ್ತವ್ಯನಿಷ್ಠೆಯನ್ನು ಅಪೇಕ್ಷಿಸುತ್ತಿರುವದು

## ಪಂಚಾಯತ ಕರ ಪದ್ಧತಿ

ಹಳ್ಳಿಗಳ ಆರೋಗ್ಯಕ್ಕೆ ಸಂಬಂಧಿಸಿದ ಕರ್ತವ್ಯ ಮತ್ತು ಗ್ರಾಮಸುಧಾರಣೆಯ ಅನೇಕ ಯೋಜನೆಗಳನ್ನು ಪೂರೈಸಲು ಹಣದ ವ್ಯವಸ್ಥೆ ಮಾಡುವದು ಅವಶ್ಯವಿರುತ್ತದೆ.

### ಈ ಹಣವನ್ನು ಹೇಗೆ ಕೂಡಿಸಬೇಕು ?

ಭೂಮಿ-ಸೀಮೆಯು ಯಾವ ಭಾಗವನ್ನು ಹಣ ಪೂರೈಕೆಯು ಸಲುವಾಗಿ ಪಂಚಾಯತಿಗೆ ಅರ್ಥಾತ್ ಸರಕಾರವು ಒಪ್ಪಿಸುವದೋ ಅದರ ಮೇಲಿನ ಕರರೂಪವಾಗಿ

### ಕರ ಹೇಗೆ ಕೂಡಿಸುವದು ?

ಈ ವಿಷಯವಾಗಿ ಸರಕಾರವು ನಿಯಮಗಳನ್ನು ಹಾಕಿದೆ. ಅವುಗಳನ್ನು ಸ್ವತಂತ್ರ ಪರಿಶಿಷ್ಟದಲ್ಲಿ ಕ್ರಮವಾಗಿ ಕೊಟ್ಟಿದೆ.

ಪಂಚಾಯತಿಯು ಕರಹೇರುವ ವಿಷಯದಲ್ಲಿ ಅಧಿಕಾರಿಗಳು ಹಿಂದುಮುಂದು ನೋಡುತ್ತಾರೆ. ಮತ್ತು ಹೇರಿದ ಕರ ವಸೂಲ ಮಾಡುವ ಕೆಲಸದಲ್ಲಂತೂ ಬಹಳೇ ಹಿಂಜರಿಯುತ್ತಾರೆ! ಜನಾಪವಾದ ಬರಬಾರದೆಂದು ಹೀಗಾಗುತ್ತಿರಬಹುದು, ಆದರೆ ಗ್ರಾಮದ ಹಿತದ ದೃಷ್ಟಿಯಿಂದ ಲೋಕಾಪವಾದವನ್ನು ಸಹಿಸುವದೂ ಒಂದು ಲೋಕಸೇವೆಯ ಅಂಗವಲ್ಲವೇ ?

ಪಂಚಾಯತಿಗೆ ಕರಹೇರಲು ದೊರೆತ ಅಧಿಕಾರಗಳು ಬಹಳ ಮಹತ್ವದ್ದಾಗಿವೆ. ಈ ಅಧಿಕಾರಕ್ಷೇತ್ರವು ಎಷ್ಟು ವ್ಯಾಪಕವಾಗಿದೆ ಎಂಬುದು ಕರಪರಿಶಿಷ್ಟದಲ್ಲಿ ಕರ ಮತ್ತು ಫೀಗಳ ೧೫ ಸ್ವತಂತ್ರ ಭಾಗಗಳಲ್ಲಿ ಕಾಣಿಸಿದ ವಿವಿಧ ಪ್ರಕಾರಗಳ ಮೇಲಿಂದ ಕಂಡುಬರಬಹುದು. ಈ ಅಧಿಕಾರದ ವಿಸ್ತಾರವನ್ನು ತಿಳಿದುಕೊಳ್ಳುವಾಗ ಅವುಗಳ ಮರ್ಯಾದೆಯನ್ನೂ ಸ್ಪಷ್ಟ

ವಾಗಿ ಅರಿತುಕೊಳ್ಳಬೇಕು. (ಕರ) ಪರಿಶಿಷ್ಟಗಳಲ್ಲಿ ಕೊಟ್ಟ ಕರದ ಹೊರ್ತಾಗಿ ಬೇರೆ ಕರಗಳನ್ನು ಹೇರುವದು ಕಾನೂನಿನ ವಿರುದ್ಧವಾಗಿದೆ ಎಂಬುದು ಸ್ಪಷ್ಟವಿದೆ.

ಇದೇ ಪ್ರಕಾರವಾಗಿ ಈ ಕರಗಳನ್ನು ಹೇರುವಾಗ ಕರಭಾರದ ವಿಷಯವಾಗಿ ಸರಕಾರವು ಪ್ರಸಿದ್ಧ ಮಾಡಲ್ಪಟ್ಟ ನಿಯಮಗಳಂತೆಯೇ ಅವುಗಳನ್ನು ಕೂಡ್ರಿಸಬೇಕು.

ಪಂಚಾಯತಿಯ ಪುಟ್ಟ ಗ್ರಾಮದ ರಾಜ್ಯವನ್ನು ನಾಗಿಸುವದಕ್ಕಾಗಿ ಗ್ರಾಮದ ಹಿತಕ್ಕಾಗಿ ಈ ಅಧಿಕಾರಗಳು ಕಾನೂನಿನಿಂದ ದಯಪಾಲಿಸಲಾಗಿವೆ. ಅಧಿಕಾರದೊಂದಿಗೆ ಹೊಣೆ ಇಲ್ಲದೆ ಕರ್ತವ್ಯ ಯಾವಾಗಲೂ ಬರುವದು ಅಧಿಕಾರ ಮತ್ತು ಹೊಣೆ ಇವು ಒಂದೇ ವಸ್ತುವಿನ ಎರಡು ಅಂಗಗಳಾಗಿವೆ ಅನಿಯಂತ್ರಿತ ಅಧಿಕಾರ ಗತಕಾಲದ ಹಳೇ ನಂಗತಿಯಾಗಿದೆ!

ಅರ್ಥಾತ, ಹೇರಲ್ಪಡುವ ಕರವು ಕಾನೂನಿಗೆ ಮತ್ತು ಸರಕಾರೀ ನಿಯಮಕ್ಕೆ ಅನುಸರಿಸಿ ಇರುವದೋ ಅಥವಾ ಇಲ್ಲವೋ ಎಂಬದನ್ನು ಮೇಲಿಂದ ಮೇಲೆ ( ಯಾಕಂದರೆ ಕಾನೂನು ಮತ್ತು ಸರಕಾರಿ ನಿಯಮಗಳು ಬದಲಾಯಿಸುವ ಸಂಭವವಿರುವದು ) ನಿಶ್ಚಿತವಾಗಿ ಪೂರ್ಣ ತಿಳಿದುಕೊಳ್ಳಬೇಕು, ಇಷ್ಟೇ ಅಲ್ಲ, ಕರ ಕೊಡುವವರಲ್ಲೂ ಇದೇ ರೀತಿಯ ತಿಳುವಳಿಕೆಯನ್ನುಂಟುಮಾಡಬೇಕು.

## ಪುಸ್ತಕದ ರೂಪರೇಷೆಗಳು

೧ ಸಾಧಾರಣವಾಗಿ ಪ್ರಕರ್ಣದ ಆರಂಭದಲ್ಲಿ ಪ್ರಕರಣದಲ್ಲಿಯ ವಿಷಯದ ಕಲ್ಪನೆ ಬರಬೇಕೆಂದು ಪ್ರಸ್ತಾವನೆಗಳನ್ನು ಕೊಡಲಾಗಿದೆ

೨ ಪ್ರಕರ್ಣದ ಕೊನೆಗೆ ಸಮಾರೋಪದೊಡನೆ ಸಿಂಹಾವಲೋಕನವನ್ನು ಕೊಡಲಾಗಿದೆ

೩ ಪ್ರಕರ್ಣಗಳಲ್ಲಿ ಆಯಾ ಕಲಮುಗಳ ಕೆಳಗೆ ಸರಕಾರವು ಗಝೇಟದಲ್ಲಿ ಕಾಲ ಕಾಲಕ್ಕೆ ಪ್ರಸಿದ್ಧಿಸಿದ ನಿಯಮ, ಜಾಹೀರನಾಮೆ, ಮತ್ತು ಪತ್ರಿಕೆಗಳನ್ನು ಕೊಡಲಾಗಿದೆ ಒಂದೆಡೆಯಲ್ಲಿ ಒಂದೇ ಕಾಲಕ್ಕೇ ಆಯಾ ವಿಷಯಗಳ ರಚನೆಯು ಪೂರ್ಣವಾಗಿ ಆಯಾ ವಿಷಯಗಳು ಸ್ಪಷ್ಟವಾಗಬೇಕೆಂದು ಈ ಪದ್ಧತಿಯನ್ನು ಕೈಕೊಳ್ಳಲಾಗಿದೆ

ಈ ಪ್ರಕಾರದ ರಚನೆಯ ಉಪಯುಕ್ತತೆಯು ಪುಸ್ತಕವನ್ನು ಉಪಯೋಗಿಸುವವರಿಗೆ ಎಷ್ಟರ ಮಟ್ಟಿಗೆ ಕಂಡು ಬಂದಿದೆ ಎಂಬುದು ಕೆಳಗೆ ಕೊಟ್ಟ ಅಭಿಪ್ರಾಯದ ಮೇಲಿಂದ ಸಹ ತಿಳಿದು ಬರಬಹುದು

“ಈ ಪುಸ್ತಕದ ವೈಶಿಷ್ಟ್ಯವೆಂದರೆ ಸರಕಾರವು ಮಂಜೂರ ಮಾಡಿದ ನಿಯಮಗಳನ್ನು ಕಟ್ಟುನಿಟ್ಟಿನಿಂದ ಆಯಾ ವಿಷಯಗಳ ಕೆಳಗೆ ಮತ್ತು ಕಲಮುಗಳ ಕೆಳಗೆ ಒಂದೆಡೆಯಲ್ಲಿ ಕೊಡಲಾಗಿದೆ

ಆದುದರಿಂದ ಈ ಪುಸ್ತಕವು ಎಲ್ಲ ಸಭಾಸದರ ಸಂಗ್ರಹದಲ್ಲಿರುವದು ಅವಶ್ಯವಿದೆ ”

ಸರಕ್ಯೂಲರ ನಂ ವ್ಹಿ. ಪಿ ೪೦, ಜಿಲ್ಹಾ ಲೋಕಲ್ ಬೋರ್ಡ, ಪಶ್ಚಿಮ ಖಾನದೇಶ

೪. ಮಹತ್ವದ ವಿಷಯವಾದ ಪಂಚಾಯತ ಕರಯೋಜನೆಯನ್ನು ಸ್ವತಂತ್ರ ಕರ ನಿಯಮ ಪರಿಶಿಷ್ಟದಲ್ಲಿ ವಿಸ್ತಾರವಾಗಿ ಕೊಡಲಾಗಿದೆ

೫ ಪರಿಶಿಷ್ಟ ಅ ಮತ್ತು ಬ ಗಳಲ್ಲಿ ಅನುಕ್ರಮವಾಗಿ ಅಂದಾಜಪತ್ರಿಕೆ, ಮತ್ತು ಲೆಕ್ಕಾಚಾರ ಮತ್ತು ಪ್ರಾವ್ಹಿಡೆಂಟ ಫಂಡಿನ ಬಗ್ಗೆ ಸರಕಾರದ ಎಲ್ಲ ನಿಯಮಗಳನ್ನೂ ನಮೂನೆಗಳನ್ನೂ ಕೊಡಲಾಗಿದೆ

೬ “ಕಾಯದೆಯ ಪುಸ್ತಕವು **ಅದ್ಯಾವತ್** ಅಂದರೆ ಇಂದಿನವರೆಗೆ (up to date) ಇದ್ದರೆ ಮಾತ್ರ ಅದರ ಮಾರ್ಗದರ್ಶನವು ತಪ್ಪದೇ ಆಗುವದು” ಅರ್ಥಾತ, ಅದ್ಯಾವತದ ಮೇಲೆ ಹೆಚ್ಚು ಮಹತ್ವ ಕೊಡಲಾಗಿದೆ

ದೃಷ್ಟಿಕೋನ — ಉದ್ದೇಶ ನಮ್ಮ ಹಳ್ಳಿಗರ ರಾಜ್ಯಯಂತ್ರವು ಹೇಗೆ ಸಾಗುತ್ತದೆ? ವಾಸ್ತವಿಕವಾಗಿ ಅದು ಹೇಗೆ ನಡೆಯಬೇಕು? ಅದನ್ನು ಹೇಗೆ ಸಾಗಿಸಬೇಕು?

ಗ್ರಾಮ ಪಂಚಾಯತಿಯ ಒಟ್ಟು ಆಡಳಿತದ ಮತ್ತು ಕರ್ತವ್ಯದ ಅನೇಕ ಅಂಗಗಳು ಮತ್ತು ಉಪಾಂಗಗಳು ಇರುತ್ತವೆ ಅಸಂಖ್ಯ ಗ್ರಾಮಜನತೆಯು ನಮ್ಮಂಥವು ನಿತ್ಯವೂ ಈ ರಾಜ್ಯಯಂತ್ರದೊಂದಿಗೆ ಬರುವದುಂಟು

ಈ ದೃಷ್ಟಿಯಿಂದ ಪಂಚಾಯತ ವಿಷಯದ ಉಪಲಬ್ಧ ಸಂಗತಿಗಳನ್ನು ದೊರಕಿಸಿ ಅವುಗಳನ್ನು **ಪದ್ಧತಿಪೂರ್ವಕ** ವ್ಯವಸ್ಥೆಯಿಂದ ಒಂದುಗೂಡಿಸಿ ಜನತೆಯ ಮುಂದೆ ಇಡುವದೂ ಒಂದು ಲೋಕ ಶಿಕ್ಷಣದ ಭಾಗವಲ್ಲವೇ?

ಈ ಶಿಕ್ಷಣದ ಜೊತೆಗೆ ರಾಜಕೀಯ ಶಿಕ್ಷಣದ ಮೊದಲು ಪಾಠಗಳು ದೊರೆಯದೇ ಇರಲಾರವು

---

## ತಿದ್ದುಪಡಿ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೫೪ | ೨೫ | ಮುದತು ಬಳಿಕ | ಮುದತು ತೀರಿದ ಬಳಿಕ |
| ೬೨ | ೧೪ | ೨೬ ಅ | ೨೬ ಅದಲ್ಲಿ |
| ೯೧ | ೧ | ಅವರ ಅಪ್ಪಣೆಯಿಂದ | ಅವರ ಪರಿಷ್ಕಾರ ಅಪ್ಪಣೆಯಿಂದ |
| ೧೭೧ | ೧೬ | ದಾವೆ ಮಾಡದ | ದಾವೆ ಮಾಡಿದ |
| ೧೭೪ | ೧೮ | ಜಾತ್ರೆಗಳ, ಹಬ್ಬಗಳ, ಮನೋರಂಜನೆಗಳ. | ಯಾತ್ರಿಕರ |
| ೧೭೬ | ೨೬ | ಕರವನ್ನು ತಿಳಿಸಲಿಕ್ಕೆ | ಕರವನ್ನು ಹೆಚ್ಚಿಸಲಿಕ್ಕೆ |

---

# ಅನುಕ್ರಮಣಿಕೆ

**ಕಾಯದೆಯ ಕಲಮು, ಸರಕಾರದ ಠರಾವು, ನಿಯಮು, ಸ್ಪಷ್ಟೀಕರಣ.**

## ಬಾಬು ೧.

## ಪ್ರಾರಂಭದ ಠರಾವುಗಳು (೬–೧೦)

## ಬಾಬು ೩.

ಕಾರಭಾರ ನಡಿಸುವ ಅಧಿಕಾರ ಮತ್ತು ಕರ್ತವ್ಯಗಳು (೬೨-೭೨)

ಪ್ರಕರಣದ ವಿಷಯ

## ಬಾಬು ೪.

## ಗ್ರಾಮಪಂಚಾಯತವನ್ನು ಏಕವ್ಯಕ್ತೀಭೂತವಾಗಿ ಮಾಡುವದು ; ಅದರ ಆಸ್ತಿ ಮತ್ತು ಫಂಡು ( ೭೩-೭೯ ).



## ಬಾಬು ೫.

## ನೌಕರರುಗಳು ಮತ್ತು ಲೆಖ್ಖಗಳು ( ೭೯-೧೦೩ )

ಕಲಮುಗಳು

## ಬಾಬು ೬.

ಬಾಬು ೭.

ಬಾಬು ೮.

**ಅಮಲಬಜಾವಣಿ ( ೧೬೫–೧೭೨ )**

## ಬಾಬು ೯.

## ಕರ ಕೂಡ್ರಿಸೋಣ ಮತ್ತು ಹಕ್ಕುಗಳ ವಸೂಲಿ ಮಾಡೋಣ ( ೧೭೩-೧೮೦ )

---

**ಸನ್ ೧೯೩೩ನೇ ಇಸವಿಯ ಮುಂಬಯಿಯ**

## ಗ್ರಾಮಪಂಚಾಯತಗಳ ವಿಷಯದ ಆಕ್ಟು

ಸ್ವಾತಂತ್ರ್ಯದಿನ ೧೫ ಅಗಸ್ಟ ೧೯೫೩ರ ವರೆಗೆ ಸುಧಾರಿಸಿದ್ದು

# ಗ್ರಾಮಪಂಚಾಯತಿಯ ಕಾಯದೆ

ಗ್ರಾಮಪಂಚಾಯತಗಳ ರಚನೆಯ ವಿಷಯದ ಕಾಯದೆಯನ್ನು ಸುಧಾರಿಸಿ ಒಟ್ಟುಗೂಡಿಸುವ ವಿಷಯದ ಆಕ್ಟು

**ಗ್ರಾಮ ಪಂಚಾಯತಗಳ ರಚನೆಯ ವಿಷಯದ ಕಾಯದೆಯನ್ನು, ಗ್ರಾಮಪ್ರದೇಶಗಳಲ್ಲಿ ಸ್ಥಾನಿಕ ಸ್ವರಾಜ್ಯದ ಬೆಳವಣಿಗೆಯನ್ನು ಇನ್ನೂ ಹೆಚ್ಚಾಗಿ ಮಾಡುವಂತೆಯೂ, ದಿವಾಣೀ ಮತ್ತು ಫೌಜದಾರೀ ನ್ಯಾಯದ ಕಾರಭಾರವು ಹೆಚ್ಚು ಒಳ್ಳೇದಾಗಿ ನಡೆಯುವಂತೆಯೂ, ಅವುಗಳ ಬೆಳವಣಿಗೆಯನ್ನು ಪೋಷಿಸಿ ಅವುಗಳ ಉಪಯುಕ್ತತೆಯನ್ನು ಬೆಳಿಸುವ ಉದ್ದೇಶದಿಂದ, ಸುಧಾರಿಸಿ ಒಟ್ಟುಗೂಡಿಸುವದು ವಿಹಿತವಿರುವದರಿಂದ ಮತ್ತು ಈ ಆಕ್ಟನ್ನು ಪಾಸುಮಾಡುವದರ ಸಲುವಾಗಿ ಗವ್ಹರ್ನಮೆಂಟ್ ಆಫ್ ಇಂಡಿಯಾ ಆಕ್ಟಿನ ೮೦ ಅ ಕಲಮಿನ (೩) ನೇ ಪೋಟ-ಕಲಮಿನನ್ವಯ ತೆಗೆದುಕೊಳ್ಳಬೇಕಾದ ಗವ್ಹರ್ನರ ಜನರಲರವರ ಮಂಜೂರಿಯನ್ನೂ ಸದರಿ ಆಕ್ಟಿನ ೮೦ ಕ ಕಲಮಿನನ್ವಯ ತೆಗೆದುಕೊಳ್ಳಬೇಕಾದ ಗವ್ಹರ್ನರರ ಮಂಜೂರಿಯನ್ನೂ ಮುಂಚಿತವಾಗಿ ಪಡೆದಿರುವದರಿಂದ, ಇದರ ಮೂಲಕ ಈ ಕೆಳಗಿನಂತೆ ಕಾಯದೆ ಮಾಡಲ್ಪಟ್ಟಿರುತ್ತದೆ.**

ಕಾಯದೆಯ ಆರಂಭದಲ್ಲಿ ಕಾಯದೆಯ ಉದ್ದೇಶವು ತಿಳಿಯಬೇಕಾಗುತ್ತದೆ. ಆದುದರಿಂದ ಆ ಉದ್ದೇಶವನ್ನು ಇಲ್ಲಿ ಕೊಡಲಾಗಿದೆ. ಅದು ಯಾವದೆಂದರೆ :—

(೧) ಹಳ್ಳಿಗಳಲ್ಲಿ ಸ್ಥಾನಿಕ ಸ್ವರಾಜ್ಯ ಪದ್ಧತಿಯ ಕಾರಭಾರದ ಸ್ಥಾಪನೆ ಮತ್ತು ವಿಸ್ತಾರ....

(೨) ಹಳ್ಳಿಗಳಲ್ಲಿ ದಿವಾಣಿ ಹಾಗೂ ಫೌಜದಾರಿ ನ್ಯಾಯದಾನ ಮಂಡಳದ ಸ್ಥಾಪನೆ ಮತ್ತು ಅದರ ಅಧಿಕಾರದ ವಿಸ್ತಾರ........

# ಪ್ರಕರಣ ೧

## ಪ್ರಾರಂಭದ ಠರಾವುಗಳು

ಸಂಕ್ಷಿಪ್ತ ಹೆಸರು **೧. ಈ ಆಕ್ಟಿಗೆ, ಸನ್ ೧೯೩೩ ನೇ ಇಸವಿಯ ಮುಂಬಯಿಯ ಗ್ರಾಮ ಪಂಚಾಯತಗಳ ವಿಷಯದ ಆಕ್ಟು ಎಂದೆನ್ನಬಹುದು**

ಈ ಕಾನೂನಿಗೆ ಸನ್ ೧೯೩೩ ನೇ ಇಸವಿಯ ಕಾಯದೆ ಎಂದು ಅನ್ನಲಾಗು ತ್ತಿದ್ದರೂ, ಅದು ಇಲ್ಲಿಯ (೧೫ ಅಗಸ್ಟ ೧೯೫೩) ವರೆಗೆ ೧೫ಕ್ಕಿಂತ ಹೆಚ್ಚು ಸುಧಾರಣೆಯ ಕಾಯದೆಗಳಿಂದ ತಿದ್ದುಪಡೆಹೊಂದಿದೆ.

ವ್ಯಾಪ್ತಿ **೨. ಅದು ಬೃಹನ್ಮುಂಬಯಿಯ ಹೊರ್ತಾಗಿ ಇಡೀ ಮುಂಬಯಿ ಇಲಾಖೆಗೆ ಲಾಗೂ ಆಗುತ್ತದೆ.**

ವ್ಯಾಖ್ಯೆಗಳು. **೩ ಈ ಆಕ್ಟಿನಲ್ಲಿ ವಿಷಯಕ್ಕೆ ಅಥವಾ ಸಂದರ್ಭಕ್ಕೆ ಯಾತರಿಂದಲೂ ಬಾಧೆ ಬಾರದಿದ್ದರೆ—**

(೧) **'ಶೆಡ್ಯೂಲ್ಡ ಪಂಗಡಗಳು' ಅಂದರೆ ಭಾರತದ ರಾಜ್ಯಘಟನೆಯ ೩೪೨ನೇ ಆರ್ಟಿಕಲ್ಲಿನನ್ವಯ ಮುಂಬಯಿ ರಾಜ್ಯದ ಸಂಬಂಧದಿಂದ ಶೆಡ್ಯೂಲ್ಡ ಪಂಗಡಗಳೆಂದು ತಿಳಿಯಲ್ಪಟ್ಟಂಥ ಪಂಗಡಗಳು ಅಥವಾ ಪಂಗಡ ರೂಪದ ಸಮಾಜಗಳು ಅಥವಾ ಇಂಥ ಪಂಗಡಗಳ ಅಥವಾ ಪಂಗಡ ರೂಪದ ಸಮಾಜಗಳ ಭಾಗಗಳು ಅಥವಾ ಅವುಗಳೊಳಗಿನ ಗುಂಪುಗಳು ಎಂದರ್ಥವಾಗುತ್ತದೆ.**

## ಶೆಡ್ಯೂಲ್ಡ ಪಂಗಡಗಳು

೧ ಬರ್ಡಾ ೨ ಬಾವಚಾ ೩ ಭಗಲೀಯಾ. ೪ ಭಿಲ್ಲ. ೫ ಭಿಲ್ಲ ಗರಸಿಯಾ ೬ ಚೋಡಾರ ೭ ಧಾಂಕಾ. ೮ ಧೋಡೀಆ. ೯ ಧೋಳಿಭಿಲ್ಲ ೧೦ ದುಬಲಾ ೧೧ ಡೋಂಗರಿ (ಗುಡ್ಡಗಾಡು) ಭಿಲ್ಲ. ೧೨ ಡೋಂಗರಿ (ಗುಡ್ಡಗಾಡು) ಗರಸಿಯಾ ೧೩ ಗಾಮೀತ ಅಥವಾ ಗಾಮತಾ ೧೪ ಗೋಂಡ (ಗೊಂಡ) ೧೫ ಕಾಥೋಡಿ ಅಥವಾ ಕಾತಕರಿ. ೧೬ ಕೋಂಕಾ. ೧೭ ಕೋಳೀಧೋರ. ೧೮ ಕೋಳಿ ಮಹಾದೇವ ೧೯ ಮಾವಂಚೀ. ೨೦ ಮೋವಾಸಿ ಭಿಲ್ಲ. ೨೧ ನಾಯಕಡಾ ಅಥವಾ ನಾಯಿಕ. ೨೨ ಪಾರಧೀ (ಇವರಲ್ಲಿ ಅಡವಿ ಚಿಂಚೇರ

ಅಥವಾ ಫಾಸೆ ಪಾರಧಿ ಇವರ ಸಮಾವೇಶವಾಗುವುದು) ೨೩ ಪತೇಲಿಯಾ. ೨೪ ಪೋಮಲಾ ೨೫ ಪೋವರಾ. ೨೬ ರಾಠವಾ ೨೭ ರಾವಳ ಭಿಲ್ಲ ೨೮ ತಡವೀ ಭಿಲ್ಲ. ೨೯ ಠಾಕೂರ. ೩೦ ವಲವಾಯಿ, ೩೧ ವರಳೀ. ೩೨ ವಾಸಾವಾ. ೩೩ ಮತ್ತು ಮುಂಬಯಿ ಸರಕಾರವು ನಿರ್ದೇಶಮಾಡಿದ ಇತರ ಪಂಗಡಗಳು

(೧ ಅ) "ಪೋಟ ಕಾಯದೆಗಳು" ಅಂದರೆ, ೧೮೯ ನೇ ಕಲಮಿ ನನ್ವಯ ಜಿಲ್ಹಾ ಲೋಕಲ್ ಬೋರ್ಡಿನಿಂದ ಮಾಡಲ್ಪಟ್ಟ ಪೋಟ ಕಾಯದೆಗಳು ಎಂದರ್ಥವಾಗುತ್ತದೆ;

ಪೋಟ ಕಾಯದೆಗಳು ಅಂದರೆ ಉಪನಿಯಮಗಳು.

(೨) "ಖಟ್ಲೆ" ಎಂಬದನ್ನು ಯಾವದೇ ನ್ಯಾಯದ ಕೆಲಸದ ಸಂಬಂಧದಿಂದ ಉಪಯೋಗಿಸಿದಾಗ ಅದರ ಅರ್ಥವು ನ್ಯಾಯಪಂಚಾಯತದಿಂದ ವಿಚಾರಣೆ ಮಾಡಲ್ಪಡಬಹುದಾದ ಯಾವದೇ ಅಪರಾಧದ ಸಂಬಂಧದ ಫೌಜದಾರೀ ಕೆಲಸವು ಎಂದಾಗುತ್ತದೆ,

ಖಟ್ಲೆ ಅಂದರೆ ದಿವಾಣಿ ಮತ್ತು ಫೌಜದಾರಿ ಖಟ್ಲೆ ಎಂದು ಲೋಕ ರೂಢಿಯಲ್ಲಿ ಅರ್ಥವಾಗುತ್ತದೆ; ಆದರೆ ಈ ಕಾಯದೆಯಲ್ಲಿ ಬರೇ ಫೌಜದಾರಿ ಖಟ್ಲೆಗೆ ಮಾತ್ರ 'ಖಟ್ಲೆ' ಎಂಬ ಶಬ್ದವನ್ನು ಯೋಜಿಸಲಾಗಿದೆ.

(೩) "ಚೇರಮನ್ನನು" ಅಂದರೆ, ೩೭ ಅ ಕಲಮಿನನ್ವಯ ನೇಮಿಸಲ್ಪಟ್ಟ ಯಾವದೊಂದು ನ್ಯಾಯಪಂಚಾಯತದ ಚೇರಮನ್ನನು ಎಂದರ್ಥವಾಗುತ್ತದೆ;

(೪) "ಜಿಲ್ಹಾ ಲೋಕಲ್ ಬೋರ್ಡು" ಎಂಬದನ್ನು ಯಾವದೇ ಸ್ಥಾನಿಕ ಕ್ಷೇತ್ರದ ಸಂಬಂಧದಿಂದ ಉಪಯೋಗಿಸಿದಾಗ ಅದರ ಅರ್ಥವು ಅಂಥ ಸ್ಥಾನಿಕ ಕ್ಷೇತ್ರವು ಇರುವ ಜಿಲ್ಹೆಯ ಬಗ್ಗೆ ಸನ್ ೧೯೨೩ನೇ ಇಸವಿಯ ಮುಂಬಯಿಯ ಲೋಕಲ್ ಬೋರ್ಡುಗಳ ವಿಷಯದ ಆಕ್ಟಿನನ್ವಯ ಸ್ಥಾಪಿಸಲ್ಪಟ್ಟ ಜಿಲ್ಹಾ ಲೋಕಲ್ ಬೋರ್ಡು ಎಂದಾಗುತ್ತದೆ.

(೫) 'ಶೆಡ್ಯೂಲ್ಡ ಜಾತಿಗಳು' ಅಂದರೆ, ಭಾರತದ ರಾಜ್ಯಘಟನೆಯ ೩೪೧ ನೇ ಆರ್ಟಿಕಲ್ಲಿನನ್ವಯ ಮುಂಬಯಿ ರಾಜ್ಯದ ಸಂಬಂಧದಿಂದ ಶೆಡ್ಯೂಲ್ಡ ಜಾತಿಗಳೆಂದು ತಿಳಿಯಲ್ಪಟ್ಟಂಥ ಜಾತಿಗಳು, ಕುಲಗಳು ಅಥವಾ ಪಂಗಡಗಳು ಅಥವಾ ಇಂಥ ಜಾತಿಗಳ, ಕುಲಗಳ ಅಥವಾ ಪಂಗಡಗಳ ಭಾಗಗಳು ಅಥವಾ ಅವುಗಳೊಳಗಿನ ಗುಂಪುಗಳು ಮತ್ತು ಮುಂಬೈ ರಾಜ್ಯದ ಸಂಬಂಧದಿಂದ ಆ ಆರ್ಟಿಕಲ್ಲಿನನ್ವಯ ಜಾಹೀರನಾಮೆಯು ಹೊರಡಿಸಲ್ಪಡುವ ವರೆಗೆ, ಸನ್

೧೯೩೬ನೇ ಇಸವಿಯ ಭಾರತ ಸರಕಾರದ (ಶೆಡ್ಯೂಲ್ಡ ಜಾತಿಗಳ) ವಿಷಯದ ಹುಕುಮಿನಲ್ಲಿ ವ್ಯಾಖ್ಯಾಯಿಸಲ್ಪಟ್ಟಂತಿರುವ ಶೆಡ್ಯೂಲ್ಡ ಜಾತಿಗಳು ಎಂದರ್ಥ ವಾಗುತ್ತದೆ. (ಶೆಡ್ಯೂಲ್ಡ ಅಂದರೆ ಪರಿಶಿಷ್ಟ)

## ಶೆಡ್ಯೂಲ್ಡ ಜಾತಿಗಳು

೧ ಅಗಾರ ೨ ಅಸೋಡಿ ೩ ಬಾಕಡ ೪ ಭಾಂಬಿ ೫ ಭಂಗಿ ೬ ಚಕ್ರವಾದ್ಯದಾಸರ ೭ ಚಲವಾದಿ ೮ ಚಾಂಭಾರ (ಚಮಗಾರ) ೯ ಚಿನಾದಾಸರ ೧೦ ಚುಹಾರ ೧೧ ಚುಹರಾ ೧೨ ಡಹಬ್ರಾ ೧೩ ಢೇಡ ೧೪ ಢೇಗು ಮೇಗು ೧೫ ಘೋರ ೧೬ ಗಾರೋಡಿ (ಗಾರುಡಿಗ) ೧೭ ಹೊಲೇರ ೧೮ ಹಲಸರ ೧೯ ಹೊಲ್ಯಾ ೨೦ ಹಲಸರ ೨೧ ಹುಲಸರ ೨೨ ಖಲೇವಾ ೨೩ ಕೋಲೇಹಾ ೨೪ ಕೋಲ್ಘಾ ೨೫ ಕೊಟೆಗಾರ ೨೬ ಲಿಂಗಾಡೇರ ೨೭ ಮಚಿಗಾರ ೨೮ ಮಾದಿಗ ೨೯ ಮಹಾರ ೩೦ ಮೇಹ್ತ್ಯಾವಂಶಿ ೩೧ ಮಾಂಗ ೩೨ ಮಾಂಗ ಗಾರುಡಿ ೩೩ ಮೇಘವಲ ೩೪ ಮೇಘವರ ೩೫ ಮಿಣಿಮಾದಿಗ ೩೬ ಮೋಚಿ ೩೭ ಮೋಚಿಗಾರ ೩೮ ಮುಕ್ರಿ ೩೯ ನಡಿಯಾ ೪೦ ರೋಹಿತ ೪೧ ಸಮಗಾರ ೪೨ ಶೇನ್ವಾ ೪೩ ಶಿಂಗದೇವ ೪೪ ಶಿಂಗಡ್ಯಾ ೪೫ ಶಿಧಯಾ ೪೬ ಸೋಚಿ ೪೭ ತಿಮಾಲಿ ೪೮ ತುರಿ ೪೯ ವನಕಾರ ೫೦ ವಿರೋಲಿಯಾ.

(೬) "ಅಪರಾಧ" ಅಂದರೆ ಆಯಾ ಕಾಲದಲ್ಲಿ ಬಳಿಕೆಯಲ್ಲಿರುವ ಯಾವದೇ ಕಾಯದೆಯಿಂದ ಶಿಕ್ಷಿಸಲ್ಪಡಬೇಕಾದ ಯಾವದೇ ಕೃತ್ಯವು ಅಥವಾ ಲೋಪವು ಎಂದರ್ಥವಾಗುತ್ತದೆ.

(೭) "ಪಂಚಾಯತ" ಅಂದರೆ, ಈ ಆಕ್ಟಿನನ್ವಯ ಸ್ಥಾಪಿಸಲ್ಪಟ್ಟ ಪಂಚಾಯತವು ಎಂದರ್ಥವಾಗುತ್ತದೆ

(೮) "ಠರಾಯಿಸಿದ್ದು" ಅಂದರೆ, ಕಾನೂನುಗಳಿಂದ ಠರಾಯಿಸಿದು ಎಂದರ್ಥವಾಗುತ್ತದೆ

ಈ ಆಕ್ಟಿನಲ್ಲಿ 'ಠರಾಯಿಸಿದ್ದು' ಎಂಬ ಶಬ್ದ ಪ್ರಯೋಗವು ಎಲ್ಲೆಲ್ಲಿ ಬಂದಿರುವದೋ, ಅಲ್ಲಲ್ಲಿ ಸರಕಾರದವರೇ ಠರಾಯಿಸಿದ್ದೆಂದು ತಿಳಿಯಬೇಕು.

ಕಾನೂನು ಅಂದರೆ ಸರಕಾರದ ನಿಯಮ. ಕಾನೂನು ಶಬ್ದದ ಪೂರಾ ವ್ಯಾಖ್ಯೆಯನ್ನು ಕೆಳಗಿನ ಪೋಟಕಲಮು ೧೦ ರಲ್ಲಿ ನೋಡಿರಿ

(೯) "ಮುಲ್ಕೀ ಗ್ರಾಮ" ಅಂದರೆ, ಮುಲ್ಕೀ ಲೆಕ್ಕಗಳಲ್ಲಿ ಒಂದು ಗ್ರಾಮವೆಂದು ಮಾನ್ಯ ಮಾಡಲ್ಪಟ್ಟ ಯಾವದೇ ಸ್ಥಾನಿಕ ಕ್ಷೇತ್ರವು ಎಂದರ್ಥವಾಗುತ್ತದೆ;

(೧೦) "ಕಾನೂನುಗಳು" ಅಂದರೆ, ೧೦೮ ನೇ ಕಲಮಿನನ್ವಯ ಪ್ರಾಂತಿಕ ಸರಕಾರದವರು ಮಾಡಿದ ಕಾನೂನುಗಳು ಎಂದರ್ಥವಾಗುತ್ತದೆ;

ಕಾನೂನು ಅಂದರೆ ಸರಕಾರದವರು ಗೊತ್ತುಮಾಡಿದ ನಿಯಮ. ಈ ಕಾಯದೆಯ ಕಲಮು ೧೦೮ ರಂತೆ ಸರಕಾರಕ್ಕೆ ನಿಯಮ ಮಾಡುವ ಅಧಿಕಾರವಿದೆ. ಅದರ ಮೇಲಿಂದ ಸರಕಾರದವರು ಮಾಡಿದ ನಿಯಮಗಳೇ ಈ ಕಾನೂನುಗಳು.

ಇಲಾಖೆಯಲ್ಲಿಯ ರಾಜ್ಯಕಾರಭಾರವು ವಿಧಿ-ಮಂಡಲ ಮಾಡಿದಂಥ ಕಾಯದೆಯಂತೆ ನಡೆಯುತ್ತದೆ. ಈ ಪ್ರಾಂತಿಕ ವಿಧಿ-ಮಂಡಲವು ಮಾಡಿದ ಕಾಯದೆಯ ಅಮಲಬಜಾವಣಿ ಪ್ರಾಂತಿಕ ಸರಕಾರದವರು ಮಾಡುವರು. ಗ್ರಾಮಪಂಚಾಯತಿ ಕಾಯದೆಯನ್ನು ಮುಂಬಯಿ ಪ್ರಾಂತಿಕ ವಿಧಿ-ಮಂಡಲದವರು ಪಾಸುಮಾಡಿರುತ್ತಾರೆ ಆ ಕಾಯದೆಯ ಅಮಲಬಜಾವಣಿ ಸಲುವಾಗಿ ನಿಯಮ (ಕಾನೂನು) ಮಾಡುವ ಅಧಿಕಾರ ಈ ಕಾಯದೆ ಕಲಮು ೧೦೮ ರಂತೆ ರಾಜ್ಯ ಸರಕಾರಕ್ಕೆ ಕೊಟ್ಟಿರುತ್ತಾರೆ ರಾಜ್ಯ ಸರಕಾರದವರು ಕಲಮು ೧೦೮ ರ ಪ್ರಕಾರ ಮಾಡಿದ ನಿಯಮಗಳಿಗೆ ಕಾಯದೆಯ ಪರಿಭಾಷೆಯಲ್ಲಿ 'ಕಾನೂನು' ಎಂದು ಅನ್ನುತ್ತಾರೆ. ಕನ್ನಡದಲ್ಲಿ ಪ್ರತ್ಯಕ್ಷ ವಿಧಿ-ಮಂಡಲವು ಮಾಡಿದ ಕಾಯಿದೆಗೆ ಕೂಡ ಕಾನೂನು ಅನ್ನುತ್ತಾರೆ. ಆದುದರಿಂದ ವಿಧಿ-ಮಂಡಲ ಮಾಡಿದ ಕಾಯದೆ ಮತ್ತು ಸರಕಾರದವರು ಮಾಡಿದ ಕಾನೂನು ಇವುಗಳಲ್ಲಿರುವ ಭೇದವನ್ನು ಮರೆಯಬಾರದು ಕಾನೂನು ಎಂಬ ಒಂದೇ ಶಬ್ದಪ್ರಯೋಗದಿಂದ ತೊಡಕು ಉಂಟಾಗುವ ಸಂಭವವಿದೆ

(೧೧) "ಸರಪಂಚ" ಅಂದರೆ, ೧೪ನೆ. ಕಲಮಿನನ್ವಯ ಆರಿಸಲ್ಪಟ್ಟ ಸರಪಂಚನು ಎಂದರ್ಥವಾಗುತ್ತದೆ.

(೧೨) "ಸ್ಕೂಲಬೋರ್ಡ" ಅಂದರೆ, ಸನ್ ೧೯೪೭ ನೇ ಇಸವಿಯ ಮುಂಬಯಿಯ ಪ್ರಾಥಮಿಕ ಶಿಕ್ಷಣದ ವಿಷಯದ ಆಕ್ಟಿನ ೪ನೇ ಕಲಮಿನನ್ವಯ ರಚಿಸಲ್ಪಟ್ಟ ಸ್ಕೂಲಬೋರ್ಡು ಎಂದರ್ಥವಾಗುತ್ತದೆ.

**ಸ್ಕೂಲ ಬೋರ್ಡು :—** ಮ್ಯುನಸಿಪಾಲಿಟಿ ಇಲ್ಲವೆ ಡಿಸ್ಟ್ರಿಕ್ಟ ಲೋಕಲ್ ಬೋರ್ಡವು ನೇಮಿಸಿದ ಸ್ಕೂಲಬೋರ್ಡು.

(೧೩) "ದಾವೆ" ಅಂದರೆ, ಈ ಆಕ್ಟಿನನ್ವಯ ನ್ಯಾಯಪಂಚಾಯತ ದಿಂದ ಇನಸಾಫು ಮಾಡಲ್ಪಡಬಹುದಾದ ದಿವಾಣೀ ದಾವೆ ಎಂದರ್ಥ ವಾಗುತ್ತದೆ.

(೧೪) "ಕರ" ಅಂದರೆ, ಈ ಆಕ್ಟಿನನ್ವಯ ಹೊರಿಸಲ್ಪಡಬಹುದಾದ ಕರವು, ಸೆಸ್ಸು, ಪಟ್ಟಿಯು ಅಥವಾ ಇತರ ಸುಂಕವು ಎಂದರ್ಥವಾಗುತ್ತದೆ. ಆದರೆ ಅದರೊಳಗೆ ಫೀಯು ಸಮಾವೇಶವು ಆಗುವದಿಲ್ಲ.

(೧೫) "ಪಂಚಾಯತದ ಮುದ್ದತು" ಅಂದರೆ, ೧೧ನೇ ಕಲಮಿನನ್ವಯ ಅದರ ಚುನಾಯಿಸಲ್ಪಟ್ಟ ಸಭಾಸದರು ಹುದ್ದೆಯನ್ನು ಧಾರಣಮಾಡುವ ಮುದ್ದತು ಎಂದರ್ಥವಾಗುತ್ತದೆ

(೧೬) "ಗ್ರಾಮ" ಅಂದರೆ, ೪ನೇ ಕಲಮಿನನ್ವಯ ಗ್ರಾಮವೆಂದು ಜಾಹೀರಮಾಡಲ್ಪಟ್ಟ ಯಾವದೇ ಸ್ಥಾನಿಕ ಕ್ಷೇತ್ರವು ಎಂದರ್ಥವಾಗುತ್ತದೆ.

(೧೭) "ನ್ಯಾಯಪಂಚಾಯತವು" ಅಂದರೆ, ದಾವೆಗಳ ಮತ್ತು ಖಟ್ಲೆಗಳ ಇನಸಾಫಿನ ಉದ್ದೇಶದ ಬಗ್ಗೆ ೩೭ನೇ ಕಲಮಿನನ್ವಯ ರಚಿಸಲ್ಪಟ್ಟ ನ್ಯಾಯಪಂಚಾಯತವು ಎಂದರ್ಥವಾಗುತದೆ.

## ವಿಶಿಷ್ಟ ಶಬ್ದವಿವರಣೆ

ಮಂಜೂರಿ–ಒಪ್ಪಿಗೆ (ಸಮ್ಮತಿ), ತಿದ್ದುಪಡಿ–ಸುಧಾರಣೆ, ಠರಾವ–ಗೊತ್ತುವಳಿ, ಖಟ್ಲೆ–ವ್ಯಾಜ್ಯ (ಮೊಕದ್ದಮೆ), ಇನಸಾಫ–ನ್ಯಾಯ, ನೆಸ್–ಲೋಕಲಫಂಡು.



# ಪ್ರಕರಣ ೨

## ಪಂಚಾಯತಗಳ ಸ್ಥಾಪನೆ ಮತ್ತು ರಚನೆ

**ಪ್ರಕರಣದ ಪ್ರಸ್ತಾವನೆ :—**

ಇಪ್ಪತ್ತನೆಯ ಶತಮಾನದಲ್ಲಿ ಹಿಂದುಸ್ಥಾನದ ರಾಜ್ಯಕಾರಭಾರದೊಳಗೆ ಎರಡು ಕಾಲಾವಧಿಗಳು ಆಗುತ್ತವೆ. ಸ್ವರಾಜ್ಯದ ಪ್ರಾಪ್ತಿಯ ಪೂರ್ವದಕಾಲ ಮತ್ತು ಸ್ವರಾಜ್ಯ ಪ್ರಾಪ್ತಿಯ ನಂತರದ ಕಾಲ. ಸ್ವರಾಜ್ಯಪ್ರಾಪ್ತಿಯ ಪೂರ್ವದಲ್ಲಿ ಅಂದರೆ ೧೫ ಆಗಷ್ಟ ೧೯೪೭ ನೇ ಇಸ್ವಿಯ ಪೂರ್ವದಲ್ಲಿ ಬ್ರಿಟಿಶರು ರಾಜ್ಯಕಾರಭಾರವನ್ನು ಸಾಗಿಸುತ್ತಿದ್ದರು ಮತ್ತು ಗ್ರಾಮಪಂಚಾಯತಿಯ ಕಾರಭಾರವು ಬ್ರಿಟಿಶ ಸತ್ತೆಯ ಧೋರಣದಂತೆ ನಡೆಯುತ್ತಿತ್ತು. ಸತ್ತೆಯ **ಕೇಂದ್ರೀಕರಣವು ಬ್ರಿಟಿಶ ರಾಜ್ಯನೀತಿಯ ಅಡಿಗಲ್ಲಾಗಿದ್ದಿತು.** ಎಲ್ಲ ಅಧಿಕಾರಗಳು ತಮ್ಮ ಕೈಯೊಳಗಿರಬೇಕೆಂದು

ಪರಕೀಯ ಸರಕಾರದವರಿಗೆ ಅನಿಸುವದು ಅವರ ಸುರಕ್ಷಿತತೆಯ ದೃಷ್ಟಿಯಿಂದ ಸ್ವಾಭಾವಿಕವಾಗಿದೆ.

ಸ್ವರಾಜ್ಯ ಪ್ರಾಪ್ತಿಯ ತರುವಾಯ ೧೯೪೯ನೆಯ ಇಸವಿಯ ನವ್ಹೆಂಬರ ೨೬ ನೆಯ ತಾರೀಖಿನ ದಿವಸ ಹಿಂದುಸ್ಥಾನದ ರಾಜ್ಯಘಟನೆಯು ಸಿದ್ಧವಾಯಿತು. ಹಿಂದುಸ್ಥಾನದ ರಾಜ್ಯಘಟನೆಯ ೪೦ ನೆಯ ಕಲಮಿನ ಪ್ರಕಾರ ರಾಜ್ಯದಲ್ಲಿ ಗ್ರಾಮಪಂಚಾಯತಿಗಳ ಸ್ಥಾಪನೆ ಮಾಡಿ, ಸ್ಥಾನಿಕ ಸ್ವರಾಜ್ಯದ ಘಟಕವೆಂದು ಕೆಲಸ ಸಾಗಿಸಲಿಕ್ಕೆ ಅವಶ್ಯವಾಗಿರುವ ಅಧಿಕಾರ ಮತ್ತು ಸೂತ್ರಗಳನ್ನು ಅವುಗಳ ಕೈಯಲ್ಲಿ ಕೊಡಬೇಕು, ಎಂದು ಜಾಹೀರಮಾಡುವದರಲ್ಲಿ ಬಂದಿದೆ ಸತ್ತೆಯ ವಿಕೇಂದ್ರೀಕರಣವು ಸ್ವರಾಜ್ಯದೊಳಗಿನ ರಾಜ್ಯಕಾರಭಾರದ ಧೋರಣವಾಗಿದೆ.

ಈ ಧೋರಣದ ಅನುಸಾರವಾಗಿ ಗ್ರಾಮಪಂಚಾಯತಿಯ ರಚನೆಯ ಸಂಬಂಧದಲ್ಲಿ ಸುಧಾರಣೆ ಮಾಡಲಾಗಿದೆ ಬ್ರಿಟಿಶರ ಅಮಲಿನಲ್ಲಿ ಸರಕಾರದ ನೌಕರರು ಗ್ರಾಮದ ಪೋಲೀಸರು ಮತ್ತು ಮುಲ್ಕೀ ಗೌಡರಿಗೆ ಗ್ರಾಮಪಂಚಾಯತಿಯ ಸಭಾಸದತ್ವವು ಹಕ್ಕಿನಿಂದಲೇ ಪ್ರಾಪ್ತವಾಗುತ್ತಿದ್ದಿತು. ಆದರೆ ಸ್ವರಾಜ್ಯದೊಳಗಿನ ಗ್ರಾಮಪಂಚಾಯತಿಯ ಕಾಯದೆಯೊಳಗಿನ ಕಲಮು ೮ (ಜೆ) ಇದರಂತೆ ಮುಲ್ಕೀ ಅಥವಾ ಪೋಲೀಸಗೌಡನು ಪಂಚಾಯತಿಯ ಸಭಾಸದತ್ವದ ಸಂಬಂಧದಲ್ಲಿ ಉಮೇದವಾರನೆಂದು ಸಹ ನಿಲ್ಲಬಾರದು.

ಸ್ವರಾಜ್ಯದ ಪೂರ್ವದ ಧೋರಣ ಹಾಗೂ ಸ್ವರಾಜ್ಯದ ನಂತರದ ನೀತಿ ಇವು ಈ ರೀತಿಯಾಗಿರುವವು ಎಲ್ಲ ಸತ್ತೆಯನ್ನು ಜನತೆಯ ಸ್ವಾಧೀನಮಾಡಬೇಕೆಂಬ ಉದ್ದೇಶವು ಹೇಗೆ ಸದ್ಯದ ಕಾಯದೆಯಿಂದ ಸ್ಪಷ್ಟವಾಗಿರುವದೋ ಹಾಗೆಯೇ ಸರ್ವಸತ್ತೆಯು ತಮ್ಮ ಕೈಯಲ್ಲಿಯೇ ಇರಬೇಕೆಂಬ ಬ್ರಿಟಿಶ ಸರಕಾರದ ಉದ್ದೇಶವು ಪೂರ್ವದ ಕಾಯದೆಗಳಿಂದ ಸ್ಪಷ್ಟವಾಗುತ್ತದೆ

**ಪ್ರಕರಣ ರೂಪರೇಷೆ**—ಗ್ರಾಮಪಂಚಾಯತಿಯ ಕಾಯದೆಯ ಉದ್ದೇಶವು ಹಳ್ಳಿಯೊಳಗಿನ ಪ್ರದೇಶದಲ್ಲಿ ಸ್ಥಾನಿಕ ಸ್ವರಾಜ್ಯದ ಸ್ಥಾಪನೆಮಾಡುವದು ಇರುತ್ತದೆ ಈ ಉದ್ದೇಶಕ್ಕೆ ಸರಿಯಾಗಿ ಮುಂಬಯಿ ಇಲಾಖೆ ತುಂಬ ಗ್ರಾಮಪಂಚಾಯತಗಳ ಸ್ಥಾಪನೆಯಾಗತಕ್ಕದ್ದಿರುತ್ತದೆ ಯಾವ ಯಾವ ಊರುಗಳಲ್ಲಿ ಗ್ರಾಮಪಂಚಾಯತಿಗಳನ್ನು ಸ್ಥಾಪಿಸತಕ್ಕದ್ದೆಂಬದನ್ನು ಪ್ರಾಂತಿಕ ಸರಕಾರವು ಗೊತ್ತುಪಡಿಸುವದು ಮತ್ತು ಅದರಂತೆ ಜಾಹೀರಮಾಡುವದು ಇಂಥ ಇಂಥ ಗ್ರಾಮಗಳಲ್ಲಿ ಗ್ರಾಮಪಂಚಾಯತಿಯ ಸ್ಥಾಪನೆ ಆಗುವದೆಂದು ಗೊತ್ತಾದ ಮೇಲೆ ಆಯಾ ಊರುಗಳ

ಗ್ರಾಮಪಂಚಾಯತಿಯ ಸಭಾಸದರ ಸಂಖ್ಯೆ ನಿಶ್ಚಿತವಾಗುವದು. ಅದರಂತೆ ಯಾವ ಧರ್ಮದ ಜನರಿಗಾಗಿ ಇಲ್ಲವೆ ಯಾವ ಜಾತಿಯ ಜನರಿಗಾಗಿ ಎಷ್ಟು ಸ್ಥಳಗಳನ್ನು ಕಾಯ್ದಿಡತಕ್ಕದ್ದೆಂಬದನ್ನೂ ಪ್ರಾಂತಿಕ ಸರಕಾರವು ಗೊತ್ತುಮಾಡುವದು. ಗ್ರಾಮ ಪಂಚಾಯತಿಯ ಸಭಾಸದರ ಸಂಖ್ಯೆ ಹಾಗೂ ರಚನೆ ನಿಶ್ಚಿತವಾದಬಳಿಕ ಈ ಸಭಾಸದರನ್ನು ಆರಿಸುವ ಮತದಾರರು ಯಾರು ಯಾರು ಇರಬೇಕು ? ಎಂಬ ಪ್ರಶ್ನೆಯ ವಿಚಾರ. ಆ ಮೇಲೆ ಪ್ರತ್ಯಕ್ಷ ಆಯ್ಕೆ. (ಚುನಾವಣಿ )

**ಪ್ರಕರಣದೊಳಗಿನ ಮುಖ್ಯ ವಿಷಯ :—** ಯಾವ ಯಾವ ಊರುಗಳಲ್ಲಿ ಪಂಚಾಯತಿ ಸ್ಥಾಪಿಸಲಾಗುವದು ? ಆಯಾ ಗ್ರಾಮದ ಪಂಚಾಯತಿಯ ಸಭಾಸದರ ನಿಶ್ಚಿತವಾದ ಸಂಖ್ಯೆ ಎಷ್ಟು ? ಆ ಸದಸ್ಯರಲ್ಲಿ ಸ್ತ್ರೀಯರೆಷ್ಟು ? ಶೆಡ್ಯೂಲ್ಡ ಪಂಗಡಗಳ ಪ್ರತಿನಿಧಿಗಳೆಷ್ಟು ? ಶೆಡ್ಯೂಲ್ಡ ಜಾತಿಗಳ ಪ್ರತಿನಿಧಿಗಳೆಷ್ಟು ? ಚುನಾವಣೆಯಲ್ಲಿ ಮತದಾನ ಮಾಡುವ ಹಕ್ಕು ಯಾರ್‍ಯಾರಿಗೆ ? ಚುನಾವಣೆಯ ( ಆಯ್ಕೆಯ ) ನಿಯಮಗಳು ಯಾವವು ? ಸದಸ್ಯರ ಪಾತ್ರತೆ–ಅಪಾತ್ರತೆ ? ಚುನಾವಣೆಯು ಸರಿಯಾಗಿ ಆಗದಿದ್ದರೆ........? ಪಂಚಾಯತಿಯ ಸ್ಥಾಪನೆಯ ಮತ್ತು ರಚನೆಯ ವಿಷಯದಲ್ಲಿ ಜಿಲ್ಹಾ ಲೋಕಲ ಬೋರ್ಡಿನ ಹಾಗೂ ಕಲೆಕ್ಟರ ಇವರ ಅಧಿಕಾರಗಳು ಯಾವವು ?

## ೪ ಗ್ರಾಮವೆಂದು ಜಾಹೀರ ಮಾಡುವದು :—

(೧) ಠರಾಯಿಸಬಹುದಾದಂಥ ಚೌಕಶಿಯನ್ನು ಮಾಡಿದ ನಂತರ, ಯಾವದೊಂದು ಮುಲ್ಕೀ ಗ್ರಾಮವನ್ನು, ಮುಲ್ಕೀ ಗ್ರಾಮಗಳ ಗುಂಪನ್ನು ಅಥವಾ ಮುಲ್ಕೀ ಗ್ರಾಮದ ಭಾಗವಾಗಿದ್ದ ಹಳ್ಳಿಪಳ್ಳಿಗಳ ಒಂದು ಗುಂಪನ್ನು ಒಳಗೊಂಡ ಯಾವದೇ ಸ್ಥಾನಿಕ ಕ್ಷೇತ್ರದಲ್ಲಿ ಜನವಸತಿಯು ೨೦೦೦ ಕ್ಕಿಂತ ಕಡಿಮೆ ಇರುವದಿಲ್ಲವೆಂದು ಪ್ರಾಂತಿಕ ಸರಕಾರದವರಿಗೆ ಖಾತ್ರಿಯಾದರೆ, ಅವರು ಸರಕಾರೀ ಗ್ಯಾಝೀಟಿನಲ್ಲಿ ಜಾಹೀರನಾಮೆಯನ್ನು ಕೊಟ್ಟು ಇಂಥ ಸ್ಥಾನಿಕ ಕ್ಷೇತ್ರವು ಒಂದು ಗ್ರಾಮವಾಗಿರುವದೆಂದು ಜಾಹೀರಮಾಡಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಪ್ರಾಂತಿಕ ಸರಕಾರದವರು, ಸರಕಾರೀ ಗ್ಯಾಝೀಟಿನಲ್ಲಿ ಜಾಹೀರನಾಮೆಯನ್ನು ಕೊಟ್ಟು, ೨೦೦೦ ಕ್ಕಿಂತ ಕಡಿಮೆ ಜನವಸತಿಯುಳ್ಳ ಯಾವದೇ ಸ್ಥಾನಿಕ ಕ್ಷೇತ್ರವು ಈ ಕಲಮಿನನ್ವಯ ಒಂದು ಗ್ರಾಮವಾಗಿದೆಯೆಂದು ಜಾಹೀರಮಾಡಬೇಕೆಂದು ಫರ್ಮಾಯಿಸಬಹುದು.

(೨) ಪ್ರಾಂತಿಕ ಸರಕಾರದವರು ಜಿಲ್ಲಾ ಲೋಕಲ್ ಬೋರ್ಡಿನವರ ಆಲೋಚನೆಯನ್ನು ತೆಗೆದುಕೊಂಡ ನಂತರ, ಅದೇ ಪ್ರಕಾರದ ಒಂದು ಜಾಹೀರನಾಮೆಯನ್ನು ಕೊಟ್ಟು ಯಾವದೇ ಕಾಲಕ್ಕೆ:—

(ಅ) ಯಾವದೇ ಸ್ಥಾನಿಕ ಕ್ಷೇತ್ರವನ್ನು ಯಾವದೇ ಗ್ರಾಮದೊಳಗೆ ಸಹ ಸೇರ್ಪಡಿಸಬಹುದು ಅಥವಾ ಯಾವದೇ ಗ್ರಾಮದಿಂದ ಹೊರ್ತುಪಡಿಸ ಬಹುದು ಅಥವಾ ಇತರ ರೀತಿಯಿಂದ ಯಾವದೇ ಗ್ರಾಮದ ಹದ್ದುಗಳನ್ನು ಸಹ ಬದಲಿಸಬಹುದು, ಅಥವಾ

(ಬ) ಯಾವದೇ ಸ್ಥಾನಿಕ ಕ್ಷೇತ್ರವು ಗ್ರಾಮವಾಗಿರುವದು ನಿಂತು ಹೋಗಬೇಕೆಂದು ಸಹ ಜಾಹೀರಮಾಡಬಹುದು.

"ಠರಾಯಿಸಬಹುದಾದಂಥ ಚೌಕಶಿಯನ್ನು ಮಾಡಿದನಂತರ" ಆಗತಕ್ಕ ಚೌಕಶಿಯು ಸರಕಾರದವರು ಗೊತ್ತುಮಾಡಿದ (ಠರಾಯಿಸಿದ) ನಿಯಮಗಳ ಪದ್ಧತಿಯಿಂದ ಆಗತಕ್ಕದ್ದು. ಠರಾಯಿಸಿದ ಈ ಶಬ್ದದ ಅರ್ಥಕ್ಕಾಗಿ, ಮೇಲೆ ಕೊಟ್ಟ ವ್ಯಾಖ್ಯೆಯ ಕಲಮು ೩ ಪೋಟ ಕಲಮು ೮ ಮತ್ತು ೧೦ ನೋಡಿರಿ.

ಹದ್ದು ಅಂದರೆ ಸೀಮೆ ಅಥವಾ ಮೇರೆ.

## ಸರಕಾರದ ಗೊತ್ತುವಳಿಗನುಸರಿಸಿ ಚೌಕಸಿ ಪದ್ಧತಿಯ ನಿಯಮಗಳು

(ಜನರಲ್ ಡಿಪಾರ್ಟಮೆಂಟ್ ನಂಬರು ಎನ್ ೧೭೪೮ ತಾ. ೨೩-೬-೧೯೪೯)

೧. ಯಾವದೇ ಸ್ಥಾನಿಕ ಕ್ಷೇತ್ರವನ್ನು, ಈ ಆಕ್ಟಿನ ೪ನೇ ಕಲಮಿನ ೧ನೇ ಪೋಟ-ಕಲಮಿನನ್ವಯ ಗ್ರಾಮವೆಂದು ಜಾಹೀರಮಾಡಬೇಕೆಂದು ಯೋಚಿಸಿದಾಗೆಲ್ಲ, ಕಲೆಕ್ಟರನು ಇಂಥ ಸ್ಥಾನಿಕ ಕ್ಷೇತ್ರದ ಜನಸಂಖ್ಯೆಯನ್ನು ಹಾಗೂ ವಿಸ್ತೀರ್ಣವನ್ನು, ಮತ್ತು ಇಂಥ ಸ್ಥಾನಿಕ ಕ್ಷೇತ್ರವು ಮುಲ್ಕೀಗ್ರಾಮವಾಗಿರುವದೋ ಅಥವಾ ಮುಲ್ಕೀ ಗ್ರಾಮಗಳ ಸಮುದಾಯವಾಗಿರುವದೋ ಅಥವಾ ಮುಲ್ಕೀಗ್ರಾಮದ ಭಾಗವಾಗಿರುವ ಕೇರಿಗಳಾಗಿರುವವೋ ಹ್ಯಾಗೆ ಎಂಬದನ್ನು ಖಾತ್ರಿ ಮಾಡಿಕೊಳ್ಳಲಿಕ್ಕೆ ಚೌಕಸಿ ಮಾಡತಕ್ಕದ್ದು.

೨. (೧) ಸ್ಥಾನಿಕ ಪ್ರದೇಶ— ೧೦೦೦ ಕ್ಕಿಂತ ಹೆಚ್ಚು ಜನಸಂಖ್ಯೆಯ ಮುಲ್ಕೀ ಗ್ರಾಮವಾಗಿದ್ದಾಗ್ಗೆ, ಅಥವಾ (೨) ಸ್ಥಾನಿಕ ಪ್ರದೇಶ ೧೦೦೦ ಕ್ಕಿಂತ ಕಡಿಮೆ ಜನಸಂಖ್ಯೆಯ ಮುಲ್ಕೀ ಗ್ರಾಮವಿದ್ದು ಅಲ್ಲಿಯ ೫೦ ಜನ ಪ್ರೌಢನಿವಾಸಿಗಳಾದರೂ ಲೇಖಿಮಾಗಣಿ ಮಾಡುತ್ತಿದ್ದರೆ

ಕಲೆಕ್ಟರನು ಆ ಮಾಹಿತಿಯನ್ನು "ಅ" ಪತ್ರಿಕೆಯಲ್ಲಿ ತುಂಬಿ ಸರಕಾರದವರ ಕಡೆಗೆ ಕಳಿಸತಕ್ಕದ್ದು.

೩. ಯಾವದೊಂದು ಸ್ಥಾನಿಕ ಪ್ರದೇಶದಲ್ಲಿ ಮುಲ್ಕೀ ಗ್ರಾಮಗಳ ಸಮುದಾಯವು ಒಂದುಗೂಡುವದೋ ಅಥವಾ ಮುಲ್ಕೀ ಗ್ರಾಮದ ಭಾಗವಾಗಿರುವ ಕೇರಿಗಳು ಒಂದುಗೂಡುವವೋ ಆಗ್ಗೆ,

(೧) ಕಲೆಕ್ಟರನು ಅಲ್ಲಿಯ ರಹವಾಸಿಗಳ ಬಹುಮತವನ್ನು (ಆ ಸ್ಥಾನಿಕ ಪ್ರದೇಶದ ದೆಶೆಯಿಂದ ಒಂದೇ ಗ್ರಾಮಪಂಚಾಯತದ ಸ್ಥಾಪನೆಯ ಬಗ್ಗೆ) ತಿಳಿದುಕೊಳ್ಳಬೇಕು. ಅಥವಾ (೨) ಇಂಥ ಪಂಚಾಯತಗಳು ಮೊದಲಿಗೇನೇ ಸ್ಥಾಪಿತವಾಗಿದ್ದರೆ ಅವುಗಳ ಕೆಲಸವು ಸಮಾಧಾನಕರವಾಗಿದೆಯೋ ಹೇಗೆಂಬುದನ್ನು ತಿಳಿದುಕೊಳ್ಳಬೇಕು.

೧ ಇಂಥ ಪಂಚಾಯತದ ಸ್ಥಾಪನೆಯ ಬಗ್ಗೆ ಬಹುಮತವು ಅನುಕೂಲವಿದ್ದುದು ಕಂಡುಬಂದರೆ, ಅಥವಾ

೨ ಇಂಥ ಸ್ಥಾಪನೆಯಾದ ಪಂಚಾಯತಗಳ ಕೆಲಸವು ಸಮಾಧಾನಕರವಾಗಿ ಸಾಗಿದೆ, ಎಂಬುದು ಕಂಡುಬಂದರೆ–ಕಲೆಕ್ಟರನು ಈ ಮಾಹಿತಿಯನ್ನು "ಬ" ಪತ್ರಿಕೆಯಲ್ಲಿ ತುಂಬಿ ಸರಕಾರದವರ ಕಡೆಗೆ ಕಳಿಸತಕ್ಕದ್ದು.

## ನಮೂನೆ ಅ

(೨ನೇ ಕಾನೂನವನ್ನು ನೋಡಿರಿ.)

| ಮುಲ್ಕೀ ಗ್ರಾಮದ ಹೆಸರು<br>೧ | ತಾಲೂಕು<br>೨ | ಜಿಲ್ಲೆ<br>೩ | ಮುಲ್ಕೀ ಗ್ರಾಮದ ವಿಸ್ತೀರ್ಣ<br>೪ | ಮುಲ್ಕೀ ಗ್ರಾಮದ ಜನಸಂಖ್ಯೆ<br>೫ | ಕಲೆಕ್ಟರನ ಶರಾಗಳು<br>೬ |
|---|---|---|---|---|---|
| | | | | | |

ಕಲೆಕ್ಟರ

# ನಮೂನೆ ಬ

(೩ನೇ ಕಾನೂನವನ್ನು ನೋಡಿರಿ.)

| ಸ್ಥಾನಿಕ ಕ್ಷೇತ್ರದಲ್ಲಿ ಒಳಗೊಂಡಿರುವ ಗ್ರಾಮಗಳ ಅಥವಾ ಕೇರಿಗಳ ಹೆಸರುಗಳು | ತಾಲೂಕು | ಜಿಲ್ಹೆ | ಸ್ಥಾನಿಕ ಕ್ಷೇತ್ರದ ವಿಸ್ತೀರ್ಣ, ಮತ್ತು ಸ್ಥಾನಿಕ ಕ್ಷೇತ್ರವು ಮುಲ್ಕೀ ಗ್ರಾಮುಗಳ ಭಾಗಗಳನ್ನು ಮತ್ತು ಕೇರಿಗಳನ್ನು ಒಳಗೊಂಡಿದ್ದಾಗ ಸರ್ವೆ ನಂಬರುಗಳನ್ನು ಕೊಡಬೇಕು. | ಸ್ಥಾನಿಕ ಕ್ಷೇತ್ರದ ಜನಸಂಖ್ಯೆ | ಕಲೆಕ್ಟರನ ಶರಾಗಳು |
|---|---|---|---|---|---|
| ೧ | ೨ | ೩ | ೪ | ೫ | ೬ |
| | | | | | |

ಕಲೆಕ್ಟರ

## ೫. ಪಂಚಾಯತಗಳ ಸ್ಥಾಪನೆ :—

**೪ನೇ ಕಲಮಿನನ್ವಯ ಗ್ರಾಮವೆಂದು ಜಾಹೀರ ಮಾಡಲ್ಪಟ್ಟ ಪ್ರತಿಯೊಂದು ಗ್ರಾಮದಲ್ಲಿ ಒಂದು ಪಂಚಾಯತವು ಇರಬೇಕು.**

ಕ. ೪ (೧) ಇದರಂತೆ ಎರಡು ಸಾವಿರ ಅಥವಾ ಅದಕ್ಕೂ ಹೆಚ್ಚು ಜನಸಂಖ್ಯೆ ಇರುವ ಗ್ರಾಮಗಳಲ್ಲಿ ಪಂಚಾಯತಿಯನ್ನು ಸ್ಥಾಪಿಸುವ ಜವಾಬದಾರಿಯು ಸರಕಾರದ ಮೇಲೆ **ಕಾಯದೆಯಂತೆಯೇ** ಬೀಳುತ್ತದೆ.

ಸಾವಿರ ಅಥವಾ ಅದಕ್ಕೂ ಹೆಚ್ಚಾಗಿರುವ ಜನಸಂಖ್ಯೆಯ ಗ್ರಾಮಗಳಲ್ಲಿ ಪಂಚಾಯತಿಯನ್ನು ಸ್ಥಾಪಿಸುವ ಜವಾಬದಾರಿಯು, ಸರಕಾರವು ಜಾಹೀರಪಡಿಸಿದ **ಧೋರಣದಿಂದ** ಸರಕಾರದ ಮೇಲೆ ಬೀಳುತ್ತದೆ

ಸರಕಾರಿ ಠರಾವ ನಂ ೫೫೬೮—೩೩ ತಾ. ೧೮-೫-೪೮

ಅ. ಒಂದು ಸಾವಿರ ಇಲ್ಲವೆ ಅದಕ್ಕೂ ಹೆಚ್ಚಾಗಿರುವ ಜನಸಂಖ್ಯೆಯುಳ್ಳ ಗ್ರಾಮಗಳಲ್ಲಿ ಪಂಚಾಯತಿ ಸ್ಥಾಪಿಸಬೇಕು.

ಬ ಸಾವಿರಕ್ಕಿಂತ ಕಡಿಮೆಯಾಗಿರುವ ಜನಸಂಖ್ಯೆಯುಳ್ಳ ಹಳ್ಳಿಯ ತೀರ ಕಡಿಮೆಯೆಂದರೆ ೩೦ ಕ್ಕಿಂತಲೂ ಹೆಚ್ಚಾಗಿರುವ ಸಂಖ್ಯೆಯ ಪ್ರೌಢನಿವಾಸಿಗಳು ಪಂಚಾಯತಿಯ ಬಗ್ಗೆ ಲೇಖೀಬೇಡಿಕೆ ಮಾಡಿಕೊಂಡರೆ ಆ ಪಂಚಾಯತಿಯ ಸ್ಥಾಪನೆಯನ್ನು ಮಾಡಬೇಕು

ಸರಕಾರದ ಈ ಠರಾವಿನ ಅನುಸಾರವಾಗಿ ಮುಂಬಯಿಯ ರಾಜ್ಯ ಸರಕಾರವು ಜಿಲ್ಹಾಧಿಕಾರಿಗಳಿಗೆ— ಕಲೆಕ್ಟರರಿಗೆ— ಆದೇಶ ಕಳಿಸಿರುವದು

ಈ ಪ್ರಕಾರ ಕರ್ನಾಟಕದಲ್ಲಿ ಸುಮಾರು ೧೦೦೦ ಗ್ರಾಮಪಂಚಾಯತಿಗಳು ಸ್ಥಾಪನೆಯಾಗತಕ್ಕವಿವೆ.

## ೬. ಪಂಚಾಯತಗಳ ರಚನೆ :—

**(೧) ಯಾವದೊಂದು ಪಂಚಾಯತದಲ್ಲಿ, ಕಲೆಕ್ಟರನು ಠರಾಯಿಸಬಹುದಾದಷ್ಟು ಸಂಖ್ಯೆಯ ಚುನಾಯಿಸಲ್ಪಟ್ಟ ಸಭಾಸದರು ಇರತಕ್ಕದ್ದು. ಮತ್ತು ಈ ಸಂಖ್ಯೆಯು ಏಳಕ್ಕಿಂತ ಕಡಿಮೆ ಮತ್ತು ಹದಿನೈದಕ್ಕಿಂತ ಹೆಚ್ಚಾಗಿರಕೂಡದು.**

**ಪ್ರಾಂತಿಕ ಸರಕಾರದವರು ೧೦೪ನೇ ಕಲಮಿನ (೧)ನೇ ಪೋಟಕಲಮಿನ (ಬ) ರಕಮಿನನ್ವಯ ಠರಾಯಿಸಬಹುದಾದ ಸಂಖ್ಯೆಯಷ್ಟು ಸ್ಥಳಗಳನ್ನು**

ಹೆಂಗಸರ, ಶೆಡ್ಯೂಲ್ಡ ಜಾತಿಗಳ ಹಾಗೂ ಶೆಡ್ಯೂಲ್ಡ ಪಂಗಡಗಳ ಪ್ರತಿನಿಧಿಗಳ ಸಲುವಾಗಿ ಇಂಥ ಯಾವದೇ ಪಂಚಾಯತದಲ್ಲಿ ಕಾದಿಡಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಗ್ರಾಮದಲ್ಲಿಯ ಶೆಡ್ಯೂಲ್ಡ ಜಾತಿಗಳ ಹಾಗೂ ಶೆಡ್ಯೂಲ್ಡ ಪಂಗಡಗಳ ಜನಸಂಖ್ಯೆಯು ಪ್ರಮಾಣದ ಮೇಲಿಂದ ಇಂಥ ಜಾತಿಗಳ ಹಾಗೂ ಪಂಗಡಗಳ ಸಲುವಾಗಿ ಸ್ಥಳಗಳನ್ನು ಕಾದಿಡುವದು ಅವಶ್ಯವೆಂದು ಪ್ರಾಂತಿಕ ಸರಕಾರದವರು ಅಭಿಪ್ರಾಯಪಟ್ಟ ಹೊರ್ತು, ಇಂಥವರ ಸಲುವಾಗಿ ಯಾವದೇ ಸ್ಥಳವನ್ನು ಕಾದಿಡತಕ್ಕದ್ದಲ್ಲ

(೧೮) (೧) ನೇ ಪೋಟ-ಕಲಮಿನಲ್ಲಿ ಯಾವದೇ ಮಜಕೂರು ಇದ್ದಾಗ್ಯೂ, ಹೆಂಗಸರ, ಶೆಡ್ಯೂಲ್ಡ ಜಾತಿಗಳ ಹಾಗೂ ಶೆಡ್ಯೂಲ್ಡ ಪಂಗಡಗಳ ಸಲುವಾಗಿ ೧೦ಲನೇ ಕಲಮಿನ (೧) ನೇ ಪೋಟ-ಕಲಮಿನ (ಬ) ರಕಮಿನನ್ವಯ ಠರಾಯಿಸಲ್ಪಟ್ಟ ಸ್ಥಳಗಳನ್ನು ಕಾದಿಡೋಣವು, ಭಾರತದ ರಾಜ್ಯಘಟನೆಯು ಪ್ರಾರಂಭದಿಂದ ಹತ್ತುವರ್ಷಗಳ ಅವಧಿಯು ಮುಗಿದ ಬಳಿಕ ಅಮಲಿನಲ್ಲಿರುವದು ನಿಂತು ಹೋಗತಕ್ಕದ್ದು;

ಆದರೆ ಗೊತ್ತುಪಡಿಸುವದೇನಂದರೆ, ಈ ಕಲಮಿನಲ್ಲಿಯ ಯಾವದೇ ಮಜಕೂರಿನ ಮೇಲಿಂದ, ಇಂಥ ಕಾದಿಟ್ಟ ಸ್ಥಳಗಳ ಪೈಕಿ ಯಾವದೇ ಸ್ಥಳಕ್ಕೆ ಚುನಾಯಿಸಲ್ಪಟ್ಟ ಯಾವದೇ ವ್ಯಕ್ತಿಯು, ಯಾವ ಹುದ್ದೆಯ ಸಲುವಾಗಿ ಅವನು ಅಥವಾ ಅವಳು ಕಾಯದೇಶೀರವಾಗಿ ಚುನಾಯಿಸಲ್ಪಟ್ಟಿದ್ದನೋ ಅಥವಾ ಚುನಾಯಿಸಲ್ಪಟ್ಟಿದ್ದಳೋ ಅಂಥ ಹುದ್ದೆಯ ಅವಧಿಯಲ್ಲಿ ಸಭಾಸದನೆಂದು ಅಥವಾ ಸಭಾಸದಳೆಂದು ಉಳಿಯಲಿಕ್ಕೆ, ಸ್ಥಳಗಳನ್ನು ಕಾದಿಡೋಣವು ಹೀಗೆ ಅಮಲಿನಲ್ಲಿರುವದು ನಿಂತುಹೋಗಿದೆಯೆಂಬ ಕಾರಣ ದಿಂದ ಮಾತ್ರ ಅನರ್ಹವಾಗತಕ್ಕದ್ದಲ್ಲ.

ಭಾರತದ ರಾಜ್ಯಘಟನೆಯು ೧೯೪೯ ನೆಯ ನವ್ಹೆಂಬರ ೨೬ನೆಯ ತಾರೀಖಿನ ದಿವಸ ಸಿದ್ಧವಾಯಿತು ಅಂದಿನಿಂದ ೧೦ ವರ್ಷಗಳ ವರೆಗೆ, ಈ ಹೆಂಗಸರ ಹಾಗೂ ಶೆಡ್ಯೂಲ್ಡ ಜಾತಿಗಳ ಹಾಗೂ ಪಂಗಡಗಳ ಸಲುವಾಗಿ ಸ್ಥಳಗಳನ್ನು ಕಾದಿಡುವದು ಅಮಲಿನಲ್ಲಿರುವದು. ಆದರೆ ಈ ೧೦ ವರ್ಷಗಳು ಮುಗಿಯುವ ದಿವಸ ಸಭಾಸದ ನೆಂದು ಅಥವಾ ಸಭಾಸದಳೆಂದು ಹುದ್ದೆಯಲ್ಲಿ ಉಳಿದವರಿಗೆ ಇದರಿಂದ ಬಾಧೆ ತಟ್ಟು ವದಿಲ್ಲ ಅಂಥವರು ಆ ಕಾಲದ ಪಂಚಾಯತಿಯ ಅವಧಿ ಇರುವ ವರೆಗೂ ಆ ಹುದ್ದೆ ಯಲ್ಲಿ ಉಳಿಯುವರು. ಆದರ ಮುಂದೆ ಮಾತ್ರ ಈ ಸವಲತ್ತು ಸಿಗಲಾರದು

(೨) ಕಲೆಕ್ಟರನು, ಯಾವದೊಂದು ಪಂಚಾಯತದ ಚುನಾಯಿಸಲ್ಪಟ್ಟ ಸಭಾಸದರ ಸಂಖ್ಯೆಯು ಏಳಕ್ಕಿಂತ ಹೆಚ್ಚಿರಬೇಕೆಂದು ನಿರ್ಣಯಿಸಿದಾಗ್ಗೆ,

ಏಳಕ್ಕಿಂತ ಹೆಚ್ಚು ಜನ ಸಭಾಸದರನ್ನು ಚುನಾಯಿಸಲಿಕ್ಕೆ ತಪ್ಪುವದರಿಂದ ಪಂಚಾಯತದ ರಚನೆಗೆ ಬಾಧೆ ಬರಲಾರದು.

(೩) ಯಾವದೇ ಕಾರಣದ ಮೂಲಕ ಹುದ್ದೆಯನ್ನು ಧಾರಣ ಮಾಡುವದಕ್ಕೆ ಸಮ್ಮತಿಸುವ ಯೋಗ್ಯತೆಗಳುಳ್ಳ ಜನರು ಚುನಾವಣೆಯಲ್ಲಿ ಆವಶ್ಯ ಸಂಖ್ಯೆಯಲ್ಲಿ ಚುನಾಯಿಸಲ್ಪಡದಿದ್ದರೆ, ಜಿಲ್ಹಾ ಲೋಕಲ್ ಬೋರ್ಡಿನ ಸ್ಥಾಯಿಾ ಸಮಿತಿಯು, ಚುನಾಯಿಸಲ್ಪಟ್ಟ ಸಭಾಸದರ ಹೆಸರುಗಳನ್ನು ಠರಾಯಿಸಿದ ರೀತಿಯಿಂದ ಕಲೆಕ್ಟರನು ಪ್ರಸಿದ್ಧಿಸಿದ ತಾರೀಖಿನಿಂದ ಎಂಟು ವಾರಗಳೊಳಗೆ, ಚುನಾಯಿಸಲ್ಪಡಲಿಕ್ಕೆ ಯೋಗ್ಯರಾಗಿರಬಹುದಾಗಿದ್ದಂಥ ಆವಶ್ಯವಿರುವ ಸಂಖ್ಯೆಯಷ್ಟು ಜನರನ್ನು ನೇಮಿಸಬೇಕು. ಜಿಲ್ಹಾ ಲೋಕಲ್ ಬೋರ್ಡಿನ ಸ್ಥಾಯಿಾ ಸಮಿತಿಯು ಇಂಥ ಎಲ್ಲ ನೇಮಣೂಕುಗಳನ್ನು ಅಥವಾ ಅವುಗಳ ಪೈಕಿ ಯಾವದೊಂದನ್ನು ಠರಾಯಿಸುವ ಅವಧಿಯೊಳಗೆ ಮಾಡಲಿಕ್ಕೆ ತಪ್ಪಿದರೆ, ಕಲೆಕ್ಟರನು ಇಂಥ ನೇಮಣೂಕುಗಳನ್ನು ಮಾಡಬೇಕು ; ಮತ್ತು ಹೀಗೆ ನೇಮಿಸಲ್ಪಟ್ಟ ಜನರು (೧) ನೇ ಪೋಟ-ಕಲಮಿನನ್ವಯ ಯೋಗ್ಯವಾಗಿ ಚುನಾಯಿಸಲ್ಪಟ್ಟಿರುವರೆಂದು ತಿಳಿಯಬೇಕು.

[ಯಾವದೇ ಕಾರಣದಿಂದ, ಚುನಾವಣೆಯಲ್ಲಿ ಪಂಚಾಯತಿಯ ಸಭಾಸದರಾಗಲು ಅರ್ಹತೆಯುಳ್ಳ ಜನರು, ಅವಶ್ಯವಿದ್ದಷ್ಟು ಸಂಖ್ಯೆಯಲ್ಲಿ ಆರಿಸಲ್ಪಡದಿದ್ದರೆ, ಜಿಲ್ಹಾ ಲೋಕಲ್ ಬೋರ್ಡಿನ ಸ್ಥಾಯಿಾ ಸಮಿತಿಯವರು, ಆಯ್ಕೆ ಹೊಂದಿದ ಸದಸ್ಯರ ಹೆಸರುಗಳನ್ನು ಜಿಲ್ಹಾ ಕಲೆಕ್ಟರರು ಪ್ರಸಿದ್ಧಿಸಿದ ತಾರೀಖಿನಿಂದ ೮ ವಾರಗಳೊಳಗಾಗಿ ಆಯ್ಕೆಹೊಂದಲಿಕ್ಕೆ ಅರ್ಹರಾಗಿದ್ದಂಥ ಅವಶ್ಯವಿರುವಷ್ಟು ಜನರನ್ನು ನೇಮಿಸಬೇಕು.

ಸದರೀ ಜಿಲ್ಹಾ ಲೋಕಲ್ ಬೋರ್ಡ ಸ್ಥಾಯಿಾ ಕಮೀಟಿಯವರು ಇಂಥ ನೇಮಣೂಕುಗಳನ್ನು ಗೊತ್ತುಪಡಿಸಿದ ಅವಧಿಯೊಳಗಾಗಿ ಮಾಡದಿದ್ದರೆ, ಇಂಥ ನೇಮಣೂಕುಗಳನ್ನು ಕಲೆಕ್ಟರನು ಮಾಡಬೇಕು.

ಹೀಗೆ ನೇಮಿಸಲ್ಪಟ್ಟವರೂ ಕೂಡ ೧ನೇ ಉಪಕಲಮಿನಂತೆ ಯೋಗ್ಯ ರೀತಿಯಿಂದ ಆಯ್ಕೆ ಹೊಂದಿದರೆಂದು ತಿಳಿಯಬೇಕು.]

*** ಪಂಚಾಯತಿಯಲ್ಲಿ ಎಲ್ಲ ಸದಸ್ಯರು ಚುನಾಯಿಸಲ್ಪಟ್ಟವರೇ ಇರುವರು,** ಇದು ಈ ತಿದ್ದುಪಡೆ ಹೊಂದಿದ ಕಾಯದೆಯ ವೈಶಿಷ್ಟ್ಯವು. ಅವರ ಸಂಖ್ಯೆ ತೀರ ಕಡಿಮೆಯೆಂದರೆ ೭ ಮತ್ತು ಹೆಚ್ಚೆಂದರೆ ೧೫ ಇರುವದು.

ಈ ಸಂಖ್ಯೆಯನ್ನು ಕಲೆಕ್ಟರನು ನಿಶ್ಚಿತಮಾಡುವನು. ಎಲ್ಲ ಪಂಚಾಯತಿಗಳ ಸಭಾಸದರ ಸಂಖ್ಯೆಯ ಪ್ರಮಾಣವು ಸರಿಯಾಗಿರಬೇಕೆಂದು ಮತ್ತು ಕಲೆಕ್ಟರರಿಗೆ ಮಾರ್ಗದರ್ಶಕವಾಗಬೇಕೆಂದು ಸರಕಾರದ ಠರಾವ ನಂಬರು ಎಸ್. ೨೫೬೫/೩೩ ತಾ. ೨೦-೧-೪೮ ರಲ್ಲಿ ಮಾಡಿಕೊಟ್ಟ ನಿಯಮಗಳ ವಿವರ :—

(೧) ಯಾವದೊಂದು ಪಂಚಾಯತಿಯ ಕ್ಷೇತ್ರದ ಇಲ್ಲವೆ ಗ್ರಾಮದ ಜನಸಂಖ್ಯೆ ೧೦೦೦ ಕ್ಕಿಂತ ಕಡಿಮೆಯಾಗಿದ್ದರೆ ..........೭ ಸಭಾಸದರು.

(೨) ಯಾವದೊಂದು ಪಂಚಾಯತಿಯ ಕ್ಷೇತ್ರದ ಅಥವಾ ಗ್ರಾಮದ ಜನಸಂಖ್ಯೆ ೧೦೦೦ ಕ್ಕಿಂತ ಹೆಚ್ಚು ಆದರೆ ೨೦೦೦ಕ್ಕಿಂತ ಕಡಿಮೆಯಾಗಿದ್ದರೆ........೯ ಸಭಾಸದರು.

(೩) ಯಾವದೊಂದು ಪಂಚಾಯತಿಯ ಕ್ಷೇತ್ರದ ಇಲ್ಲವೆ ಗ್ರಾಮದ ಜನಸಂಖ್ಯೆಯು ೨೦೦೦ಕ್ಕಿಂತ ಹೆಚ್ಚು ಆದರೆ ೩೦೦೦ಕ್ಕಿಂತ ಕಡಿಮೆಯಾಗಿದ್ದರೆ . ೧೧ ಸಭಾಸದರು.

(೪) ಯಾವದೊಂದು ಪಂಚಾಯತಿಯ ಕ್ಷೇತ್ರದ ಇಲ್ಲವೆ ಗ್ರಾಮದ ಜನಸಂಖ್ಯೆಯು ೩೦೦೦ ಕ್ಕಿಂತ ಹಚ್ಚು ಆದರೆ ೪೦೦೦ ಕ್ಕಿಂತ ಕಡಿಮೆ ಇದ್ದರೆ...........೧೩ ಸಭಾಸದರು

(೫) ಯಾವದೊಂದು ಪಂಚಾಯತಿಯ ಕ್ಷೇತ್ರದ ಇಲ್ಲವೆ ಗ್ರಾಮದ ಜನಸಂಖ್ಯೆಯು ೪೦೦೦ ಕ್ಕಿಂತ ಹಚ್ಚು ಇದ್ದರೆ..... ......೧೫ ಸಭಾಸದರು

**ಪಂಚಾಯತಿಯಲ್ಲಿ ಅಲ್ಪಸಂಖ್ಯಾಕರ ಹಿತಸಂರಕ್ಷಣದ ಯೋಜನೆ:—** ಪ್ರಾಂತಿಕ ಸರಕಾರವು ಠರಾಯಿಸಿದಂತೆ ಈ ಸಭಾಸದರಲ್ಲಿ ಕೆಲವು ಸ್ಥಳಗಳು ೧. ಸ್ತ್ರೀಯರು, ೨ ಶೆಡ್ಯೂಲ್ಡ ಪಂಗಡಗಳು, ೩ ಶೆಡ್ಯೂಲ್ಡ ಜಾತಿಗಳು ಇವರ ಪ್ರತಿನಿಧಿಗಳಿಗಾಗಿ ಕಾಯ್ದಿಡಲಾಗುವವು, ಆದರೆ ಇವರ ಪ್ರತಿನಿಧಿಗಳಿಗಾಗಿ ಸ್ಥಳಗಳನ್ನು ಕಾಯ್ದಿಡುವದು ಅವಶ್ಯವಿದೆಯೋ, ಇಲ್ಲವೋ ಎಂಬವನ್ನು ರಾಜ್ಯ ಸರಕಾರವು ಗೊತ್ತುಪಡಿಸುವದು.

ಮೇಲೆ ಕೊಟ್ಟ ಸರಕಾರದ ಠರಾವಿನಲ್ಲಿಯೇ ಯಾರ ಸಲುವಾಗಿ ಎಷ್ಟು ಸ್ಥಳಗಳನ್ನು ಕಾಯ್ದಿಡತಕ್ಕದ್ದು. ಈ ವಿಷಯದಲ್ಲಿ ನಿಯಮಗಳು ಗೊತ್ತುಮಾಡಲಾಗಿವೆ ಅವುಗಳ ಸಂಕ್ಷಿಪ್ತ ವಿವರಣೆ :—

೧. ಪ್ರತಿಯೊಂದು ಪಂಚಾಯತಿಯಲ್ಲಿ ಸ್ತ್ರೀ-ಪ್ರತಿನಿಧಿಯ ಸಲುವಾಗಿ ಒಂದು ಸ್ಥಳವನ್ನು ಕಾಯ್ದಿಡಲೇಬೇಕು.

೨. (ಅ) ಹಿಂದುಳಿದ ಜಾತಿಗಳ ಪ್ರತಿನಿಧಿಗಳ ಸಲುವಾಗಿ ಕಾಯ್ದಿಡತಕ್ಕ ಸ್ಥಳಗಳು.— ಈ ಸ್ಥಳಗಳ ಸಂಖ್ಯೆಯು ಆಯಾ ಜಾತಿಗಳ ಜನಸಂಖ್ಯೆಯನ್ನು ಅವಲಂಬಿಸಿರಬೇಕು.

(ಬ) ಈ ರೀತಿಯಿಂದ ಜನಸಂಖ್ಯೆಯ ಪ್ರಮಾಣದಿಂದ ಸ್ಥಳಗಳನ್ನು ಕಾಯ್ದಿಡುವಾಗ ಯಾವದೊಂದು ಜಾತಿಯ ಪಾಲಿಗೆ ಅರ್ಧ ಸ್ಥಳವು ಬರುತ್ತಿದ್ದರೆ, ಒಂದು ಸ್ಥಳವನ್ನು ಕೊಡಬೇಕು. ಅರ್ಧಕ್ಕಿಂತ ಕಡಿಮೆ ಬರುತ್ತಿದ್ದರೆ ಮಾತ್ರ ಸ್ಥಳವನ್ನು ಕಾಯ್ದಿಡಬಾರದು

(ಕ) ಇವುಗಳಲ್ಲಿ ಯಾವದೇ ಜಾತಿಯ ಜನಸಂಖ್ಯೆಯು ಎಲ್ಲಕ್ಕಿಂತ ಹೆಚ್ಚಾಗಿದ್ದರೆ, ಈ ಸ್ಥಳವನ್ನು ಕಾಯ್ದಿಡುವ ಅವಶ್ಯಕತೆಯಿರುವದಿಲ್ಲ.

(ಅಲ್ಪಸಂಖ್ಯಾಕರ ಹಿತಸಂರಕ್ಷಣಕ್ಕಾಗಿ ಈ ಕಾಯ್ದಿಡುವ ಸ್ಥಳಗಳ ಯೋಜನೆ ಇರುತ್ತದೆ. ಯಾವ ಸ್ಥಳದಲ್ಲಿ ಇವುಗಳಲ್ಲಿ ಯಾವದೊಂದು ಜಾತಿಯು ಅಲ್ಪಸಂಖ್ಯಾಕವಿರದೆ ಬಹುಸಂಖ್ಯಾಕವಾಗಿರುತ್ತದೋ ಆ ಸ್ಥಳದಲ್ಲಿ ಅವರ ಸಲುವಾಗಿ ಸ್ಥಳವನ್ನು ಕಾಯ್ದಿಡುವ ಅವಶ್ಯಕತೆಯಿರುವದಿಲ್ಲ.)

(ಡ) ಯಾವದೇ ಪರಿಸ್ಥಿತಿಯಲ್ಲಿ ಎಲ್ಲ ಸಭಾಸದರ ಸಂಖ್ಯೆಯ ಅರ್ಧಕ್ಕಿಂತ ಹೆಚ್ಚು ಸ್ಥಳಗಳು "ಕಾಯ್ದಿಡುವಂಥವು" ಇರಬಾರದು.

ಮುಂಬಯಿ ರಾಜ್ಯದೊಳಗಿನ ಯಾವ ಯಾವ ಗ್ರಾಮಗಳಲ್ಲಿ ಪಂಚಾಯತಿಯು ಸ್ಥಾಪನೆಯಾಗತಕ್ಕದ್ದಿದೆ ಎಂದು ರಾಜ್ಯ ಸರಕಾರವು ಜಾಹೀರ ಪಡಿಸುವದೋ, ಆಯಾ ಗ್ರಾಮದ ಪಂಚಾಯತಿಯ ಎಲ್ಲ ಸಭಾಸದರ ಸಂಖ್ಯೆ ಎಷ್ಟು, ಮತ್ತು ಅದರಲ್ಲಿ (೧) ಸ್ತ್ರೀಯರು, (೨) ಶೆಡ್ಯೂಲ್ಡ ಪಂಗಡಗಳು (೩) ಶೆಡ್ಯೂಲ್ಡ ಜಾತಿಗಳು ಇವರ ಪ್ರತಿನಿಧಿಗಳ ಸಲುವಾಗಿ ಕಾಯ್ದಿಟ್ಟ ಸ್ಥಳಗಳೆಷ್ಟು, ಎಂಬದನ್ನು ಸರಕಾರದವರು ಮೇಲಿನ ನಿಯಮಗಳಿಗನುಸಾರವಾಗಿ ಗೊತ್ತು ಮಾಡಿ, ಪ್ರತಿಯೊಂದು ಜಿಲ್ಹೆಯೊಳಗಿನ ಗ್ರಾಮಪಂಚಾಯತಿಗಳ ಬಗ್ಗೆ ಕಾಲಕಾಲಕ್ಕೆ ಸರಕಾರದ ಗ್ಯಾಝೆಟ್ಟಿನಲ್ಲಿ ಕಲಮುಗಳಂತೆ ಯಾದಿಗಳನ್ನು ಪ್ರಕಟಿಸುತ್ತಾರೆ. ಅದರ ಮೇಲಿಂದ ಬೆಳಗಾಂವ, ಧಾರವಾಡ ಇಲ್ಲವೆ ಬೇರೆ ಯಾವದೇ ಜಿಲ್ಹೆಯ ಇಂಥದೊಂದು ಊರಲ್ಲಿ ಪಂಚಾಯತಿಯು ಇದೆಯೋ, ಇಲ್ಲವೋ ಇದ್ದರೆ ಆ ಎಲ್ಲ ಪಂಚಾಯತಿಗಳ ಸದಸ್ಯರ ಸಂಖ್ಯೆಯೆಷ್ಟು ? ಹಿಂದುಳಿದ ಜಾತಿಗಳ ಪ್ರತಿನಿಧಿಗಳ ಸಂಖ್ಯೆಯೆಷ್ಟು ? ಮೊದಲಾದ ಸಂಗತಿಗಳು ತಿಳಿಯುತ್ತವೆ.

(೨) ಕಲೆಕ್ಟರನು ಗೊತ್ತುಮಾಡಿದ ಸಂಖ್ಯೆಗಿಂತ ಕಡಿಮೆ ಆದರೆ ೭ ಕ್ಕಿಂತ ಕಡಿಮೆ ಅಲ್ಲದಷ್ಟು ಪ್ರತಿನಿಧಿಗಳು ಚುನಾಯಿಸಿ ಬಂದರೆ, ಪಂಚಾಯತಿಯ ರಚನೆಗೆ ಬಾಧೆ ಬರುವದಿಲ್ಲ.

(೩) ಯೋಗ್ಯ ಇಸಮು........ಆದರೆ—

**ಉದಾಹರಣೆ:—** ಧಾರವಾಡ ಜಿಲ್ಲೆಯೊಳಗಿನ ಹೆಬ್ಬಳ್ಳಿಯನ್ನು ತೆಗೆದು **ಕೊಳ್ಳೋಣ.** ಪ್ರಾಂತಿಕ ಸರಕಾರದವರು ಈ ಗ್ರಾಮದ ಪಂಚಾಯತಿಯಲ್ಲಿ ಸ್ತ್ರೀಯರಿಗಾಗಿ ೧. ಹಿಂದುಳಿದ ಜಾತಿಗಳ ಪ್ರತಿನಿಧಿಗಾಗಿ ೧ ಹೀಗೆ ೨ ಸ್ಥಳಗಳನ್ನು ಕಾಯ್ದಿಟ್ಟಿರುವರು; ಮತ್ತು **ಚುನಾವಣೆಯು** ಸಲುವಾಗಿ ಆ ವೈಕಿ ಹುರಿಯಾಳು (ಉಮೇದವಾರ) ಒಬ್ಬನೂ ಕೂಡ ನಿಲ್ಲದಿದ್ದರೆ, ಜಿಲ್ಹೆಯ ಲೋಕಲ್ ಬೋರ್ಡಿಗೆ ಆ ಪಂಚಾಯತಿಯಲ್ಲಿ ಒಬ್ಬ ಹಿಂದುಳಿದ ಜಾತಿಯವನನ್ನು ನೇಮಿಸಲಿಕ್ಕೆ ಬರುವದು. ಜಿಲ್ಹಾ ಲೋಕಲ್ ಬೋರ್ಡಿನ ಸ್ಟ್ಯಾಂಡಿಂಗ ಕಮೀಟಿಯವರು ನೇಮಿಸದಿದ್ದರೆ ಕಲೆಕ್ಟರನು ನೇಮಿಸಬೇಕು

ಇದೇ ಮಾತು ಸ್ತ್ರೀ ಪ್ರತಿನಿಧಿಗಳಿಗೂ ಅನ್ವಯಿಸುತ್ತದೆ. (ಲಾಗೂ ಆದೆ)

೭. **ಚುನಾವಣೆ :— (೧) ಪಂಚಾಯತದ ಸಭಾಸದರ ಚುನಾವಣೆಯು** ಕಲೆಕ್ಟರನು ಈ ಬಗ್ಗೆ ನೇಮಿಸಬಹುದಾದ ತಾರೀಖಿನ ದಿವಸ ನಡಿಸಲ್ಪಡಬೇಕು.

(೨) ಸದರೀ ಗ್ರಾಮುದಲ್ಲಿ ವಾಡಿಕೆಯಾಗಿ ವಾಸಮಾಡುವ ಯಾವ ವರ್ಷದಲ್ಲಿ ಮತದಾರರ ಯಾದಿಯು ತಯಾರಿಸಲ್ಪಟ್ಟಿರುತ್ತದೆಯೋ ಅಂಥ ವರ್ಷದ ಜಾನೇವರಿ ತಿಂಗಳ ೧ನೇ ತಾರೀಖಿನ ದಿವಸ ಯಾವನಿಗೆ ೨೧ ವರ್ಷಗಳ ವಯಸ್ಸು ಆಗಿರುತ್ತದೆಯೋ ಮತ್ತು ಯಾವನು ಸದರೀ ಗ್ರಾಮುದಲ್ಲಿ ವಾಡಿಕೆಯಾಗಿ ವಾಸ ಮಾಡುತ್ತಾನೋ ಅಥವಾ ಸದರೀ ಗ್ರಾಮುದಲ್ಲಿ ಮನೆ ಪಟ್ಟಿಯು ಆಕರಿಸಲ್ಪಟ್ಟಿರುವಂಥ ಮನೆಯ ಮಾಲಕನಾಗಿರುತ್ತಾನೋ ಅಥವಾ ಸನ್ ೧೯೨೩ನೇ ಇಸ್ವಿಯ ಮುಂಬಯಿಯ ಲೋಕಲ್ ಬೋರ್ಡುಗಳ ವಿಷಯದ ಅಧಿನಿಯಮದ ೯೩ ನೇ ಕಲಮಿನನ್ವಯ ಯಾವದೊಂದು ಸೆಸ್ಸ ಆಕರಿಸಲ್ಪಟ್ಟಿರುವಂಥ ಭೂಮಿಯ ಮಾಲಕನಾಗಿರುತ್ತಾನೋ ಅಂಥ ಪ್ರತಿಯೊಬ್ಬ ಮನುಷ್ಯನು ಸದರೀ ಚುನಾವಣೆಯಲ್ಲಿ ಮತಕೊಡಲು ಬಾಧ್ಯಸ್ಥನಿರತಕ್ಕದ್ದು

ಇಂಥ ಚುನಾವಣೆಯು ಠರಾಯಿಸಲ್ಪಟ್ಟ ರೀತಿಯಿಂದ ನಡಿಸಲ್ಪಡತಕ್ಕದ್ದು.

(೩) ಕಲೆಕ್ಟರನು, ತನಗೆ ಅವಶ್ಯ ತೋರಬಹುದಾದ ಚೌಕಶಿಯನ್ನು ಮಾಡಿದ ಬಳಿಕ, ವಿವಾದದ ಅಥವಾ ಸಂಶಯದ ಯಾವದೇ ಪ್ರಸಂಗದಲ್ಲಿ, ಇಂಥ ಚುನಾವಣೆಯಲ್ಲಿ ಮತ ಕೊಡಲಿಕ್ಕೆ ಯಾವನು ಯೋಗ್ಯತೆಯುಳ್ಳವನೆಂಬದನ್ನು ನಿರ್ಣಯಿಸಬೇಕು.

೧. ಪಂಚಾಯತಿಯ ಚುನಾವಣೆ ತಾರೀಖನ್ನು ಕಲೆಕ್ಟರನು ಗೊತ್ತು ಮಾಡುವನು.

**ಚುನಾವಣೆಯ ಕಾಲಕ್ಕೆ ಮತಕೊಡುವ ಹಕ್ಕು ಇರುವವರು ಮತದಾರರು.**

೨ (೧) ಸಾಧಾರಣವಾಗಿ ಊರಲ್ಲಿರುವ ಪ್ರೌಢರು ಒಂದೇ ಮನೆಯೊಳಗಿನವರು ಇಲ್ಲವೆ ಬೇರ ಬೇರೆ ಮನೆಯೊಳಗಿನವರು, ಹೆಂಗಸು ಇಲ್ಲವೆ ಗಂಡಸು, ಮನೆಯ ಮಾಲಕನು ಇಲ್ಲವೆ ಬೇರೆಯವರು,

(೨) ಯಾವ ಮನೆಯ ಮೇಲೆ ಮನೆಪಟ್ಟಿ ಆಕರಿಸಲ್ಪಟ್ಟಿದೆಯೋ, ಅಂಥ ಸದರೀ ಗ್ರಾಮದೊಳಗಿನ ಮನೆಯು ಯಾರ ಮಾಲಕಿಯದು ಇರುವದೋ ಅಂಥ ಎಲ್ಲ ಪ್ರೌಢ ಸ್ತ್ರೀ ಇಲ್ಲವೆ ಪುರುಷರು. ( ಇವರಲ್ಲಿ ಊರೊಳಗೆನಿಲ್ಲದವರ ಸಮಾವೇಶವೂ ಆಗುತ್ತದೆ )

(೩) ಸನ್ ೧೯೨೩ ರ ಮುಂಬಯಿಯ ಲೋಕಲ ಬೋರ್ಡ ಆಕ್ಟಿನ ೯೩ ನೇ ಕಲಮಿನನ್ವಯ ಯಾವ ಜಮಿನಿನ ಮೇಲೆ ಸೆಸ್ (ಕರ) ಆಕಾರಣೆ ಮಾಡಲಾಗಿದೆಯೋ ಅಂಥ ಸದರೀ ಗ್ರಾಮದೊಳಗಿನ ಜಮಿನು ಯಾರ ಒಡೆತನದ್ದು (ಮಾಲಕಿಯದು) ಅದೆಯೋ ಅಂಥ ಎಲ್ಲ ಪ್ರೌಢ ಸ್ತ್ರೀ ಇಲ್ಲವೆ ಪುರುಷರು. (ಇವರಲ್ಲಿ ಊರೊಳಗೆನಿಲ್ಲದವರ ಸಮಾವೇಶವೂ ಆಗುತ್ತದೆ )

**ಪ್ರೌಢ ಅಂದರೆ ೨೧ ವರ್ಷಗಳು ತುಂಬಿದವ;**

ಮತದಾರ ಸಂಘವು ಒಂದೇ ಇದೆ. ಮುಸಲ್ಮಾನರ ಮತದಾರ ಸಂಘ ಬೇರೆ ಹರಿಜನ ಮತದಾರ ಸಂಘ ಬೇರೆ, ಶೆಡ್ಯೂಲ್ಡ ಜಾತಿ-ಪಂಗಡಗಳ ಮತದಾರ ಸಂಘ ಬೇರೆ, ಈ ಬಗೆಯ ಯೋಜನೆಯು ಈ ಕಾಯದೆಯಲ್ಲಿ ಇರುವದಿಲ್ಲ

**ಉಮೇದವಾರನು ಎಲ್ಲ ಜಾತಿಯ ಮತದಾರರಿಂದಲೂ ಆರಿಸಲ್ಪಡಬೇಕು.**

ಸೆಸ್-ಕರ (ಈ ಸ್ಥಳದಲ್ಲಿ) ಜಿಲ್ಹಾ ಲೋಕಲ್ ಬೋರ್ಡಿಗೆ ಮುಟ್ಟುವ ಭಾಗ ವೆಂದು ತಿಳಿಯಬೇಕು.

ಬೇರೆ ಬೇರೆ ಧರ್ಮಗಳ ಸಲುವಾಗಿ ಮತ್ತು ಜಾತಿಗಳ ಸಲುವಾಗಿ ಸ್ವತಂತ್ರವಾದ ಮತದಾರ ಸಂಘಗಳ ಯೋಜನೆಯಿಂದ ದೇಶದಲ್ಲಿ ರಾಷ್ಟ್ರೀಯ ಐಕ್ಯದ ಪರಿಪೋಷಣೆಯಾಗುವದಿಲ್ಲ. ಆ ಯೋಜನೆಯು ಐಕ್ಯಭಾವನೆಗೆ ಬಾಧಕ ವೆಂದೇ ಗೊತ್ತಾಗುವದು. ಇದು ಅನುಭವಸಿದ್ಧವಾದ ಸಂಗತಿಯಾಗಿದೆ. ಅಂತೆಯೇ ಸ್ವತಂತ್ರ ಮತದಾರ ಸಂಘದ ತತ್ವದ ಯೋಜನೆಯ ಸ್ವೀಕಾರವನ್ನು ಈ ಕಾಯದೆಯಲ್ಲಿ ಮಾಡಿರುವದಿಲ್ಲ. ಆದರೆ ಆದರಿಂದ ಗ್ರಾಮಪಂಚಾಯತಿಯ

ಕಾರಭಾರದಲ್ಲಿ ಹಿಂದುಳಿದ ಅಲ್ಪಸಂಖ್ಯಾಕರ ಹಿತದ ಕಡೆಗೆ ದುರ್ಲಕ್ಷ್ಯವಾದೀತು; ಎಂಬ ತಕರಾರಿಗೆ ಸ್ಥಳವು ಉಳಿಯಬಾರದು, ಅವರಿಗೆ ಪಂಚಾಯತಿಯಲ್ಲಿ ಖಂಡಿತ ವಾಗಿ ಪ್ರಾತಿನಿಧ್ಯವು ದೊರೆಯಬೇಕೆಂದು ಲೋಕಸಂಖ್ಯೆಯ ಮಾನದಿಂದ ಅವರ ವರ್ಗದ ಸಭಾಸದರ ಸಲುವಾಗಿ "ಕಾಯ್ದಿಟ್ಟ ಸ್ಥಳಗಳನ್ನು" ಇಡುವ ಸ್ವತಂತ್ರ ಯೋಜನೆಯನ್ನು ಮೇಲಿನ ೬ನೇ ಕಲಮಿನಲ್ಲಿ ಮಾಡಲಾಗಿದೆ

(೩) ಈ ಕಾಯದೆಯ ಕಲಮು ೯೫ (೩) ರ ಆಧಾರದಿಂದ ಕಲೆಕ್ಟರನ ಅಧಿಕಾರ ಬೇರೊಬ್ಬ ಅಧಿಕಾರಸ್ಥನಿಗೆ (ಅಮಲದಾರನಿಗೆ) ಒಪ್ಪಿಸುವ ಅಧಿಕಾರವನ್ನು ಪ್ರಾಂತಿಕ ಸರಕಾರಕ್ಕೆ ಕೊಡಲಾಗಿದೆ

ಪ್ರಾಂತಿಕ ಸರಕಾರವು ಎಸ್. ೧೭೪ (೩) ತಾರೀಖು ೧೩-೬-೩೫ ರ ಠರಾವಿನಿಂದ ಮತದಾರರ ಮತದಾನ ಹಕ್ಕಿನ ಸಲುವಾಗಿ-ಪಾತ್ರತೆಗಾಗಿ-ತಕರಾರಿನ ನಿರ್ಣಯವನ್ನು ಮಾಡುವ ಅಧಿಕಾರ ಆಯಾ ಮಾಮಲೇದಾರರಿಗೆ ಮತ್ತು ಮಹಾಲಕರಿಯವರಿಗೆ ಕೊಡಲಾಗಿದೆ.

"**ಚುನಾವಣೆಯನ್ನು ಠರಾಯಿಸಿದ ರೀತಿಯಿಂದ ಮಾಡಲಿಕ್ಕೆಬೇಕು.**"

"**ಠರಾಯಿಸಿದ ರೀತಿಯಿಂದ**" ಅಂದರೆ ಸರಕಾರದವರು ಈ ವಿಷಯದಲ್ಲಿ ಠರಾಯಿಸಿದ ಸರಕಾರಿ ನಿಯಮದಂತೆ.

## ೮. ನಾಲಾಯಿಖಿಗಳು :—

**ಯಾವನಾದರೂ—**

(ಅ) **ಇಪ್ಪತ್ತೊಂದು ವರ್ಷಗಳಿಗಿಂತ ಕಡಿಮೆ ವಯಸ್ಸಿನವನಿದ್ದರೆ ಅಥವಾ**

(ಬ) **ವಾಡಿಕೆಯಾಗಿ ಆ ಗ್ರಾಮದಲ್ಲಿ ವಾಸಮಾಡುತ್ತಿರದಿದ್ದರೆ ಅಥವಾ**

(ಕ) ೨ ನೈತಿಕ ಅಧಃಪತನವುಳ್ಳದ್ದಾಗಿರುವ ಮತ್ತು ಆರು ತಿಂಗಳಿಗಿಂತ ಹೆಚ್ಚು ಮುದ್ದತಿನ ಕೈದಿನ ಶಿಕ್ಷೆಯಾಗತಕ್ಕ ಅಥವಾ ಹದ್ದುಪಾರದ ಶಿಕ್ಷೆಯಾಗತಕ್ಕ ಯಾವದೊಂದು ಅಪರಾಧದ ಬಗ್ಗೆ ಫೌಜದಾರೀ ಕೋರ್ಟಿನಿಂದ ಕೈದಿನ ಅಥವಾ ಘಟಿಕೆಯ ಶಿಕ್ಷೆ ಕೊಡಲ್ಪಟ್ಟವನಿದ್ದರೆ, ಇಂಥ ಶಿಕ್ಷೆಯು ನಂತರ ತಿರುಗಿಸಲ್ಪಟ್ಟಿರದಿದ್ದರೆ ಅಥವಾ ಮಾಫು ಮಾಡಲ್ಪಟ್ಟಿರದಿದ್ದರೆ, ಇಂಥ ಶಿಕ್ಷೆಯು ಮುಗಿಯುವ ವರೆಗೆ ಮತ್ತು ಇಂಥ ಶಿಕ್ಷೆಯಿಂದ ಹುಟ್ಟುವ ಅವನ ನಾಲಾಯಖಿಯು, ಪ್ರಾಂತಿಕ ಸರಕಾರದವರಿಗೆ ಇದರ

**ಮೇಲಿಂದ ಮಾಡಲಿಕ್ಕೆ ಅಧಿಕಾರವಿರುವ ಹುಕುಮಿನಿಂದ ತೆಗೆದು ಹಾಕಲ್ಪಡದಿದ್ದರೆ, ಅಥವಾ**

[ವಾಕ್ಯವಿವರಣೆ — (೧) ಯಾವನಿಗೆ ಫೌಜದಾರೀ ಕೋರ್ಟಿನಿಂದ, ೬ ತಿಂಗಳಿಗಿಂತ ಅಧಿಕ ಅವಧಿಯ ಕೈದಿನ ಶಿಕ್ಷೆಯಾಗತಕ್ಕ ಅಥವಾ ಹದ್ದುಪಾರಿನ ಶಿಕ್ಷೆಯಾಗತಕ್ಕ ಮತ್ತು (ನೈತಿಕ ಅಧಃಪತನವುಳ್ಳದ್ದಾಗಿರುವ) ಯಾವದೊಂದು ಅಪರಾಧದ ಬಗ್ಗೆ ಕೈದಿನ ಅಥವಾ ಫಟಕೆಯ ಶಿಕ್ಷೆ ಕೊಡಲ್ಪಟ್ಟಿದೆಯೋ

(೨) ಇಂಥ ಶಿಕ್ಷೆಯು ಆ ಮೇಲೆ ತಿರುಗಿಸಲ್ಪಟ್ಟಿರದಿದ್ದರೆ ಅಥವಾ ಮಾಫಿ ಮಾಡಲ್ಪಟ್ಟಿರದಿದ್ದರೆ ಇಂಥ ಶಿಕ್ಷೆಯ ಅವಧಿಯು ಮುಗಿಯುವ ವರೆಗೆ

(೩) ಇಂಥ ಶಿಕ್ಷೆಯಿಂದ ಉಂಟಾಗುವ ಅವನ ನಾಲಾಯಖಿಯನ್ನು ತೆಗೆದು ಒಗೆಯುವ ಅಧಿಕಾರವು ರಾಜ್ಯಸರಕಾರಕ್ಕಿದೆ ಹಾಗೆ ರಾಜ್ಯಸರಕಾರದವರಿಂದ ಇಂಥ ನಾಲಾಯಖಿಯು ತೆಗೆದುಹಾಕಲ್ಪಟ್ಟಿರದಿದ್ದರೆ ಅಂಥವನು (ನಾಲಾಯಖನು ಅಥವಾ ಸಭಾಸದನಾಗಲಾರನು ]

**(ಡ) ಯೋಗ್ಯ ಕೋರ್ಟಿನಿಂದ ಭ್ರಮಿಷ್ಟನೆಂದು ಠರಾಯಿಸಲ್ಪಟ್ಟಿದ್ದರೆ,**

“ ಯೋಗ್ಯ ಕೋರ್ಟ ”–ಹುಚ್ಚರ ಕಾಯದೆಯಂತೆ ಮ್ಯಾಜಿಸ್ಟ್ರೇಟ ಇಲ್ಲವೆ ಜಿಲ್ಹಾ ಕೋರ್ಟ ಇವು ಈ ಕೆಲಸದಲ್ಲಿ ಅಧಿಕಾರವಿದ್ದ ಕೋರ್ಟುಗಳಾಗಿವೆ.

**(ಇ) ನಾದಾರನೆಂದು ಠರಾಯಿಸಲ್ಪಟ್ಟು ಋಣಮುಕ್ತನಾಗಿರದಿದ್ದರೆ, ಅಥವಾ**

“ ನಾದಾರ ” ಯೋಗ್ಯ ಕೋರ್ಟು ಠರಾಯಿಸಿದ

**(ಫ) ೨೧ ನೇ ಕಲಮಿನನ್ವಯ ಹುದ್ದೆಯ ಮೇಲಿಂದ ತೆಗೆದು ಹಾಕಲ್ಪಟ್ಟಿದ್ದು. ಹೀಗೆ ತೆಗೆದುಹಾಕಲ್ಪಟ್ಟ ತಾರೀಖಿನಿಂದ ಐದು ವರ್ಷಗಳು ಕಳೆಯದಿದ್ದರೆ, ಮತ್ತು ಹೀಗೆ ಹುದ್ದೆಯಿಂದ ತೆಗೆದುಹಾಕಿದರಿಂದುಂಟಾದ ಅವನ ನಾಲಾಯಖಿಯು, ಹೀಗೆ ತೆಗೆದು ಹಾಕಲ್ಪಟ್ಟ ತಾರೀಖಿನಿಂದ ಒಂದು ವರ್ಷವು ಕಳೆಯಲಾಗಿ ಜಿಲ್ಹಾ ಲೋಕಲ್ ಬೋರ್ಡಿಗೆ ಇದರ ಮೇಲಿಂದ ಮಾಡಲಿಕ್ಕೆ ಅಧಿಕಾರವಿರುವ ಹುಕುಮಿನಿಂದ ತೆಗೆದು ಹಾಕಲ್ಪಡದಿದ್ದರೆ,**

ಈ ಅಪಾತ್ರತೆಯು ಐದು ವರುಷಗಳ ಇವರೆಗೆ ಚಾಲೂ ಇರುತ್ತದೆ. ಒಂದು ವರುಷದ ತರುವಾಯ ಜಿಲ್ಹಾ ಲೋಕಲಬೋರ್ಡಿನ ಹುಕುಮಿನಿಂದ ಅದು ಇಲ್ಲದಂತಾಗುವದು. ( ಮುಂದಿನ ೨೧ ನೆಯ ಕಲಮನ್ನು ನೋಡಿರಿ. )

(ಗ) ಪಂಚಾಯತದ ಕೈಯಲ್ಲಿರುವ ಅಥವಾ ಅದು ಕೊಡಬಹುದಾದ ಯಾವದೇ ಸಂಬಳವುಳ್ಳ ಅಧಿಕಾರವನ್ನು ಅಥವಾ ಲಾಭದ ಸ್ಥಳವನ್ನು ಇಂಥ ಅಧಿಕಾರವನ್ನು ಅಥವಾ ಸ್ಥಳವನ್ನು ಧಾರಣ ಮಾಡುತ್ತಿದ್ದಾಗ, ಧಾರಣ ಮಾಡಿದರೆ, ಅಥವಾ

"(ಘ) ಪಂಚಾಯತದ ಹುಕುಮಿನಿಂದ ಮಾಡಲ್ಪಟ್ಟ ಯಾವದೇ ಕೆಲಸದಲ್ಲಿ ಅಥವಾ ಪಂಚಾಯತದೊಡನೆ ಅಥವಾ ಅದರ ಕೈಕೆಳಗೆ ಅಥವಾ ಅದರಿಂದ ಮತ್ತು ಅದರ ಪತಿಯಿಂದ ಮಾಡಲಾದ ಯಾವದೇ ಕಂಟ್ರ್ಯಾಕ್ಟಿನಲ್ಲಿ ಅಥವಾ ನೌಕರಿಯಲ್ಲಿ ಪ್ರತ್ಯಕ್ಷವಾಗಿ ಅಥವಾ ಅಪ್ರತ್ಯಕ್ಷವಾಗಿ, ಸ್ವತಃ ಅಥವಾ ತನ್ನ ಪಾಲುಗಾರನ ಮುಖಾಂತರ ಯಾವದೇ ಹಿಸ್ಸೆಯುಳ್ಳವನು ಅಥವಾ ಹಿತ ಸಂಬಂಧವುಳ್ಳವನು ಇದ್ದರೆ,

(ಙ) ಪಂಚಾಯತಕ್ಕೆ ಕೊಡತಕ್ಕ ಯಾವದೇ ಕರವನ್ನು ಅಥವಾ ಫೀಯನ್ನು, ಸದರಿ ಮನುಷ್ಯನಿಗೆ ೯೧ ನೇ ಕಲಮಿನ (೧) ನೇ ಪೋಟ-ಕಲಮಿನನ್ವಯ ಸಾದರ ಮಾಡಿದ ಬಿಲ್ಲಿನಲ್ಲಿ ಇಂಥ ಕರದ ಅಥವಾ ಫೀಯ ರಕಮು ಕೊಡಲ್ಪಡತಕ್ಕದ್ದೆಂದು ಹೇಳಿದ ತಾರೀಖಿನಿಂದ ಅಥವಾ ಅದಕ್ಕಿಂತ ಮುಂಚೆ ಮೂರು ತಿಂಗಳೊಳಗೆ, ಪಂಚಾಯತಕ್ಕೆ ಯಾವದೇ ಕರವನ್ನು ಅಥವಾ ಫೀಯನ್ನು ಕೊಡಲಿಕ್ಕೆ ತಪ್ಪಿದರೆ, ಅಥವಾ

(ಚ) ಸರಕಾರದವರ ನೌಕರನಾಗಿದ್ದರೆ ಅಥವಾ ಯಾವದೊಂದು ಸ್ಥಾನಿಕ ಅಧಿಕಾರೀ ಸಂಘದ ನೌಕರನಾಗಿದ್ದರೆ,

ಅವನು ಪಂಚಾಯತದ ಸಭಾಸದನಾಗಲಾರನು ಅಥವಾ ಅವನು ಆ ಪ್ರಕಾರ ಸಭಾಸದನಿರುವದು ಮುಂದೆ ನಡೆಯಲಾರದು

ವಿವರಣೆ ೧:—ಯಾವದೇ ಏಕವ್ಯಕ್ತಿಭೂತವಾಗಿ ಮಾಡಲ್ಪಟ್ಟ ಅಥವಾ ನೋಂದಿಸಲ್ಪಟ್ಟ ಕಂಪನಿಯು ಅಥವಾ ಸನ್ ೧೯೧೨ ನೆಯ ಇಸವಿಯ ಸಹಕಾರೀ ಸಂಘಗಳ ವಿಷಯದ ಆಕ್ಟಿನನ್ವಯ ಅಥವಾ ಸನ್ ೧೯೨೫ ನೆಯ ಇಸವಿಯ ಮುಂಬಯಿಯ ಸಹಕಾರೀ ಸಂಘಗಳ ವಿಷಯದ ಆಕ್ಟಿನನ್ವಯ ನೋಂದಿಸಲ್ಪಟ್ಟ ಯಾವದೊಂದು ಸಹಕಾರೀ ಸಂಘದ ಶೇರಧಾರಣ ಮಾಡುವವನು ಅಥವಾ ಸಭಾಸದನು ಇರುತ್ತಾನೆಂಬ ಕಾರಣದಿಂದ ಯಾವನೊಬ್ಬ ಮನುಷ್ಯನು, ಸದರಿ ಕಂಪನಿಯು ಅಥವಾ ಸಹಕಾರೀ ಸಂಘದ ಮತ್ತು ಸದರಿ ಪಂಚಾಯತದ ನಡುವೆ ಆದ ಯಾವದೇ ಕರಾರಿನಲ್ಲಿ ಹಿತಸಂಬಂಧವುಳ್ಳವನಿರುತ್ತಾನೆಂದು ತಿಳಿಯಲ್ಪಡಬಾರದು.

**ವಿವರಣೆ ೨ :— ಈ ಕಲಮಿನ (ಜೆ) ರಕಮಿನ ಉದ್ದೇಶಗಳ ಸಲುವಾಗಿ ಕೆಲಸ ಮಾಡುವ ಮುಲ್ಕೀ ಅಥವಾ ಪೊಲೀಸ ಗೌಡನು ಅಥವಾ ಮುಂಬಯಿಯ ವಂಶಪರಂಪರೆಯ ಹುದ್ದೆಗಳ ವಿಷಯದ ಆಕ್ಟಿನನ್ವಯ ವಹಿವಾಟದಾರನಾಗಿರುವಂಥ ಯಾವನೊಬ್ಬ ಮುಲ್ಕೀ ಅಥವಾ ಪೋಲೀಸ ಗೌಡನು ಕೌನ್ಸಿನಿನ ನೌಕರನಿರುವನೆಂದು ತಿಳಿಯಲ್ಪಡತಕ್ಕದ್ದು, ಆದರೆ ಕೆಳದರ್ಜಿಯ ಗ್ರಾಮದ ನೌಕರನು ಕೌನ್ಸಿನಿನ ನೌಕರನಿರುವನೆಂದು ತಿಳಿಯಲ್ಪಡತಕ್ಕದ್ದಲ್ಲ. (ಕೆಳದರ್ಜಿಯ ನೌಕರರಲ್ಲಿ ತಳವಾರ, ಓಲೆಕಾರ ಸನದಿ ಮುಂತಾದವರ ಸಮಾವೇಶವಾಗುತ್ತದೆ)**

**ವಿವರಣೆ ೨ :—** ಪಂಚಾಯತಿಯ ಸಭಾಸದನಾಗಲಿಕ್ಕೆ (ಆರಿಸಿ ಬರಲಿಕ್ಕೆ) ಅಥವಾ ಆರಿಸಿ ಬಂದಮೇಲೆ ಚಾಲೂ ಇರಲು ಮೇಲೆ ಈ ಕಲಮಿನಲ್ಲಿ ಕೊಟ್ಟ ೧೦ ಬೇರೆ ಬೇರೆ ಕಾರಣಗಳ ಮೂಲಕ ಅಪಾತ್ರತೆ (ನಾಲಾಯಖಿ) ಬರುತ್ತದೆ. ಇಲ್ಲವೆ ಉಂಟಾಗುತ್ತದೆ.

ಚುನಾವಣೆಗೆ ನಿಲ್ಲುವ ಉಮೇದವಾರನು ಲಾಯಖನಿರುವನೋ ಇಲ್ಲವೋ ಎಂಬದನ್ನು ಚುನಾವಣೆಯ ಮೊದಲೇ ಗೊತ್ತುಮಾಡುವದಕ್ಕಾಗಿ ಒಮ್ಮೆ ಇವೆಲ್ಲ ಕಾರಣಗಳ ವಿಚಾರವಾಗತಕ್ಕದ್ದೇ ಇರುತ್ತದೆ. ಮುಂದೆ ಚುನಾವಣೆಯ ನಿಯಮ [೯—೧೦] ನೋಡಿರಿ.

ಸರಕಾರೀ ನೌಕರರಲ್ಲಿ ಊರ ಗೌಡ, ಕುಲಕರ್ಣಿ ಇವರ ಸಮಾವೇಶವಾಗುತ್ತದೆ.

ಲೋಕಲ್ ಅಥಾರ್ಟಿಗಳಲ್ಲಿ ಮ್ಯುನಸಿಪಲ್ ನೋಕರರು, ಡಿಸ್ಟ್ರಿಕ್ಟ ಲೋಕಲ್ ಬೋರ್ಡಿನ ನೌಕರರು ಇವರ ಸಮಾವೇಶವಾಗುತ್ತದೆ.

**ಸನ್ ೧೯೪೮ ನೇ ಇಸವಿಯ ಮುಂಬಯಿಯ ಗ್ರಾಮ ಪಂಚಾಯತಗಳ ಚುನಾವಣೆಯ ವಿಷಯದ ಕಾನೂನುಗಳು.**

# ಮುಂಬಯಿ ಸರಕಾರ

## ನಂಬರು ಎಸ್. ೧೭೪೩ ಕ. ತಾ|| ೨ ಜೂನ ೧೯೪೮

೧. **ಸಂಕ್ಷಿಪ್ತ ಹೆಸರು —** ಈ ಕಾನೂನುಗಳಿಗೆ, ಸನ್ ೧೯೪೮ ನೇ ಇಸವಿಯ ಮುಂಬಯಿಯ ಗ್ರಾಮ ಪಂಚಾಯತಗಳ ಚುನಾವಣೆಯ ವಿಷಯದ ಕಾನೂನುಗಳು ಎಂದೆನ್ನಬಹುದು.

ಈ ಕಾನೂನುಗಳು ಅಂದರೆ ನಿಯಮಗಳು ಸುಧಾರಿಸಲ್ಪಡುತ್ತವೆ. **ಈ ಪುಸ್ತಕದಲ್ಲಿ (ಸ್ವಾತಂತ್ರ್ಯದಿನ ೧೫ ಅಗಸ್ಟ ೧೯೫೪) ಇಲ್ಲಿಯ ವರೆಗೆ ಸುಧಾರಿಸಿದ ಕಾನೂನುಗಳು ಅಂದರೆ ನಿಯಮಗಳು ಕೊಡಲ್ಪಟ್ಟವೆ.**

೨. **ವ್ಯಾಖ್ಯೆ:—** ಈ ಕಾನೂನುಗಳಲ್ಲಿ, ವಿಷಯಕ್ಕೆ ಅಥವಾ ಸಂದರ್ಭಕ್ಕೆ ಯಾತರಿಂದಲೂ ಬಾಧೆ ಬಾರದಿದ್ದರೆ,—

(೧) "**ಆಕ್ಟ್**" ಅಂದರೆ, ಸನ್ ೧೯೩೩ ನೇ ಇಸವಿಯ ಮುಂಬಯಿಯ ಗ್ರಾಮ ಪಂಚಾಯತಗಳ ವಿಷಯದ ಆಕ್ಟು ಎಂದರ್ಥವಾಗುತ್ತದೆ,

(೨) "**ಚುನಾವಣೆ**" ಅಂದರೆ, ಯಾವದೊಂದು ಪಂಚಾಯತಕ್ಕೆ ಯಾವನೊಬ್ಬ ಸಭಾಸದನನ್ನು ಆರಿಸುವದಕ್ಕಾಗಿ ಜರುಗಿಸಲ್ಪಟ್ಟ ಚುನಾವಣೆಯು.

(೩) "**ಅಧ್ಯಕ್ಷನಾದ ಅಮಲದಾರನು**" ಅಂದರೆ, ಅಧ್ಯಕ್ಷನಾದ ಅಮಲದಾರನೆಂದು ಮಾಮಲೇದಾರನಿಂದ ಅಥವಾ ಮಹಾಲಕರಿಯಿಂದ ೭ನೇ ಕಾನೂನಿನನ್ವಯ ನೇಮಿಸಲ್ಪಟ್ಟ ಯಾವನೇ ಮನುಷ್ಯನು ಎಂದರ್ಥವಾಗುತ್ತದೆ,

(೪) "**ಕಾದಿಟ್ಟ ಸ್ಥಳ**" ಅಂದರೆ, ಹಂಗಸರ, ಷೆಡ್ಯೂಲ್ಡ ಪಂಗಡಗಳ ಅಥವಾ ಶೆಡ್ಯೂಲ್ಡ ಜಾತಿಗಳ ಕಾದಿಡಲ್ಪಟ್ಟ ಯಾವದೊಂದು ಸ್ಥಳವು ಎಂದರ್ಥವಾಗುತ್ತದೆ

(೫) "**ರಿಟರ್ನಿಂಗ ಆಫೀಸರನು**" ಅಂದರೆ, ರಿಟರ್ನಿಂಗ ಆಫೀಸರನೆಂದು ೭ ನೇ ಕಾನೂನಿನನ್ವಯ ಕಲೆಕ್ಟರನಿಂದ ನೇಮಿಸಲ್ಪಟ್ಟ ಯಾವನೇ ಮನುಷ್ಯನು ಎಂದರ್ಥವಾಗುತ್ತದೆ,

(೬) "**ಕಲಮು**" ಅಂದರೆ ಸದರೀ ಆಕ್ಟಿನ ಯಾವದೊಂದು ಕಲಮು ಎಂದರ್ಥವಾಗುತ್ತದೆ;

(೭) "**ವಿಶಿಷ್ಟ ಅಮಲದಾರನು**" ಅಂದರೆ, ೭ನೇ ಕಲಮಿನ (೩)ನೇ ಪೋಟ-ಕಲಮಿನನ್ವಯ ಕಲೆಕ್ಟರನ ಅಧಿಕಾರಗಳನ್ನು ನಡಿಸಲಿಕ್ಕೆ ಪ್ರಾಂತಿಕ ಸರಕಾರದವರಿಂದ ೯೫ನೇ ಕಲಮಿನ (೩)ನೇ ಪೋಟ-ಕಲಮಿನನ್ವಯ ನೇಮಿಸಲ್ಪಟ್ಟ ಯಾವನೊಬ್ಬ ಅಮಲದಾರನು ಎಂದರ್ಥವಾಗುತ್ತದೆ.

(೮) "**ಗ್ರಾಮದ ಚಾವಡಿಯು**" ಎಂಬ ಸಂಜ್ಞೆಯಲ್ಲಿ, ಸನ್ ೧೮೭೯ನೇ ಇಸವಿಯ ಮುಂಬಯಿಯ ಭೂಮಿಯ ಮಹಸೂಲಿನ ವಿಷಯದ ಕಾಯದೆಯನ್ವಯ ಚಾವಡಿಯು ಎಂದು ತಿಳಿಯಲ್ಪಟ್ಟ ಯಾವದೊಂದು ಸ್ಥಳದ ಸಮಾವೇಶವಾಗುತ್ತದೆ.

(೯) "**ಮತದಾರನು**" ಅಂದರೆ, ಚುನಾವಣೆಯ ಕಾಲಕ್ಕೆ ಮತಕೊಡಲಿಕ್ಕೆ ೭ನೇ ಕಲಮಿನ (೨)ನೇ ಪೋಟ-ಕಲಮಿನನ್ವಯ ಹಕ್ಕಿರುವ ಯಾವನೊಬ್ಬ ಮನುಷ್ಯನು ಎಂದರ್ಥವಾಗುತ್ತದೆ.

(೧೦) ಈ ಕಾನೂನುಗಳಲ್ಲಿ ವ್ಯಾಖ್ಯಾಯಿಸಲ್ಪಡದಿದ್ದ ಶಬ್ದಗಳಿಗೆ ಮತ್ತು ಸಂಜ್ಞೆಗಳಿಗೆ ಸದರಿ ಆಕ್ಟಿನಲ್ಲಿ ಅವುಗಳಿಗೆ ಅನುಕ್ರಮವಾಗಿ ಕೊಡಲ್ಪಟ್ಟ ಅರ್ಥಗಳಿರತಕ್ಕದ್ದು.

೩. **ಮತದಾರ ಯಾದಿಗಳನ್ನು ತಯಾರಿಸುವದು.**—(೧) ಸಾಮಾನ್ಯ ಚುನಾವಣೆಗಾಗಿ ಗೊತ್ತುಪಡಿಸಲ್ಪಟ್ಟ ತಾರೀಖಿಗಿಂತ ೩ ತಿಂಗಳಿಗಿಂತ ಕಡಿಮೆ ಯಿಲ್ಲದಷ್ಟು ಮುದ್ದತಿನ ಮುಂಚೆ, ಕಲೆಕ್ಟರನು ಈ ಬಗ್ಗೆ ತಾನು ನೇಮಿಸಿದ ಅಮಲದಾರನ ಕಡೆಯಿಂದ ಒಂದು ಮತದಾರರ ಯಾದಿಯನ್ನು ಗ್ರಾಮದ ಪ್ರಾದೇಶಿಕ ಭಾಷೆಯಲ್ಲಿ ತಯಾರಮಾಡಿಸತಕ್ಕದ್ದು.

(೨) ಸಭಾಸದರನ್ನು ಚುನಾಯಿಸುವದರ ಸಲುವಾಗಿ ಯಾವದೊಂದು ಗ್ರಾಮವನ್ನು ವಾರ್ಡುಗಳಾಗಿ ವಿಭಾಗಿಸಿದಾಗ, ಮತದಾರರ ಯಾದಿಯನ್ನು, ಅದರಲ್ಲಿ ಎಷ್ಟು ವಾರ್ಡುಗಳಿರುವವೊ ಅಷ್ಟು ಭಾಗಗಳಾಗಿ ವಿಭಾಗಿಸತಕ್ಕದ್ದು, ಮತ್ತು ಪ್ರತಿಯೊಬ್ಬ ಮತದಾರನ ಹೆಸರನ್ನು ಅವನು ವಾಡಿಕೆಯಾಗಿ ಇರುವ ವಾರ್ಡಿಗೆ ಸಂಬಂಧಿಸುವ ಭಾಗದಲ್ಲಿ ಅಥವಾ ಅವನು ಯಾವದೇ ವಾರ್ಡಿನಲ್ಲಿ ವಾಸಿಸದಿದ್ದರೆ, ಯಾವದರ ಸಂಬಂಧದಿಂದ ಅವನು ಮತಕೊಡಲು ಲಾಯಖಿಯನ್ನು ಪಡೆದಿರುವನೋ ಅಂಥ ಮನೆಯು ಅಥವಾ ಭೂಮಿಯು ಇರುವ ವಾರ್ಡಿಗೆ ಸಂಬಂಧಿಸುವ ಭಾಗದಲ್ಲಿ ನೋಂದಿಸತಕ್ಕದ್ದು.

ಆದರೆ ಗೊತ್ತುಪಡಿಸುವದೇನಂದರೆ, ಯಾವನೊಬ್ಬ ಮತಕೊಡುವವನಿಗೆ, ಈ ಆಕ್ಷಿನನ್ವಯ ತನ್ನ ಹೆಸರನ್ನು ಎರಡು ಅಥವಾ ಹೆಚ್ಚು ಭಾಗಗಳಲ್ಲಿ ನೋಂದಿಸಲು ಹಕ್ಕು ಇರುವಾಗ, ಅವನು ಸದರಿ ಯಾದಿಯನ್ನು ತಯಾರು ಮಾಡುವ ಅಮಲದಾರ ನಿಂದ ಈ ಬಗ್ಗೆ ಕೊಡಲ್ಪಟ್ಟ ನೋಟೀಸ ಮುಟ್ಟಿದ ಏಳು ದಿವಸಗಳೊಳಗಾಗಿ, ತನ್ನ ಹೆಸರನ್ನು ಯಾವ ಭಾಗದಲ್ಲಿ ನೋಂದಿಸತಕ್ಕದೆಂಬದನ್ನು ತಿಳಿಸತಕ್ಕದ್ದು.

(೧) **ಸರಕಾರಿ ಠರಾವ ನಂಬರು ೨೫೬೫ ೩೩ ತಾ|| ೨೦–೧–೪೮**

(೨) ಗ್ರಾಮವನ್ನು ವಾರ್ಡುಗಳಾಗಿ ವಿಭಾಗಿಸುವ ರೀತಿ —

**(ಅ)** ಜನಸಂಖ್ಯೆಯು ೧೦೦೦ ಕ್ಕಿಂತ ಕಡಿಮೆ ಇದ್ದಾಗ್ಗೆ ೭ ಸಭಾಸದರು ಇಂಥ ಗ್ರಾಮದಲ್ಲಿ ೨ ವಾರ್ಡುಗಳು. ಒಂದರಲ್ಲಿ ೩ ಸಭಾಸದರು, ಮತ್ತೊಂದರಲ್ಲಿ ೪ ಸಭಾಸದರು

**(ಬ)** ಜನಸಂಖ್ಯೆ ೧೦೦೦ ದಿಂದ ೩೦೦೦ ದ ವರೆಗೆ ಇದ್ದ ಗ್ರಾಮದಲ್ಲಿ ೯ ಅಥವಾ ೧೧ ಸಭಾಸದರು ಇಂಥ ಗ್ರಾಮದಲ್ಲಿ ೩ ವಾರ್ಡುಗಳು ಪ್ರತಿಯೊಂದು ವಾರ್ಡಿನಲ್ಲಿ ೩ ಅಥವಾ ೪ ಸಭಾಸದರು

**(ಕ)** ಜನಸಂಖ್ಯೆ ೩೦೦೦ ದಿಂದ ೪೦೦೦ ಅಥವಾ ಹೆಚ್ಚಿಗಿದ್ದ ಗ್ರಾಮಗಳಲ್ಲಿ ೧೩ ಅಥವಾ ೧೫ ಸಭಾಸದರು ಇಂಥ ಗ್ರಾಮಗಳಲ್ಲಿ ೪ ವಾರ್ಡುಗಳು. ಪ್ರತಿಯೊಂದು ವಾರ್ಡಿನಲ್ಲಿ ೩ ಅಥವಾ ೮ ಸಭಾಸದರು

( ಕಲಮು ೬ ರ ಕೆಳಗಿನ ಟೀಪು ನೋಡಿರಿ )

(೩) ಮತದಾರರ ಯಾದಿಯನ್ನು, ಅದು ತಯಾರಿಸಲ್ಪಟ್ಟ ನಂತರ ಆದಷ್ಟು ಬೇಗನೆ, ಗ್ರಾಮದ ಚಾವಡಿಯಲ್ಲಿ ಅಥವಾ ಗ್ರಾಮ ಪಂಚಾಯತದ ಕಚೇರಿಯಲ್ಲಿ, ಅಥವಾ (೧) ನೇ ಪೋಟ-ಕಾನೂನಿನ ಮೇರೆಗೆ ಸದರಿ ಯಾದಿಯನ್ನು ತಯಾರಿಸಿದಂಥ ಅಮಲದಾರನಿಂದ ಈ ಬಗ್ಗೆ ಗೊತ್ತುಪಡಿಸಲ್ಪಡಬಹುದಾದಂಥ ಇತರ ಯಾವದೊಂದು ಸಾರ್ವಜನಿಕ ಸ್ಥಳದಲ್ಲಿ ಆ ಯಾದಿಯ ನಕಲುಗಳನ್ನು ಹಚ್ಚಿ, ಪ್ರಸಿದ್ಧಿಸತಕ್ಕದ್ದು. ಇಂಥ ಯಾದಿಯು ಗ್ರಾಮದ ಪ್ರಾದೇಶಿಕ ಭಾಷೆಯಲ್ಲಿಯ ಒಂದು ನೋಟೀಸಿನೊಂದಿಗೆ—ಈ ನೋಟೀಸಿನಲ್ಲಿ ತನ್ನ ಹೆಸರು ಸದರಿ ಯಾದಿಯಲ್ಲಿ ದಾಖಲ ಮಾಡಲ್ಪಟ್ಟಿರದಿದ್ದ ಹಾಗೂ ಅದರಲ್ಲಿ ತನ್ನ ಹೆಸರು ದಾಖಲ ಮಾಡಲ್ಪಡತಕ್ಕದ್ದೆಂದು ಹಕ್ಕಿನಿಂದ ಹೇಳುವ ಯಾವನೇ ಮನುಷ್ಯನು, ಅಥವಾ ಯಾವನು ತನ್ನ ಹೆಸರು ಸದರಿ ಯಾದಿಯಲ್ಲಿ ದಾಖಲ ಮಾಡಲ್ಪಟ್ಟಿದ್ದನ್ನು ನೋಡಿ ಅದರಲ್ಲಿ ತನ್ನದೇ ಹೆಸರು ಅಥವಾ ಇತರ ಯಾವನೊಬ್ಬನ ಹಸರು ತಪ್ಪಿ ದಾಖಲ ಮಾಡಲ್ಪಟ್ಟಿದೆ ಅಥವಾ ಯಾವನೇ ಮನುಷ್ಯನ ಹೆಸರನ್ನು ಅದರಲ್ಲಿ ಸೇರಿಸಲಿಕ್ಕೆ ತಪ್ಪಿರುತ್ತದೆ ಎಂದು ತಿಳಿಯುವನೋ ಅಂಥ ಮನುಷ್ಯನು, ಇಂಥ ಯಾದಿಯ ಸುಧಾರಣೆಯ ಬಗ್ಗೆ, ವಿಶಿಷ್ಟ ಅಮಲದಾರನ ಕಡೆಗೆ ಅಥವಾ ಇಂಥ ಯಾವನೇ ಅಮಲದಾರನು ನೇಮಿಸಲ್ಪಟ್ಟಿರದಿದ್ದರೆ, ಕಲೆಕ್ಟರನ ಕಡೆಗೆ ಇಂಥ ನೋಟೀಸು ಪ್ರಸಿದ್ಧಿಸಲ್ಪಟ್ಟ ತಾರೀಖಿನಿಂದ ೧೪ ದಿವಸಗಳೊಳಗಾಗಿ, ಬರಹದ ಮೂಲಕವಾಗಿ ಅರ್ಜಿಯನ್ನು ಮಾಡಬಹುದು, ಎಂಬ ಮಜಕೂರು ಅದರಲ್ಲಿ ಪ್ರಸಿದ್ಧಿಸಲ್ಪಡತಕ್ಕದ್ದು.

೪. **ಮತದಾರರ ಯಾದಿಯ ಸುಧಾರಣೆ** — (೧) ಪ್ರಸಂಗವಿದ್ದಂತೆ ವಿಶಿಷ್ಟ ಅಮಲದಾರನು ಅಥವಾ ಕಲೆಕ್ಟರನು, ೩ನೇ ಕಾನೂನಿನ (೩)ನೇ ಪೋಟ-ಕಾನೂನಿನನ್ವಯ ಮತದಾರರ ಯಾದಿಯ ಸುಧಾರಣೆಯ ಬಗ್ಗೆ ಮಾಡಲ್ಪಟ್ಟ ಅರ್ಜಿಗಳ ನಿರ್ಣಯವನ್ನು ಮಾಡತಕ್ಕದ್ದು ಮತ್ತು ಅವನು ಮಾಡಿದ ನಿರ್ಣಯಗಳಿಗನುಸಾರವಾಗಿ ಮತದಾರರ ಯಾದಿಯು ಸುಧಾರಿಸಲ್ಪಡತಕ್ಕದ್ದು.

(೨) ಹೀಗೆ ಸುಧಾರಿಸಲ್ಪಟ್ಟ ಮತದಾರರ ಯಾದಿಯು, ಅದರ ಪ್ರತಿಗಳನ್ನು ಗ್ರಾಮದ ಚಾವಡಿಯಲ್ಲಿ ಅಥವಾ ಗ್ರಾಮಪಂಚಾಯತದ ಕಚೇರಿಯಲ್ಲಿ ಅಥವಾ ೪ನೇ ಕಾನೂನಿನನ್ವಯ ಸದರಿ ಯಾದಿಯನ್ನು ತಯಾರಿಸಿದ ಅಮಲದಾರನು ಈ ಬಗ್ಗೆ ನೇಮಿಸಬಹುದಾದಂಥ ಇತರ ಸಾರ್ವಜನಿಕ ಸ್ಥಳದಲ್ಲಿ ಹಚ್ಚಿ, ಸದರಿ ಅಮಲದಾರನಿಂದ ಚುನಾವಣೆಯ ತಾರೀಖಿನಿಂದ ಎರಡು ತಿಂಗಳಗಳಿಗಿಂತ ಮುಂಚಿತವಾಗಿ ಪುನಃ ಪ್ರಸಿದ್ಧಿಸಲ್ಪಡತಕ್ಕದ್ದು.

೫. **ಮತಕೊಡಲಿಕ್ಕೆ ಯಾರಿಗೆ ಹಕ್ಕು ಇರುತ್ತದೆ :**— ೭ನೇ ಕಲಮಿನ (೨)ನೇ ಪೋಟ-ಕಲಮಿನಲ್ಲಿ ನಿರ್ದಿಷ್ಟಮಾಡಿದ ಲಾಯಖಿಗಳು ಇದ್ದು ೩ನೆಯ

ನಿಯಮದ ಪ್ರಕಾರ ಕಲೆಕ್ಟರನು ಯಾವ ವರ್ಷ ಮತದಾರರ ಯಾದಿಯನ್ನು ತಯಾರ ಮಾಡಿಸಿರುವನೋ ಆ ವರ್ಷದ ತಾ. ೧ನೆಯ ಜಾನೇವರಿಗೆ ಪೂರ್ಣ ೨೧ ವರ್ಷದವನಾಗಿದ್ದು ಮತದಾರರ ಯಾದಿಯಲ್ಲಿ ಹೆಸರು ದಾಖಲಮಾಡಲ್ಪಟ್ಟಿದ್ದರೆ ಅಂಥವನಿಗೆ ಮತಕೊಡಲಿಕ್ಕೆ ಹಕ್ಕು ಇರತಕ್ಕದ್ದು.

೬ **ಕಾದಿಟ್ಟ ಸ್ಥಳಗಳ ಸಲುವಾಗಿ ಉಮೇದವಾರರಿಗಿರಬೇಕಾದ ಲಾಯಖಿಗಳು**:— ಹೆಂಗಸರಿಗಾಗಿ ಅಥವಾ ಯಾವದೇ ಸಮಾಜದ, ವರ್ಗದ ಅಥವಾ ಜಾತಿಯ ಸಲುವಾಗಿ ಯಾವದೇ ಸ್ಥಳವನ್ನು ಕಾದಿಟ್ಟಿರುವಾಗ, ಪ್ರಸಂಗ ಇದ್ದಂತೆ, ಹೆಂಗಸರು ಅಥವಾ ಇಂಥ ಸಮಾಜಕ್ಕೆ, ವರ್ಗಕ್ಕೆ ಅಥವಾ ಜಾತಿಗೆ ಸೇರಿದ ಮನುಷ್ಯರು ಮಾತ್ರ ಇಂಥ ಸ್ಥಳವನ್ನು ತುಂಬುವದಕ್ಕಾಗಿ ಆರಿಸಲ್ಪಡುವದಕ್ಕೆ ಲಾಯಖರಿರತಕ್ಕದ್ದು.

೭ **ಚುನಾವಣೆಯ ನೌಕರ ವರ್ಗದವರ ನೇಮಣೂಕು**:— ಪ್ರತಿಯೊಂದು ಚುನಾವಣೆಯ ಸಲುವಾಗಿ ಮಾಮಲೇದಾರನು ಅಥವಾ ಮಹಾಲಕರಿಯು ಸದರಿ ಚುನಾವಣೆಯನ್ನು ಜರುಗಿಸುವದಕ್ಕಾಗಿ ಒಬ್ಬ ರಿಟರ್ನಿಂಗ ಆಫೀಸರನನ್ನು, ಮತ್ತು ಮತಗಳನ್ನು ಕೊಡುವ ಬಗ್ಗೆ ಠರಾಯಿಸಿದ ಪ್ರತಿಯೊಂದು ಸ್ಥಳದ— ಇದಕ್ಕೆ ಇದರಲ್ಲಿ ಇನ್ನು ಮುಂದೆ ಮತಕೊಡುವ ಸ್ಥಳವು ಎಂದು ಕರೆಯಲಾಗಿದೆ— ಸಲುವಾಗಿ ಒಬ್ಬ ಅಧ್ಯಕ್ಷನಾದ ಅಮಲದಾರನನ್ನು ನೇಮಿಸತಕ್ಕದ್ದು. ಅವನು ಸದರಿ ಚುನಾವಣೆಯ ಕೆಲಸದಲ್ಲಿ ರಿಟರ್ನಿಂಗ ಆಫೀಸರರಿಗೂ ಅಧ್ಯಕ್ಷರಾದ ಅಮಲದಾರರಿಗೂ ಸಹಾಯ ಮಾಡುವದಕ್ಕಾಗಿ ಒಬ್ಬ ಅಥವಾ ಹೆಚ್ಚು ಜನ ಪೋಲಿಂಗ್ ಆಫೀಸರರನ್ನು ಸಹ ನೇಮಿಸಬಹುದು

೮. **ಚುನಾವಣೆಯ ಪರ್ಯಾಯಗಳನ್ನು ಗೊತ್ತುಪಡಿಸುವದು** :—

(೧) ಮಾಮಲೇದಾರನು ಅಥವಾ ಮಹಾಲಕರಿಯು ಯಾವದೊಂದು ಚುನಾವಣೆಯ ಈ ಕೆಳಗಿನ ಪರ್ಯಾಯಗಳ ಸಲುವಾಗಿ, ಅಂದರೆ (೧) ಉಮೇದವಾರರ ನೇಮಣೂಕ ಮಾಡೋಣ ಮತ್ತು ನೇಮಣೂಕುಗಳ ತಪಾಸಣಿ, (೨) ಮತಗಳನ್ನು ಕೊಡೋಣ ಹಾಗೂ (೩) ಮತಗಳನ್ನು ಎಣಿಸೋಣ, ಇವುಗಳ ಸಲುವಾಗಿ ತಾರೀಖನ್ನು, ತಾಸುಗಳನ್ನು ಹಾಗೂ ಸ್ಥಳವನ್ನು ಅಥವಾ ಸ್ಥಳಗಳನ್ನು ಗೊತ್ತುಪಡಿಸತಕ್ಕದ್ದು.

ಆದರೆ ಗೊತ್ತುಪಡಿಸುವದೇನೆಂದರೆ,—

(ಅ) ಕಲೆಕ್ಟರನು, ಉಮೇದವಾರರ ನೇಮಣೂಕಿಯ ಸಲುವಾಗಿ ಗೊತ್ತುಪಡಿಸಿದ ತಾರೀಖಿನ ಹಾಗೂ ಮತಗಳನ್ನು ಕೊಡುವ ಬಗ್ಗೆ ಗೊತ್ತುಪಡಿಸಿದ

ತಾರೀಖಿನ ನಡುವೆ ಕನಿಷ್ಟ ಇಪ್ಪತ್ತೈದು ದಿವಸಗಳ ಅಂತರವನ್ನು ಬಿಡಬೇಕು; ಮತ್ತು

(ಬ) ಉಮೇದವಾರರ ನೇಮಣೂಕಿಯ ಸಲುವಾಗಿ ಗೊತ್ತುಪಡಿಸಿದ ತಾರೀಖಿನ ಹಾಗೂ ನೇಮಣೂಕುಗಳನ್ನು ತಪಾಸಿಸುವದರ ಸಲುವಾಗಿ ಗೊತ್ತು ಪಡಿಸಿದ ತಾರೀಖಿನ ನಡುವಿನ ಅಂತರವು ಮೂರು ದಿವಸಗಳಿಗೆ ಮೀರತಕ್ಕದ್ದಲ್ಲ.

(೨) ರಿಟರ್ನಿಂಗ ಆಫೀಸರರ ಹಾಗೂ ಅಧ್ಯಕ್ಷರಾದ ಅಮಲದಾರರ ಹೆಸರುಗಳು ಇರುವ ಇಂಥ ಚುನಾವಣೆಯ ವಿಷಯದ ಬರಹಮೂಲಕವಾದ ಒಂದು ನೋಟೀಸು ಕೊಡಲ್ಪಡತಕ್ಕದ್ದು, ಮತ್ತು ಅದು ಚುನಾವಣೆಯ ಸಲುವಾಗಿ ಗೊತ್ತುಪಡಿಸಿದ ತಾರೀಖಿನಿಂದ ಸ್ಪಷ್ಟವಾದ ನಾಲವತ್ತೈದು ದಿವಸಗಳಿಗಿಂತ ಕಡಿಮೆಯಲ್ಲದ ಅವಧಿಗಿಂತ ಮುಂಚೆ ಗ್ರಾಮದ ಪ್ರಾದೇಶಿಕ ಭಾಷೆಯಲ್ಲಿ ಪ್ರಸಿದ್ಧಿಸಲ್ಪಡತಕ್ಕದ್ದು. ಸದರಿ ನೋಟೀಸಿನ ಪ್ರತಿಗಳನ್ನು, ಗ್ರಾಮದ ಚಾವಡಿಯಲ್ಲಿ ಅಥವಾ ಗ್ರಾಮಪಂಚಾಯತದ ಕಚೇರಿಯಲ್ಲಿ ಅಥವಾ ಈ ಬಗ್ಗೆ ಕಲೆಕ್ಟರನು ನೇಮಿಸಿದಂಥ ಇತರ ಯಾವದೇ ಸಾರ್ವಜನಿಕ ಸ್ಥಳದಲ್ಲಿ ಹಚ್ಚತಕ್ಕದ್ದು

(೩) ಮತಕೊಡುವದರ ಸಲುವಾಗಿ ಗೊತ್ತುಪಡಿಸಿದ ದಿನದ ಲಗತು ಹಿಂದಿನ ದಿವಸ ರಿಟರ್ನಿಂಗ ಆಫೀಸರನು, ಮತಗಳನ್ನು ಕೊಡುವದರ ಸಲುವಾಗಿ ನೇಮಿಸಲ್ಪಟ್ಟ ಇಂಥ ದಿವಸದ ತಾಸುಗಳಲ್ಲಿ ಹಾಗೂ ಮತಕೊಡುವ ಸ್ಥಳಗಳಲ್ಲಿ ಹಾಜರಾಗುವದಕ್ಕೆ ಎಲ್ಲ ಮತದಾರರಿಗೆ ಬರಹೇಳುವ ಒಂದು ನೋಟೀಸು ಸದರಿ ಗ್ರಾಮದಲ್ಲಿ ಡಂಗುರ ಹೊಡೆದು ಕೊಡಲ್ಪಡುವ ಬಗ್ಗೆ ವ್ಯವಸ್ಥೆ ಮಾಡತಕ್ಕದ್ದು

(೪) (೧) ನೇ ಪೋಟಕಲಮಿನನ್ವಯ ನಿಶ್ಚಯಿಸಲಾದ ತಾರೀಖುಗಳು, ತಾಸುಗಳು ಮತ್ತು ಸ್ಥಳವು ಅಥವಾ ಸ್ಥಳಗಳು, ಕಲೆಕ್ಟರನ ಮಂಜೂರಿಯನ್ನು ಪಡೆದ ಹೊರ್ತು, ಯಾವದೊಂದು ಚುನಾಣಿಯ ಬಗ್ಗೆ ನಿಶ್ಚಯಿಸಲಾದ ತಾರೀಖಿನಿಂದ ನಾಲ್ವತ್ತೈದು ದಿವಸಗಳೊಳಗಾಗಿ ಬದಲಿಸಲ್ಪಡತಕ್ಕದ್ದಲ್ಲ

ಆದರೆ ಗೊತ್ತುಪಡಿಸುವದೇನಂದರೆ, ಹೀಗೆ ನಿಶ್ಚಯಿಸಲಾದ ತಾರೀಖುಗಳನ್ನು ತಾಸುಗಳನ್ನು ಅಥವಾ ಸ್ಥಳವನ್ನು ಅಥವಾ ಸ್ಥಳಗಳನ್ನು ಬದಲಿಸುವದು ಸಾರ್ವಜನಿಕ ಹಿತದ ದೃಷ್ಟಿಯಿಂದ ಅವಶ್ಯವಾಗಿರುತ್ತದೆ ಎಂದು ಮಾಮಲೇದಾರನು ಅಥವಾ ಮಹಾಲಕರಿಯು ಅಭಿಪ್ರಾಯಪಟ್ಟರೆ, ಮತ್ತು ಇಂಥ ಬದಲಾವಣೆಗೆ ಕಲೆಕ್ಟರನ ಪೂರ್ಣ ಮಂಜೂರಿಯನ್ನು ಪಡೆಯುವದರ ಸಲುವಾಗಿ ಸಾಕಷ್ಟು ವೇಳೆಯು ಇರದಿದ್ದರೆ, ಸದರೀ ಮಾಮಲೇದಾರನು ಅಥವಾ ಮಹಾಲಕರಿಯು, ಬರಹದ ಮೂಲಕವಾಗಿ ದಾಖಲ ಮಾಡಲ್ಪಡಬೇಕಾದ ಕಾರಣಗಳ ಸಲುವಾಗಿ ಇಂಥ ತಾರೀಖುಗಳನ್ನು, ತಾಸುಗಳನ್ನು ಅಥವಾ ಸ್ಥಳವನ್ನು ಅಥವಾ ಸ್ಥಳಗಳನ್ನು

ಬದಲಾಯಿಸಬಹುದು ಇಂಥ ಪ್ರತಿಯೊಂದು ಬಾಬತಿನಲ್ಲಿ ಮಾಮಲೇದಾರನು ಅಥವಾ ಮಹಾಲಕರಿಯು ತನ್ನ ಹುಕುಮಿನ ಹಾಗೂ ಹೀಗೆ ದಾಖಲ ಮಾಡಲ್ಪಟ್ಟ ಕಾರಣಗಳ ಒಂದು ಪ್ರತಿಯನ್ನು ಕಲೆಕ್ಟರನ ಮುಖಾಂತರ ಸ್ಥಾನಿಕ ಅಧಿಕಾರೀ ಸಂಘಗಳ ಸಂಚಾಲಕನ ಕಡೆಗೆ ಕೂಡಲೇ ಕಳಿಸತಕ್ಕದ್ದು !

೯. **ಉಮೇದವಾರರ ನೇಮಣೂಕು:** ಉಮೇದವಾರರ ನೇಮಣೂಕಿನ ಸಲುವಾಗಿ ಗೊತ್ತುಪಡಿಸಿದ ತಾರೀಖಿನ ದಿವಸ ಅಥವಾ ಅದಕ್ಕಿಂತ ಮುಂಚೆ, ಚುನಾವಣೆಗೆ ನಿಲ್ಲಲು ಇಚ್ಛಿಸುವ ಪ್ರತಿಯೊಬ್ಬ ಮನುಷ್ಯನು, ರಿಟರ್ನಿಂಗ ಆಫೀಸರನಿಗೆ, ಪಂಚಾಯತದ ಸಭಾಸದನೆಂದು ಕೆಲಸ ಮಾಡಲು ತನ್ನ ಒಪ್ಪಿಗೆಯನ್ನು ತಿಳಿಸುವ ಹಾಗೂ ತನ್ನ ಜಾತಿಯನ್ನು, ವರ್ಗವನ್ನು ಅಥವಾ ಕೋಮನ್ನು ಹೇಳುವ ಒಂದು ಅರ್ಜಿಯನ್ನು ರಚಾಯಿಸಲಾದ ನಮೂನೆಯಲ್ಲಿ ( ನಮೂನೆ ಕ ) ಬರಹ ಮೂಲಕವಾಗಿ ಮಾಡತಕ್ಕದ್ದು

ಸದರಿ ಗ್ರಾಮದಲ್ಲಿ ಎರಡು ಅಥವಾ ಹೆಚ್ಚು ವಾರ್ಡುಗಳ ಸಲುವಾಗಿ ಒಂದೇ ವೇಳಗೆ ಅಥವಾ ಅಜಮಾಸು ಅದೇ ಸುಮಾರಿಗೆ ಯಾವದೊಂದು ಚುನಾವಣೆಯು ಜರುಗಿದಾಗ್ಗೆ, ಒಬ್ಬನೇ ಮನುಷ್ಯನು ಯಾವತ್ತೂ ವಾರ್ಡುಗಳಲ್ಲಿ ಚುನಾವಣೆಗೆ ನಿಲ್ಲಬಹುದು.

೧೦. **ನೇಮಣೂಕುಗಳ ತಪಾಸಣೆ**— ನೇಮಣೂಕುಗಳನ್ನು ತಪಾಸಿಸುವದರ ಸಲುವಾಗಿ ಗೊತ್ತುಪಡಿಸಿದ ವೇಳೆಯಲ್ಲಿ ಹಾಗೂ ಸ್ಥಳದಲ್ಲಿ, ಚುನಾವಣೆಗೆ ನಿಲ್ಲಲು ಇಚ್ಛಿಸುವ ಉಮೇದವಾರರಿಗೆ ಮತ್ತು ಇಂಥ ಪ್ರತಿಯೊಬ್ಬ ಉಮೇದವಾರನಿಂದ ಬರಹಮೂಲಕವಾಗಿ ಯೋಗ್ಯರೀತಿಯಿಂದ ಅಧಿಕಾರ ಕೊಡಲ್ಪಟ್ಟ ಪ್ರತಿಯೊಬ್ಬ ಇತರ ಮನುಷ್ಯನಿಗೆ ಮಾತ್ರ ಹಾಜರಿರಲು ಹಕ್ಕಿರತಕ್ಕದ್ದು. ರಿಟರ್ನಿಂಗ ಆಫೀಸರನು ಇಂಥ ಮನುಷ್ಯರಿಗೆ ಚುನಾವಣೆಗೆ ನಿಲ್ಲಲಿಚ್ಛಿಸುವ ಉಮೇದವಾರರ ಅರ್ಜಿಗಳನ್ನು ಪರೀಕ್ಷಿಸುವದಕ್ಕಾಗಿ ವಾಜವಿ ಸೌಕರ್ಯಗಳನ್ನು ಒದಗಿಸಿ ಕೊಡತಕ್ಕದ್ದು.

(೨) ರಿಟರ್ನಿಂಗ ಆಫೀಸರನು ಅರ್ಜಿಗಳನ್ನು ತಪಾಸಿಸಿದ ನಂತರ ಹಾಗೂ ಯಾವದೇ ಅರ್ಜಿಯ ಬಗ್ಗೆ ಅವನ ಮುಂದೆ ಮಾಡಲ್ಪಡಬಹುದಾದ ಯಾವವೇ ತಕರಾರುಗಳನ್ನು ಕೇಳಿಕೊಂಡ ನಂತರ, ಅನೇ ಕಲಮಿನನ್ವಯ ಸದರಿ ಉಮೇದವಾರರು ನಾಲಾಯಖರಿದ್ದ ಅಥವಾ ನಾಲಾಯಖರಿರದಿದ್ದ ಪ್ರಕಾರ ಸದರಿ ಅರ್ಜಿಗಳನ್ನು ನಿರಾಕರಿಸತಕ್ಕದ್ದು ಅಥವಾ ಸ್ವೀಕರಿಸತಕ್ಕದ್ದು. ಅವನು ಪ್ರತಿಯೊಂದು ಅರ್ಜಿಯ ಮೇಲೆ ತನ್ನ ನಿರ್ಣಯವನ್ನು ಬರೆದಿಡತಕ್ಕದ್ದು ಮತ್ತು ಅರ್ಜಿಯು ನಿರಾಕರಿಸಲ್ಪಟ್ಟಿದ್ದರೆ, ಅದನ್ನು ನಿರಾಕರಿಸಿದ್ದರ ಸಂಕ್ಷೇಪ ಕಾರಣಗಳನ್ನು ಸಹ

ಬರೆದಿಡತಕ್ಕದ್ದು. ಅವನು ಚುನಾವಣೆಗೆ ನಿಲ್ಲಲಿಚ್ಛಿಸುವ ಪ್ರತಿಯೊಬ್ಬ ಉಮೇದವಾರನಿಗೆ ತನ್ನ ನಿರ್ಣಯವನ್ನು ತಿಳಿಸತಕ್ಕದ್ದು.

೧೧. **ಉಮೇದವಾರಿಕೆಯನ್ನು ಹಿಂತೆಗೆದುಕೊಳ್ಳುವದು:**-ಯಾವನೇ ಉಮೇದವಾರನು, ತಾನು ಬರಹಮೂಲಕವಾಗಿ ಸಹಿಮಾಡಿಕೊಟ್ಟ ಹಾಗೂ ರಿಟರ್ನಿಂಗ ಆಫೀಸರನ ಕಡೆಗೆ ಕಳುಹಿಸಿಕೊಟ್ಟ ನೋಟೀಸಿನ ಮೂಲಕ ೧೦ನೇ ಕಾನೂನಿನನ್ವಯದ ತಪಾಸಣೆಯು ಮುಗಿದ ತರುವಾಯ ನಾಲವತ್ತೆಂಟು ತಾಸುಗಳೊಳಗೆ ತನ್ನ ಉಮೇದವಾರಿಕೆಯನ್ನು ಹಿಂತೆಗೆದುಕೊಳ್ಳಬಹುದು ತನ್ನ ಉಮೇದವಾರಿಕೆಯನ್ನು ಹಿಂತೆಗೆದುಕೊಂಡ ಯಾವನೊಬ್ಬ ಉಮೇದವಾರನಿಗೆ ಹೀಗೆ ಉಮೇದವಾರಿಕೆಯನ್ನು ಹಿಂತೆಗೆದುಕೊಂಡದ್ದನ್ನು ರದ್ದುಮಾಡಲಿಕ್ಕೆ ಪರವಾನಿಗಿಯು ಕೊಡಲ್ಪಡತಕ್ಕದ್ದಲ್ಲ ಈ ಕಾನೂನಿನಲ್ಲಿ ಠರಾಯಿಸಿದ ಅವಧಿಯು ಮುಗಿದ ನಂತರ ಕೊಡಲ್ಪಟ್ಟ ಯಾವದೇ ಹಿಂತೆಗೆದುಕೊಳ್ಳುವ ನೋಟೀಸಿಗೆ ಯಾವದೇ ಅಮಲು ಇರತಕ್ಕದ್ದಲ್ಲ

೧೨ **ನೇಮಣೂಕಗಳನ್ನು ನಾಕಾರಿಸಿದ್ದರ ವಿರುದ್ಧ ಅಪೀಲು :—** ೧೦ನೇ ಕಾನೂನಿನ (೨)ನೇ ಪೋಟ-ಕಾನೂನಿನನ್ವಯ ಯಾವದೊಂದು ಅರ್ಜಿಯನ್ನು ನಾಕಾರಿಸಿದ ಬಗ್ಗೆ ರಿಟರ್ನಿಂಗ ಆಫೀಸರನು ಮಾಡಿದ ನಿರ್ಣಯದ ವಿರುದ್ಧ ಯಾವದೊಂದು ಅಪೀಲು ಕಲೆಕ್ಟರನಿಗೆ ಅಥವಾ ಪ್ರಾಂತಿಕ ಸರಕಾರದವರಿಂದ ಈ ಬಗ್ಗೆ ನೇಮಿಸಲ್ಪಟ್ಟ ಇತರ ಯಾವನೇ ಅಮಲದಾರನಿಗೆ ಇಂಥ ನಿರ್ಣಯದ ತಾರೀಖಿನಿಂದ ಮೂರು ದಿವಸಗಳೊಳಗಾಗಿ ಮಾಡಲ್ಪಡಬಹುದು ಪ್ರಸಂಗವಿದ್ದಂತೆ ಕಲೆಕ್ಟರನು ಅಥವಾ ಇಂಥ ಇತರ ಅಮಲದಾರನು ಮತಕೊಡುವ ಬಗ್ಗೆ ನೇಮಿಸಿದ ದಿವಸದಿಂದ ಹದಿನೆಂಟು ದಿವಸಗಳಿಗಿಂತ ತಡವಾಗದೆ ಸದರಿ ಅಪೀಲನ್ನು ನಿರ್ಣಯಿಸತಕ್ಕದ್ದು. ಕಲೆಕ್ಟರನು ತನ್ನ ನಿರ್ಣಯವನ್ನು ಸದರಿ ರಿಟರ್ನಿಂಗ ಆಫೀಸರನಿಗೆ ಕೂಡಲೇ ತಿಳಿಸತಕ್ಕದ್ದು.

೧೨ (ಅ) **ನೇಮಣೂಕಿಗಳನ್ನು ತಪಾಸಣೆಯಲ್ಲಿ ನಿರಾಕರಿಸಲು ಬರುತ್ತದೆ :—** ಈ ಕಾನೂನಿನಲ್ಲಿ ಯಾವದೇ ಮಜಕೂರ ಇದ್ದಾಗ್ಯೂ ಕಲೆಕ್ಟರನಿಗೆ ಅಥವಾ ರಾಜ್ಯಸರಕಾರವು ಈ ಸಂಬಂಧವಾಗಿ ನೇಮಿಸಿದ ಯಾವದೇ ಬೇರೆ ಅಮಲದಾರನಿಗೆ, ಸ್ವತಃ ಅಥವಾ ಕಾನೂನು ೧೦ (೨) ರ ಪ್ರಕಾರ ನೇಮಣೂಕಿನ ವಿಷಯದ ಅರ್ಜಿಯನ್ನು ಸ್ವೀಕರಿಸುವುದರ ಸಂಬಂಧವಾಗಿ ರಿಟರ್ನಿಂಗ ಆಫೀಸರನ ನಿರ್ಣಯವಾದ ೩ ದಿನಗಳೊಳಗಾಗಿ ಯಾವದೇ ಮತದಾರನು ಅರ್ಜಿ ಮಾಡಿದ್ದರೆ ಇಂಥ ನೇಮಣೂಕ ವಿಷಯದ ಅರ್ಜಿಯನ್ನು ಸ್ವೀಕರಿಸುವದರ ಸಂಬಂಧವಾಗಿ ರಿಟರ್ನಿಂಗ ಆಫೀಸರನ ನಿರ್ಣಯವನ್ನು ನಿರಾಕರಿಸಲು ಅಧಿಕಾರವಿದೆ.

ಪ್ರಸಂಗಾನುಸಾರವಾಗಿ ಕಲೆಕ್ಟರನು ಅಥವಾ ಇತರ ಅಮಲದಾರನು ಮತನೋಂದಣಿಯ ಸಲುವಾಗಿ ನಿಯಮಿಸಿದ ದಿವಸಕ್ಕಿಂತ ೧೪ ದಿನಗಳಿಗೆ ಕಡಿಮೆ ಅಲ್ಲದಷ್ಟು ಅವಧಿಯಲ್ಲಿ ಈ ಬಗ್ಗೆ ಹುಕುಮು ಕೊಡಬೇಕು. ಮತ್ತು ರಿಟರ್ನಿಂಗ ಆಫೀಸರನಿಗೆ ಬೇಗನೆ ಹುಕುಮು ತಿಳಿಸಬೇಕು.

೧೪ನೆಯ ಕಾನೂನಿನನ್ವಯ ಮತ ತೆಗೆದುಕೊಳ್ಳದೆ ಯಾವನೊಬ್ಬ ಉಮೇದವಾರನು ಆರಿಸಿಬಂದ ಬಗ್ಗೆ ರಿಟರ್ನಿಂಗ ಆಫೀಸರನು ಜಾಹೀರಮಾಡಿದ್ದರೆ ಇಂಥ ಉಮೇದವಾರರ ವಿಷಯದಲ್ಲಿ ಮೇಲೆ ಕಾಣಿಸಿದ ಪ್ರಕಾರ ಹುಕುಮು ಮಾಡಬಾರದು.

**ಸರಕಾರಿ ಠರಾವ ನಂಬರು** ೪೨೬೫/೩೩ ತಾ. ೯-೫-೫೨ ಕಾನೂನು ೧೨ ಮತ್ತು ೧೨ (ಅ) ದ ಪ್ರಕಾರ ರಾಜ್ಯಸರಕಾರದವರು ಪ್ರಾಂತ ಆಫೀಸರರಿಗೆ ಆಪೀಲಿನ ಅಥವಾ ತಪಾಸಣೆಯ ಅಧಿಕಾರವನ್ನು ಕೊಟ್ಟಿದ್ದಾರೆ

೧೩ **ಉಮೇದವಾರರ ಯಾದಿಯನ್ನು ತಯಾರಮಾಡುವದು :—** ರಿಟರ್ನಿಂಗ ಆಫೀಸರನು, ತನ್ನ ಸಹಿಯ ಕೆಳಗೆ ಕಾಯದೆಶೀರವಾಗಿ ನೇಮಣೂಕು ಮಾಡಲ್ಪಟ್ಟ ಯಾವತ್ತೂ, ಉಮೇದವಾರರ ಯಾದಿಯನ್ನು, ೧೨ನೇ ಕಲಮಿನನ್ವಯ ಕಲೆಕ್ಟರನಿಂದ ಪತ್ರವು ಬಂದು ಮುಟ್ಟಿದ ಮೇಲೆ, ಮತ್ತು ೧೧ನೇ ಕಾನೂನಿನಲ್ಲಿ ಠರಾಯಿಸಲಾದ ಉಮೇದವಾರಿಕೆಯನ್ನು ಹಿಂತೆಗೆದುಕೊಳ್ಳುವ ಬಗ್ಗೆ ಇರುವ ಅವಧಿಯು ಮುಗಿದ ಬಳಿಕ ತನ್ನ ಸಹಿಮಾಡಿ ತಯಾರಮಾಡತಕ್ಕದ್ದು, ಮತ್ತು ಚುನಾವಣೆಯ ಬಗ್ಗೆ ಗೊತ್ತುಪಡಿಸಿದ ತಾರೀಖಿಗಿಂತ ಕನಿಷ್ಟ ಹದಿನೈದು ದಿವಸಗಳ ಪೂರ್ವದಲ್ಲಿ ಗ್ರಾಮದ ಚಾವಡಿಯಲ್ಲಿ ಅಥವಾ ಗ್ರಾಮಪಂಚಾತ ಕಚೇರಿಯಲ್ಲಿ ಅದನ್ನು ಹಚ್ಚತಕ್ಕದ್ದು ಅಥವಾ ಹಚ್ಚುವ ವ್ಯವಸ್ಥೆ ಮಾಡತಕ್ಕದ್ದು

೧೪ **ಎದುರಾಳಿಗಳಿರದ ಚುನಾವಣೆಗಳು ಹಾಗೂ ಚುನಾಯಿಸುವದಕ್ಕೆ ತಪ್ಪೋಣ :—** (೧) ಯಾವ ವಾರ್ಡಿನಲ್ಲಿ ಯಾವದೊಂದು ಸ್ಥಳವು ಹೆಂಗಸರಿಗಾಗಿ ಅಥವಾ ಯಾವದೊಂದು ಜಾತಿಗಾಗಿ, ವರ್ಗಕ್ಕಾಗಿ ಅಥವಾ ಕೋಮಿಗಾಗಿ ಕಾದಿಡಲ್ಪಟ್ಟಿರುವದಿಲ್ಲವೋ ಅಂಥ ಯಾವದೇ ವಾರ್ಡಿನಲ್ಲಿ ಮತ್ತು ಈ ಕೆಳಗಿನ (೨) ನೇ, (೩) ನೇ ಹಾಗೂ (೪) ನೇ ಪೋಟ-ಕಾನೂನುಗಳ ಠರಾವುಗಳಿಗೊಳಪಟ್ಟು, ಯಾವದೇ ಇತರ ವಾರ್ಡಿನಲ್ಲಿ, ಕಾಯದೇಶೀರವಾಗಿ ನೇಮಣೂಕುಮಾಡಲ್ಪಟ್ಟ ಉಮೇದವಾರರ ಸಂಖ್ಯೆಯು ತುಂಬಲ್ಪಡಬೇಕಾದ ಸ್ಥಳಗಳ ಸಂಖ್ಯೆಗೆ ಸರಿಯಾಗಿದ್ದರೆ, ಹೀಗೆ ನೇಮಣೂಕು ಮಾಡಲ್ಪಟ್ಟ ಉಮೇದವಾರನು ಅಥವಾ ಉಮೇದವಾರರು, ಯಾವದೇ ಮತಗಳನ್ನು ತೆಗೆದುಕೊಳ್ಳದೆ, ಆರಿಸಲ್ಪಟ್ಟನೆಂದು ಅಥವಾ ಆರಿಸಲ್ಪಟ್ಟರೆಂದು ರಿಟರ್ನಿಂಗ ಆಫೀಸರನು ಜಾಹೀರ ಮಾಡತಕ್ಕದ್ದು.

(೨) ಯಾವ ವಾರ್ಡಿನಲ್ಲಿ ಯಾವದೊಂದು ಸ್ಥಳವು ಅಥವಾ ಯಾವವೇ ಸ್ಥಳಗಳು ಹೆಂಗಸರಿಗಾಗಿ, ಯಾವದೊಂದು ಜಾತಿಗಾಗಿ, ವರ್ಗಕ್ಕಾಗಿ ಅಥವಾ ಕೋಮಿಗಾಗಿ ಕಾದಿಡಲ್ಪಟ್ಟದೆಯೋ ಅಥವಾ ಕಾದಿಡಲ್ಪಟ್ಟವೆಯೋ ಅಂಥ ಯಾವದೇ ವಾರ್ಡಿನಲ್ಲಿ, ಇಂಥ ಸ್ಥಳಗಳನ್ನು ತುಂಬಲಿಕ್ಕೆ ಆರಿಸಲ್ಪಡಲು ಲಾಯಖಿಯನ್ನು ಪಡೆದ ಕಾಯದೇಶೀರವಾಗಿ ನೇಮಣೂಕು ಮಾಡಲ್ಪಟ್ಟ ಉಮೇದವಾರರ ಸಂಖ್ಯೆಯು ಇಂಥ ಸ್ಥಳಗಳ ಸಂಖ್ಯೆಗೆ ಸರಿಯಾಗಿದ್ದರೆ, ಹೀಗೆ ಲಾಯಖಿಯನ್ನು ಪಡೆದ ಉಮೇದವಾರರು ಕಾದಿಡಲ್ಪಟ್ಟ ಸ್ಥಳವನ್ನು ಅಥವಾ ಸ್ಥಳಗಳನ್ನು ತುಂಬಲಿಕ್ಕೆ ಆರಿಸಲ್ಪಟ್ಟಿರುವರೆಂದು ರಿಟರ್ನಿಂಗ ಆಫೀಸರನು ಜಾಹೀರ ಮಾಡತಕ್ಕದ್ದು ಮತ್ತು ಅವಶ್ಯವಿದ್ದರೆ, ಈ ಪೋಟಿ ಕಾನೂನಿನನ್ವಯ ತುಂಬಲ್ಪಡದಿದ್ದ ಯಾವದೇ ಸ್ಥಳವನ್ನು ಅಥವಾ ಯಾವದೇ ಸ್ಥಳಗಳನ್ನು ತುಂಬಲಿಕ್ಕೆ ಮಾತ್ರ ಮತಗಳನ್ನು ತೆಗೆದುಕೊಳ್ಳತಕ್ಕದ್ದು.

(೩) ಇಂಥ ಯಾವದೇ ವಾರ್ಡಿನಲ್ಲಿ, ಹೀಗೆ ಕಾದಿಡಲ್ಪಟ್ಟ ಯಾವದೊಂದು ಸ್ಥಳವನ್ನು ಅಥವಾ ಯಾವವಾದರೂ ಸ್ಥಳಗಳನ್ನು ತುಂಬಲಿಕ್ಕೆ ಆರಿಸಲ್ಪಡಲು ಲಾಯಖಿ ಪಡೆದ ಕಾಯದೇಶೀರವಾಗಿ ನೇಮಣೂಕು ಮಾಡಲಾದ ಉಮೇದವಾರರ ಸಂಖ್ಯೆಯು, ಹೀಗೆ ಕಾದಿಡಲ್ಪಟ್ಟ ಸ್ಥಳಗಳ ಸಂಖ್ಯೆಗಿಂತ ಕಡಿಮೆ ಇದ್ದರೆ, ಆ ಎಲ್ಲ ಉಮೇದವಾರರು, ಯಾರಾದರೂ ಇದ್ದರೆ, ಹೀಗೆ ಕಾದಿಡಲ್ಪಟ್ಟ ಸ್ಥಳಗಳನ್ನು ತುಂಬಲಿಕ್ಕೆ ಆರಿಸಲ್ಪಟ್ಟಿರುವರೆಂದು ಸದರಿ ರಿಟರ್ನಿಂಗ ಆಫೀಸರನು ಜಾಹೀರ ಮಾಡತಕ್ಕದ್ದು, ಮತ್ತು ಉಳಿದ ಕಾದಿಡಲ್ಪಟ್ಟ ಸ್ಥಳದ ಅಥವಾ ಸ್ಥಳಗಳ ಸಂಬಂಧದಿಂದ ಆರಿಸಲು ತಪ್ಪಿರುವರೆಂದು ತಿಳಿಯಲ್ಪಡತಕ್ಕದ್ದು. ಅವಶ್ಯವಿದ್ದರೆ, ಹೀಗೆ ಕಾದಿಡಲ್ಪಡದಿದ್ದ ಸ್ಥಳಗಳನ್ನು ತುಂಬಲಿಕ್ಕೆ ಮಾತ್ರ ಮತಗಳನ್ನು ತೆಗೆದುಕೊಳ್ಳತಕ್ಕದ್ದು.

(೪) ಇಂಥ ಯಾವದೇ ವಾರ್ಡಿನಲ್ಲಿ, ಹೀಗೆ ಕಾದಿಡಲ್ಪಟ್ಟ ಯಾವದೊಂದು ಸ್ಥಳವನ್ನು ಅಥವಾ ಯಾವದೇ ಸ್ಥಳಗಳನ್ನು ತುಂಬಲಿಕ್ಕೆ ಆರಿಸಲ್ಪಡಲು ಲಾಯಖಿಯನ್ನು ಪಡೆದ, ಕಾಯದೇಶೀರವಾಗಿ ನೇಮಣೂಕು ಮಾಡಲ್ಪಟ್ಟ ಯಾವನೇ ಉಮೇದವಾರನು ಇರದಿದ್ದರೆ, ಇಂಥ ಸ್ಥಳದ ಅಥವಾ ಸ್ಥಳಗಳ ಸಂಬಂಧದಿಂದ ಚುನಾಯಿಸಲು ತಪ್ಪಿರುವರೆಂದು ತಿಳಿಯಲ್ಪಡತಕ್ಕದ್ದು. ಮತಗಳನ್ನು, ಅವಶ್ಯವಿದ್ದರೆ ಹೀಗೆ ಕಾದಿಡಲ್ಪಡದಿದ್ದ ಸ್ಥಳಗಳನ್ನು ತುಂಬುವ ಬಗ್ಗೆ ಮಾತ್ರ ತೆಗೆದುಕೊಳ್ಳತಕ್ಕದ್ದು.

(೫) ಮೇಲಿನ ಪೋಟಿ-ಕಾನೂನಿನ ಠರಾವುಗಳಿಗೊಳಪಟ್ಟು, ಕಾಯದೇಶೀರವಾಗಿ ನೇಮಣೂಕು ಮಾಡಲಾದ ಉಮೇದವಾರರ ಸಂಖ್ಯೆಯು, ಯಾವದೇ

ವಾರ್ಡಿನಲ್ಲಿ ತುಂಬಲ್ಪಡಬೇಕಾದ ಸ್ಥಳಗಳ ಸಂಖ್ಯೆಗಿಂತ ಕಡಿಮೆ ಇದ್ದರೆ, ರಿಟ-ರ್ನಿಂಗ ಆಫೀಸರನು, ಚುನಾಯಿಸಲ್ಪಡಬೇಕಾದ ಯಾವತ್ತು ಇಂಥ ಉಮೇದ-ವಾರರು, ಯಾರಾದರೂ ಇದ್ದರೆ, ಶಕ್ಯವಿರಬಹುದಾದಷ್ಟು ಸ್ಥಳಗಳಿಗೆ ಚುನಾಯಿಸ-ಲ್ಪಟ್ಟರೆಂದು ಜಾಹೀರಮಾಡತಕ್ಕದ್ದು.

೧೫. **ಎದುರಾಳಿಗಳಿದ್ದ ಚುನಾವಣೆಗಳು** :— ೧೪ನೇ ಕಾನೂನಿನಲ್ಲಿ ಬರುವ ಬಾಬತುಗಳನ್ನು ಬಿಟ್ಟು ಇತರ ಬಾಬತುಗಳಲ್ಲಿ ಖಾಲಿ ಜಾಗೆಗಳನ್ನು ತುಂಬಲಿಕ್ಕೆ ಬ್ಯಾಲಟ್ಟಿನಿಂದ (ಪದ್ಧತಿಯಿಂದ) ಮತಗಳನ್ನು ತೆಗೆದುಕೊಳ್ಳತಕ್ಕದ್ದು.

೧೬. ಎದುರಾಳಗಳಿದ್ದ ಪ್ರತಿಯೊಂದು ಚುನಾವಣೆಯಲ್ಲಿ ರಿಟರ್ನಿಂಗ ಆಫೀಸರನು ಪ್ರತಿಯೊಬ್ಬ ಉಮೇದವಾರನಿಗೆ ಗುರ್ತು ಸರಿಯಾಗಿ ತೋರಿಸುವ ಚಿನ್ಹವನ್ನು ನೇಮಿಸಿಕೊಡತಕ್ಕದ್ದು.

೧೭. **ಮತಪತ್ರಕದ ನಮೂನೆ**.— (೧) ಈ ಕಾನೂನುಗಳಿಗೆ ಜೋಡಿಸಿದ ಅ ನಮೂನೆಯಲ್ಲಿ ಮತಪತ್ರಕವನ್ನು ಛಾಪಿಸತಕ್ಕದ್ದು, ಮತ್ತು ಅದರಲ್ಲಿ ಯಾವತ್ತು ಉಮೇದವಾರರ ಅಕ್ಷರಾನುಕ್ರಮದ ಹೆಸರುಗಳ, ರಿಟರ್ನಿಂಗ ಆಫೀಸರನು ಪ್ರತಿಯೊಬ್ಬ ಉಮೇದವಾರನಿಗೆ ನೇಮಿಸಿಕೊಟ್ಟ ಸಿಂಬಾಲ್ (ಗುರ್ತಿಸುವ) ಚಿನ್ಹಗಳೊಂದಿಗೆ ಇರತಕ್ಕದ್ದು

ಆದರೆ ಗೊತ್ತುಪಡಿಸುವದೇನಂದರೆ, ರಿಟರ್ನಿಂಗ ಆಫೀಸರನು ೧೪ನೆಯ ಕಾನೂನಿನನ್ವಯ ಆರಿಸಲ್ಪಟ್ಟವರೆಂದು ಜಾಹೀರಮಾಡಿದ ಉಮೇದವಾರರ ಹೆಸರುಗಳನ್ನು ಮತಪತ್ರಕದಲ್ಲಿ ನೋಂದಿಸಬಾರದು.

೧೮. **ಮಾದರಿಯ ಮತಪತ್ರವು**.— ಮಾದರಿಯ ಮತಪತ್ರಕಗಳನ್ನು, ಮತದಾನವು ಪ್ರಾರಂಭವಾಗುವದಕ್ಕಿಂತ ಕನಿಷ್ಟ ನಾಲ್ವತ್ತೆಂಟು ತಾಸು ಮುಂಚಿತವಾಗಿ ಮತದಾರರ ಮಾರ್ಗದರ್ಶನಕ್ಕಾಗಿ ಮತಕೊಡುವ ಸ್ಥಳದ ಹೊರಗೆ ಹಚ್ಚತಕ್ಕದ್ದು.

೧೯. **ಚುನಾವಣೆಯ ಸಲಕರಣೆಗಳು ಮತ್ತು ಬ್ಯಾಲಟ್ ಪೆಟ್ಟಿಗೆಗಳು**.— (೧) ಮತದಾನದ ದಿನ ಮುಂಜಾವಿನಲ್ಲಿ, ಪ್ರತಿಯೊಬ್ಬ ಅಧ್ಯಕ್ಷನಾದ ಅಮಲದಾರನಿಗೆ, ಮತಪತ್ರಕಗಳನ್ನು ಹಾಕುವದಕ್ಕಾಗಿ ತೂತು ಇರುವಂಥ ಬ್ಯಾಲಟ್ ಪೆಟ್ಟಿಗೆಯನ್ನು ಅಥವಾ ಪೆಟ್ಟಿಗೆಗಳನ್ನು, ಅವರ ಮತಕೊಡುವ ಸ್ಥಳಗಳಿಗೆ ಸಂಬಂಧಪಟ್ಟ ಮತದಾರರ ಯಾದಿಯ ವಿಭಾಗಗಳ ಒಂದು ಪ್ರತಿಯನ್ನು ಮೂಲಪ್ರತಿ ಹಾಗೂ ಸ್ಥಳಪ್ರತಿಗಳಲ್ಲಿ ಅನುಕ್ರಮವಾಗಿ ನಂಬರು ಕೊಡಲಾದ ಮತಪತ್ರಕಗಳುಳ್ಳ—ಇವು ಮತದಾರರ ಯಾದಿಯಲ್ಲಿಯ ಪ್ರತಿಯೊಬ್ಬ ಮತದಾರನಿಗೆ ಒಂದು ಮತಪತ್ರಕದಂತೆ ಇರತಕ್ಕದ್ದು— ಒಂದು ಕಟ್ಟಿದ ಪುಸ್ತಕವನ್ನು

ಅಥವಾ ಪುಸ್ತಕಗಳನ್ನು ಮತ್ತು ಚುನಾವಣೆಯ ಉದ್ದೇಶಗಳ ಬಗ್ಗೆ ಅವಶ್ಯವಿರ ಬಹುದಾದ ಇತರ ಸಾಮಾನುಗಳನ್ನು ಪೂರೈಸತಕ್ಕದ್ದು

(೨) ಮತದಾನವು ಪ್ರಾರಂಭವಾಗುವದಕ್ಕಿಂತ ಮುಂಚೆ, ಸದರಿ ಅಧ್ಯಕ್ಷನಾದ ಅಮಲದಾರನು ಮತದಾನದ ಸ್ಥಳಗಳಲ್ಲಿ ಹಾಜರಿರಬಹುದಾದಂಥ ಉಮೇದ ವಾರರಿಗೆ ಅಥವಾ ಅವರ ಏಜಂಟರಿಗೆ ಮತಪತ್ರಕಗಳನ್ನು ಹಾಕುವ ಪೆಟ್ಟಿಗೆಯು ಖಾಲಿ ಇರುವದೆಂದು ತೋರಿಸತಕ್ಕದ್ದು ಮತ್ತು ಅದಕ್ಕೆ ಆ ಮೇಲೆ ಕೀಲಿ ಹಾಕತ ಕ್ಕದ್ದು, ಮತ್ತು ಮೊಹರು ಒಡೆಯದೆ ಅದನ್ನು ತೆರೆಯಲು ಬಾರದ ರೀತಿಯಿಂದ ಅದನ್ನು ಮೊಹರು ಮಾಡತಕ್ಕದ್ದು.

೨೦ **ಉಮೇದವಾರರೂ ಅವರ ಏಜಂಟರೂ ಮತದಾರರ ಕೂಡ ಮಾತಾಡಬಾರದು** (೧) ಮೊದಲಿನ ಕೋಣೆಯಲ್ಲಿ ಉಮೇದವಾರರೂ ಅವರ ಏಜಂಟರೂ ಯಾವನೇ ಮತದಾರನೊಡನೆ ಮಾತಾಡಬಾರದು ಅಥವಾ ಭಾಷಣ ಮಾಡಬಾರದು. ಆದರೆ ಅಧ್ಯಕ್ಷನಾದ ಅಮಲದಾರನಿಗೆ, ಕೆಳಗಿನ ಮೂರು ಕಾರಣಗಳ ಸಲುವಾಗಿ ಮತದಾರನ ಸಂಬಂಧವ ತಕರಾರುಗಳ ವಿಷಯವಾಗಿ ಹೇಳಬಹುದು.

(೧) ಚುನಾವಣೆಯು ನಡೆದಿರುವ ವಾರ್ಡಿನಲ್ಲಿ, ಮತದಾರನಿಗೆ ಮತ ಕೊಡಲು ಹಕ್ಕಿರುವದೆಂದು ತೋರಿಸುವ ಬಗ್ಗೆ, ಮತದಾರರ ಯಾದಿಯಲ್ಲಿ ಮತ-ದಾರನ ಹೆಸರು ಇರುವದಿಲ್ಲ

(೨) ಯಾವ ಮತದಾರನ ಹೆಸರು ಮತದಾರರ ಯಾದಿಯಲ್ಲಿ ನೋಂದಿಸ-ಲ್ಪಟ್ಟಿರುವದೋ ಅಂಥ ಒಬ್ಬ ಮತದಾರನು ತಾನಿರುತ್ತೇನೆಂದು ಹೇಳುವ ಅವನ ಹಕ್ಕು ಸುಳ್ಳು ಇರುತ್ತದೆ

(೩) ಅವನು ಸದರಿ ಚುನಾವಣೆಯಲ್ಲಿ ಈ ಮೊದಲೇ ಮತವನ್ನು ಕೊಟ್ಟಿರುತ್ತಾನೆ

(೨) ಈ ಕಾನೂನಿನ (೧) ನೇ ಪೋಟ-ಕಾನೂನಿನ ಠರಾವುಗಳನ್ನು ಉಲ್ಲಂ-ಘಿಸುವ ಯಾವನೊಬ್ಬ ಮನುಷ್ಯನನ್ನು ಅಧ್ಯಕ್ಷನಾದ ಅಮಲದಾರನು ಮೊದಲಿನ ಕೋಣೆಯಿಂದ ಹೊರಗೆ ಹಾಕಬಹುದು, ಮತ್ತು ಹೀಗೆ ಹೊರಗೆ ಹಾಕಲ್ಪಟ್ಟ ಮನುಷ್ಯನನ್ನು ಆ ಚುನಾವಣೆಯು ನಡೆಯುವತನಕ ತಿರುಗಿ ಬರಗೊಡಬಾರದು.

೨೧ **ಮತದಾರರು ಮತಕೊಡುವ ಸ್ಥಳಕ್ಕೆ ಹೋಗಬೇಕು.**— ತನ್ನ ಮತವನ್ನು ಹಾಕಲಿಚ್ಛಿಸುವ ಪ್ರತಿಯೊಬ್ಬ ಮತದಾರನು, ತಾನು ಯಾವ ವಾರ್ಡಿನ ಮತದಾರರ ಯಾದಿಯಲ್ಲಿ ನೋಂದಿಸಲ್ಪಟ್ಟಿರುವನೋ ಅಂಥ ವಾರ್ಡಿನ ಮತಕೊ-ಡುವ ಸ್ಥಳದಲ್ಲಿ, ೮ನೇ ಕಾನೂನಿನನ್ವಯ ಈ ಬಗ್ಗೆ ಮಾಮಲೇದಾರನು ಅಥವಾ

ಮಹಾಲಕರಿಯು ನೇಮಿಸಬಹುದಾದ ತಾರೀಖಿನ ದಿವಸ ಹಾಗೂ ತಾಸುಗಳ ನಡುವೆ ಆ ಕಾರಣಕ್ಕಾಗಿ ಹಾಜರಾಗತಕ್ಕದ್ದು.

೨೨. **ಮತಗಳನ್ನು ಕೊಡುವದು**—ಮತಗಳನ್ನು ಈ ಕೆಳಗಿನ ರರಾವು-ಗಳಿಗನುಸಾರವಾಗಿ ಕೊಡತಕ್ಕದ್ದು.—

(೧) ಪ್ರತಿಯೊಬ್ಬ ಮತದಾರನಿಗೆ, ಯಾವ ಸ್ಥಳಗಳನ್ನು ತುಂಬುವದರ ಸಲುವಾಗಿ ಮತಗಳನ್ನು ಈ ವಾರ್ಡಿನಲ್ಲಿ ತೆಗೆದುಕೊಳ್ಳಲಾಗುವದೋ ಅಂಥ ಸ್ಥಳ-ಗಳಿರುವಷ್ಟು ಮತಗಳನ್ನು ಕೊಡುವದಕ್ಕೆ ಹಕ್ಕಿರತಕ್ಕದ್ದು, ಆದರೆ ಯಾವನೇ ಮತದಾರನು ಯಾವನೇ ಒಬ್ಬ ಉಮೇದವಾರನಿಗೆ ಒಂದಕ್ಕಿಂತ ಹೆಚ್ಚು ಮತ-ಗಳನ್ನು ಕೊಡತಕ್ಕದ್ದಲ್ಲ;

(೨) ಮುಖತ್ಯಾರರ ಮುಖಾಂತರ (ಇನ್ನೊಬ್ಬರ ವತಿಯಿಂದ) ಮತವನ್ನು ಕೊಡಲಿಕ್ಕೆ ಬರುವದಿಲ್ಲ,

(೩) ಮತಕೊಡಲಿಚ್ಛಿಸುವ ಯಾವನೊಬ್ಬ ಮತದಾರನಿಗೆ ಯಾವದೊಂದು ಮತಪತ್ರಕವನ್ನು ಕೊಡುವದಕ್ಕಿಂತ ಮುಂಚೆ, ಮತದಾರರ ಯಾದಿಯಲ್ಲಿಯ ಅವನ ಹೆಸರನ್ನು ಹಾಗೂ ನಂಬರನ್ನು ಯಾವತ್ತು ಹಾಜರಿದ್ದ ಜನರಿಗೆ ಕೇಳಿಸು-ವಂತೆ ಕರೆಯಬೇಕು.

(೪) ಅಧ್ಯಕ್ಷನಾದ ಅಮಲದಾರನು, ಉಮೇದವಾರರಿಂದಲೂ ಅವರ ಏಜಂಟರಿಂದಲೂ ಮಾಡಲಾದ ಯಾವವಾದರೂ ತಕರಾರುಗಳ ನಿಕಾಲೆ ಮಾಡ-ತಕ್ಕದ್ದು ಮತ್ತು ಮತಕೊಡಲಿಚ್ಛಿಸುವ ಮತದಾರನು ಮತಕೊಡಲು ಹಕ್ಕುಳ್ಳವನಿರು ತ್ತಾನೆಂತಲೂ ಅವನು ಇನ್ನೂ ಮತಕೊಟ್ಟಿಲ್ಲವೆಂತಲೂ ಅವನಿಗೆ ಖಾತ್ರಿಯಾದರೆ, ಅವನು ಮತಪತ್ರಕದ ಮೂಲಪ್ರತಿಯಲ್ಲಿ ತನ್ನ ಸಹಿಮಾಡತಕ್ಕದ್ದು, ಮತ್ತು ಸ್ಥಳಪ್ರತಿಯ ಮೇಲೆ ಮತದಾರನ ಸಹಿಯನ್ನು ಅಥವಾ ಗುರ್ತನ್ನು ತೆಗೆದುಕೊಂಡ ನಂತರ ಮತ್ತು ಮೂಲಪ್ರತಿಯ ಹಾಗೂ ಸ್ಥಳಪ್ರತಿಯ ಮಧ್ಯದಲ್ಲಿ ಮೊಹರು ಹೊಡೆದ ಬಳಿಕ ಮತದಾರನಿಗೆ ಮೂಲಪ್ರತಿಯನ್ನು ಕೊಡತಕ್ಕದ್ದು ಮತ್ತು ಅವ-ನನ್ನು ಮತದಾನ ಮಾಡುವ ಕೋಣೆಗೆ ಕಳಿಸಿಕೊಡತಕ್ಕದ್ದು;

(೫) ಮತದಾರನು, ತಾನು ಮತವನ್ನು ಕೊಡಬೇಕೆಂದು ಇಚ್ಛಿಸುವ ಪ್ರತಿ ಯೊಬ್ಬ ಉಮೇದವಾರನ ಹೆಸರಿನ ಎದುರಿಗೆ ಮತಪತ್ರಕದ ೪ನೇ ಆಸನದಲ್ಲಿ ಒಂದು ಕತ್ತರಿಯ ಗುರುತನ್ನು ಮಾಡತಕ್ಕದ್ದು, ಆ ಮೇಲೆ ಅವನು ತಾನು ಗುರ್ತುಮಾಡಿದ್ದು ಕಾಣಿಸದಂತೆ ಗುರ್ತುಮಾಡಿದ ಕಾಗದವನ್ನು ಮಡಿಚತಕ್ಕದ್ದು ಮತ್ತು ಹೀಗೆ ಮಡಿಚಿದ ಕಾಗವನ್ನು ಬ್ಯಾಲಟ್ ಪೆಟ್ಟಿಗೆಯಲ್ಲಿ ಹಾಕತಕ್ಕದ್ದು; ಹಾಗೂ ವಿನಾ-ಕಾರಣ ತಡಮಾಡದೆ ಮತದಾನ ಮಾಡುವ ಕೋಣೆಯಿಂದ ಹೊರಬೀಳತಕ್ಕದ್ದು;

(೬) ಯಾವ ಮತದಾರನು ರೂಪಿಸಿದ ರೀತಿಯಿಂದ ಮತಕೊಡಲಿಕ್ಕೆ ಯಾವದೇ ಬೇನೆಯ ಮೂಲಕ ಅಸಮರ್ಥನಿರುವನೋ ಅಂಥ ಮತದಾರನಿಗೆ ಅವಶ್ಯ-ವಿರಬಹುದಾದಂಥ ಸಹಾಯವನ್ನು ಅಧ್ಯಕ್ಷನಾದ ಅಮಲದಾರನು ಕೊಡತಕ್ಕದ್ದು,

(೭) ಯಾವದೇ ಮತಪತ್ರಕವನ್ನು, ೧ನೇ ಕಾನೂನಿನನ್ವಯ ಚುನಾವಣೆಯ ಬಗ್ಗೆ ನೇಮಿಸಲಾದ ಕೊನೆಯ ತಾಸಿನ ನಂತರ ಕೊಡತಕ್ಕದ್ದಲ್ಲ ಆದರೆ ಯಾವ ಮತದಾರನು ತನ್ನ ಮತಪತ್ರಕವನ್ನು ಮೇಲೆ ಹೇಳಿದ ಕೊನೆಯ ತಾಸಿಗಿಂತ ಮುಂಚೆ ಪಡೆದಿರುವನೋ ಅಂಥ ಯಾವನೇ ಮತದಾರನಿಗೆ ತನ್ನ ಮತವನ್ನು ಕೊಡಲು ಪರವಾನಗಿ ಕೊಡತಕ್ಕದ್ದು.

೨೩ **ಅಧ್ಯಕ್ಷರಾದ ಅಮಲದಾರರ ಹಾಗೂ ಇತರ ಪೋಲಿಂಗ್ ಆಫೀಸರರ ಕರ್ತವ್ಯಗಳು** — ಅತಿ ಗೌಪ್ಯವಾಗಿ ಮತಗಳನ್ನು ಹಾಕಲಾಗುತ್ತದೆ. ಈ ಕಾನೂನುಗಳನ್ವಯ ಮತದಾನಮಾಡುವ ಸ್ಥಳದಲ್ಲಿ ಮತಕೊಡಬಹುದಾದಂಥ ಮನುಷ್ಯರಿಗೆ ಮಾತ್ರ ಪ್ರವೇಶಕೊಡಲಾಗುತ್ತದೆ ಹಾಗೂ ಯಾವ ಮನುಷ್ಯರು ತಮ್ಮ ಮತಗಳನ್ನು ಕೊಟ್ಟರೋ ಅಥವಾ ಯಾವ ಮನುಷ್ಯರ ವಿರುದ್ಧ ತಕರಾರುಗಳನ್ನು ಕೇಳಿಕೊಳ್ಳಲಾಗಿರುವದೋ ಮತ್ತು ಸಮರ್ಥಿಸಲಾಗಿರುವದೋ ಅಂಥ ಮನುಷ್ಯರು ಕೂಡಲೇ ಹೊರಗೆ ಹೋಗುತ್ತಾರೆ ಎಂಬುದನ್ನು ನೋಡಿಕೊಳ್ಳುವದು ಅಧ್ಯಕ್ಷರಾದ ಅಮಲದಾರರ ಹಾಗೂ ಅವರ ಅಸಿಸ್ಟಂಟರ ಕರ್ತವ್ಯವಾಗಿರತಕ್ಕದ್ದು. ಈ ಕಾನೂನುಗಳು ಹಾಗೂ ಅವುಗಳನ್ವಯ ರಿಟರ್ನಿಂಗ ಆಫೀಸರನು ಕೊಟ್ಟ ಯಾವವೇ ವಿಶಿಷ್ಟ ಸೂಚನೆಗಳು ಯಾವತ್ತು ಬಾಬತುಗಳಲ್ಲಿ ನಿಕಟವಾಗಿ ಪಾಲಿಸಲ್ಪಡುವಂತೆ ನೋಡಿಕೊಳ್ಳುವದು ಸಹ ಅವರ ಕರ್ತವ್ಯವಾಗಿರತಕ್ಕದ್ದು

೨೪ **ಚುನಾವಣೆಯ ಕೆಲಸದ ಮೇಲೆ ರಿಟರ್ನಿಂಗ ಆಫೀಸರನ ಮೇಲ್ವಿಚಾರಣೆ** -- ರಿಟರ್ನಿಂಗ ಆಫೀಸರರ ಸಾಮಾನ್ಯ ಮೇಲ್ವಿಚಾರಣೆಯ ಕೆಲಸವು ನಡೆಯತಕ್ಕದ್ದು ಯಾವದೇ ಮತಕೊಡುವ ಸ್ಥಳದ ಅಧ್ಯಕ್ಷನಾದ ಅಮಲದಾರನು ರಿಟರ್ನಿಂಗ ಆಫೀಸರನಿಗೆ, ಅವನು ಮತಕೊಡುವ ಸ್ಥಳದಲ್ಲಿ ಹಾಜರಿದ್ದರೆ, ಯಾವದೇ ಸಂಶಯವುಳ್ಳ ಮುದ್ದೆಯನ್ನು ಬರೆದು ಕೇಳಬಹುದು

೨೫ **ಮತಕೊಡುವ ಸ್ಥಳಗಳಲ್ಲಿ ಕೆಲಸದ ಮೇಲಿದ್ದ ಅಮಲದಾರರು ಮತಕೊಡುವದು** — ಮತಕೊಡುವ ಸ್ಥಳದಲ್ಲಿ ಕೆಲಸದ ಮೇಲಿದ್ದ ಯಾವ ಅಧ್ಯಕ್ಷನಾದ ಅಮಲದಾರನು, ಪೋಲಿಂಗ ಆಫೀಸರನು ಅಥವಾ ಮನುಷ್ಯನು ಮತಕೊಡುವ ಸ್ಥಳದಲ್ಲಿ ತನ್ನ ಮತವನ್ನು ಕೊಡಲು ಹಕ್ಕುಳ್ಳವನಾಗಿರುವದಿಲ್ಲವೋ ಅಂಥ ಅಮಲದಾರನು, ಆಫೀಸರನು ಅಥವಾ ಯಾವನೇ ಮನುಷ್ಯನು ಯಾವ ಚುನಾವಣೆಯ ಸಂಬಂಧದಿಂದ ಅವನು ನೇಮಿಸಲ್ಪಟ್ಟಿರುವನೋ ಅಂಥ ಚುನಾವಣೆ

ಯಲ್ಲಿ ತನ್ನ ಮತವನ್ನು ಕೊಡಲು ಹಕ್ಕುಳ್ಳವನಾಗಿದ್ದರೆ, ಸದರಿ ಮತಕೊಡುವ ಸ್ಥಳದಲ್ಲಿ ತನ್ನ ಮತವನ್ನು ಕೊಡಬಹುದು ಯಾವ ಮತಕೊಡುವ ಸ್ಥಳದಲ್ಲಿ ತನಗೆ ಮತಕೊಡಲು ಹಕ್ಕಿರಬಹುದಾಗಿದ್ದಿತ್ತೋ ಅಂಥ ಸ್ಥಳದ ಹೆಸರನ್ನು, ಮತಪತ್ರಕದ ಸ್ಥಳಪ್ರತಿಯಲ್ಲಿ, ಮತದಾರರ ಯಾದಿಯಲ್ಲಿಯ ಅವನ ಸಂಖ್ಯೆಯು ಬದಲಾಗಿ ನೋಂದಿಸತಕ್ಕದ್ದು ಇಂಥ ಮನುಷ್ಯರ ಮತಪತ್ರಕಗಳನ್ನು, ಮೋಹರಮಾಡಿ ಬಂದುಮಾಡಿದ ಪಾಕೇಟುಗಳಲ್ಲಿ ಹಾಕತಕ್ಕದ್ದು, ಮತ್ತು ಸದರಿ ಪಾಕೇಟುಗಳ ಮೇಲೆ, ಅವು ಯಾವ ಮತಕೊಡುವ ಸ್ಥಳಗಳಿಗೆ ಸಂಬಂಧಿಸುತ್ತವೆಯೋ ಅಂಥ ಸ್ಥಳಗಳ ಹೆಸರುಗಳನ್ನು ಬರೆಯುತಕ್ಕದ್ದು, ಮತ್ತು ಇಂಥ ಪಾಕೇಟುಗಳನ್ನು ರಿಟರ್ನಿಂಗ ಆಫೀಸರನಿಗೆ, ೨೭ನೆಯ ಕಾನೂನಿನಲ್ಲಿ ಹೇಳಿದ ಇತರ ಸಾಮಾನುಗಳೊಂದಿಗೆ ಕಳಿಸಿಕೊಡತಕ್ಕದ್ದು

೨೬. **ಕೊಡಮಾಡಲಾದ ಮತಪತ್ರಕಗಳು** –ಮತದಾರರ ಯಾದಿಯಲ್ಲಿ ಹೆಸರು ದಾಖಲಾಗಿರುವ ಯಾವನಾದರೂ ವಿಶಿಷ್ಟ ಮತದಾರನು ತಾನೆಂದು ಹೇಳುವ ಯಾವನಾದರೂ ಮನುಷ್ಯನು ಇಂಥ ಮತದಾರನೆಂದು ಬೇರೊಬ್ಬ ಮನುಷ್ಯನು ಮತಕೊಟ್ಟ ತರುವಾಯ, ಮತಪತ್ರಕದ ಬಗ್ಗೆ ಅರ್ಜಿಮಾಡಿದರೆ, ಸದರಿ ಅರ್ಜದಾರನಿಗೆ ಅಧ್ಯಕ್ಷನಾದ ಅಮಲದಾರನು ಹಾಕಿದ ಪ್ರಶ್ನೆಗಳಿಗೆ ಅವನು ಯೋಗ್ಯರೀತಿಯಿಂದ ಉತ್ತರ ಕೊಟ್ಟಮೇಲೆ ಮತವನ್ನು ಕೊಡಲಿಕ್ಕೆ ಹಕ್ಕಿರತಕ್ಕದ್ದು. ಆದರೆ ಸದರಿ ಮತದಾರನು ಯಾರಿಗೆ ಮತವನ್ನು ಕೊಡಲು ಇಚ್ಛಿಸುವನೋ ಅಂಥ ಉಮೇದವಾರರ ಹೆಸರುಗಳನ್ನು ಮತಪತ್ರಕದ ಹಿಂಭಾಗದ ಮೇಲೆ ಬರೆಯುತಕ್ಕದ್ದು ಅಥವಾ ಅವನಿಗೆ ಓದುಬರೆಯಲು ಬಾರದಿದ್ದರೆ, ಅವನ ಬಗ್ಗೆ ಅಧ್ಯಕ್ಷನಾದ ಅಮಲದಾರನು ಹಾಗೆ ಬರೆಯುತಕ್ಕದ್ದು ಮತ್ತು ಸದರಿ ಮತದಾರನು ಸದರಿ ಮತಪತ್ರಕವನ್ನು ಅಧ್ಯಕ್ಷನಾದ ಅಮಲದಾರನಿಗೆ ಕೊಡಮಾಡತಕ್ಕದ್ದು ಮತ್ತು ಸದರಿ ಅಮಲದಾರನು ಅದರ ಮೇಲೆ, ಸದರಿ ಮತದಾರನ ಹೆಸರನ್ನು ಹಾಗೂ ಮತದಾರರ ಯಾದಿಯಲ್ಲಿಯ ಅವನ ನಂಬರನ್ನು ಹಾಗೂ ಸದರಿ ಮತಪತ್ರಕವನ್ನು ಬೇರೊಂದು ಪಾಕೀಟಿನಲ್ಲಿ ಹಾಕತಕ್ಕದ್ದು ಇಂಥ ಮತಪತ್ರಕಗಳಿಗೆ "ಕೊಡಮಾಡಲಾದ ಮತಪತ್ರಕಗಳು" ಎಂದು ಕರೆಯಲಾಗುವದು ಇಂಥ ಮತಪತ್ರಿಕೆಗಳ ಗಣನೆಯನ್ನು ರಿಟರ್ನಿಂಗ ಆಫೀಸರನು ಮಾಡಬಾರದು ಹೀಗೆ ಕೊಡಮಾಡಲಾದ ಮತಪತ್ರಕಗಳ ಒಂದು ಯಾದಿಯನ್ನು ಈ ಕಾನೂನುಗಳಿಗೆ ಜೋಡಿಸಿದ ಬ ನಮೂನೆಯಲ್ಲಿ ಇಡತಕ್ಕದ್ದು.

೨೭. **ಬ್ಯಾಲಟ್ ಪೆಟ್ಟಿಗೆ ಮುಂತಾದವುಗಳನ್ನು ಮೋಹರು ಮಾಡುವದು :—** (೧) ಮತಗಳನ್ನು ತೆಗೆದುಕೊಳ್ಳುವ ಕೆಲಸವು ಮುಗಿದಾಕ್ಷಣ

ಅಧ್ಯಕ್ಷನಾದ ಅಮುಲದಾರನ ಯಾವನಾದರೊಬ್ಬ ಉಮೇದವಾರನ ಸಮಕ್ಷಮ ಅಥವಾ ಉಮೇದವಾರನ ಯಾವನೊಬ್ಬ ಪ್ರತಿನಿಧಿಯ ಸಮಕ್ಷಮ ಬ್ಯಾಲಟ್ ಪೆಟ್ಟಿಗೆಗಳ ತೂತನ್ನು ಮುಚ್ಚಿ ಮೊಹರುಮಾಡತಕ್ಕದ್ದು, ಹಾಗೂ ಬೇರೆ ಬೇರೆ ಪಾಕೀಟುಗಳನ್ನು ಮಾಡಿ, ಪ್ರತಿಯೊಂದರ ಮೇಲೆ ಅದರೊಳಗೆ ಏನಿದೆಂಬುದರ ವರ್ಣನೆಯನ್ನು ಬರೆದು, ತನ್ನ ಸ್ವಂತ ಮೊಹರನ್ನು ಮತ್ತು ಮೊಹರು ಮಾಡಲಿಚ್ಛಿಸುವ ಯಾವನೊಬ್ಬ ಉಮೇದವಾರನ ಅಥವಾ ಪ್ರತಿನಿಧಿಯ ಮೊಹರನ್ನು ಮಾಡಬೇಕು --

(೧) ಮತಕೊಡುವ ಸ್ಥಳದಲ್ಲಿ ಉಪಯೋಗದಲ್ಲಿರುವ ಪ್ರತಿಯೊಂದು ಬ್ಯಾಲಟ್ ಪೆಟ್ಟಿಗೆ, ಇದನ್ನು ತೆರೆದಿಡಬಾರದು, ಆದರೆ ಕೀಲಿಕೈಯನ್ನು ಅದರ ಸಂಗಡ ಇಟ್ಟಿರಬೇಕು,

(೨) ಉಪಯೋಗಿಸಲ್ಪಡದೆ ಇದ್ದ ಮತಪತ್ರಕಗಳ ಪುಸ್ತಕಗಳು;

(೩) ಕೊಡಮಾಡಲಾದ ಮತಪತ್ರಕಗಳು,

(೪) ಮತದಾರರ ಯಾದಿಗಳ ಗುರುತು ಮಾಡಲ್ಪಟ್ಟ ಪ್ರತಿಗಳು,

(೫) ಉಪಯೋಗಿಸಿದ ಮತಪತ್ರಕೆಗಳ ಸ್ಥಳಪ್ರತಿಗಳುಳ್ಳ ಪುಸ್ತಕಗಳು, ಮತ್ತು

(೬) ಕೊಡಮಾಡಲಾದ ಮತಗಳ ಯಾದಿಯು

(೨) ಈ ಪಾಕೀಟುಗಳನ್ನು ಅಧ್ಯಕ್ಷನಾದ ಅಮುಲದಾರನು ರಿಟರ್ನಿಂಗ ಆಫೀಸರನ ಕಡೆಗೆ ಅಥವಾ ರಿಟರ್ನಿಂಗ ಆಫೀಸರನಿಂದ ನೇಮಿಸಲ್ಪಟ್ಟ ಬೇರೆ ಯಾವ-ನಾದರೊಬ್ಬ ಮನುಷ್ಯನ ಕಡೆಗೆ, ಮತಗಳು ಎಣಿಸಲ್ಪಡ ವವರೆಗೆ ಹಾಗೂ ಉಪಯೋಗಿಸಲ್ಪಟ್ಟ ಪ್ರತಿಗಳ ಪುಸ್ತಕಗಳು ೩೩ನೇ ಕಲಮಿನನ್ವಯ ನಾಶಮಾಡಲ್ಪಡುವವರೆಗೆ, ಅವುಗಳ ತಾಬೆಯನ್ನು ತೆಗೆದುಕೊಳ್ಳುವದರ ಸಲುವಾಗಿ ಕಳುಹಿಸಿಕೊಡ-ಬೇಕು ತನ್ನ ವಶಕ್ಕೆ ಕೊಡಲಾಗಿದ್ದ ಮತಪತ್ರಕಗಳ ಸಂಖ್ಯೆಯನ್ನು ತೋರಿಸುವ ಒಂದು ಪತ್ರಿಕೆಯನ್ನು ಅವುಗಳೊಂದಿಗೆ ಕಳಿಸಿಕೊಡತಕ್ಕದ್ದು, ಮತ್ತು ಉಪಯೋಗ ಮಾಡಲಾದ ಮತಪತ್ರಕಗಳು ಎಷ್ಟು ? ಕೊಡಮಾಡಲಾದ ಮತಪತ್ರಕಳು ಎಷ್ಟು? ಹಾಗೂ ಉಪಯೋಗ ಮಾಡದೆ ಇದ್ದ ಮತಪತ್ರಕಗಳು ಎಷ್ಟು ಎಂಬ ಸದರುಗಳ ಕೆಳಗೆ ಲೆಕ್ಕವನ್ನು ಕಳುಹಿಸಿಕೊಡತಕ್ಕದ್ದು.

**೨೮. ಮತಗಣನೆ.**— (೧) ಮತಗಣನೆಗಾಗಿ ೮ನೇ ಕಾನೂನಿನನ್ವಯ ಗೊತ್ತುಪಡಿಸಿದ ದಿವಸ ಹಾಗೂ ವೇಳೆಗೆ ಸದರಿ ರಿಟರ್ನಿಂಗ ಆಫೀಸರನು, ಸದರಿ ಬ್ಯಾಲಟ್ ಪೆಟ್ಟಿಗೆಗಳನ್ನು ಒಂದೊಂದಾಗಿ ತೆರೆಯತಕ್ಕದ್ದು. ಹಾಗೂ ಹಾಜರಿರಬಹುದಾದ ಉಮೇದವಾರರ ಹಾಗೂ ಅವರ ಚುನಾವಣೆಯ ಏಜಂಟರ ಸಮಕ್ಷಮ ಮತಗಣನೆಯನ್ನು ಮಾಡತಕ್ಕದ್ದು.

(೨) ಸ್ಪಷ್ಟರೀತಿಯಿಂದ ಕಾಯದೇಶೀರ ಇರುವ ಪತ್ರಕಗಳನ್ನು, ಬೇಕಾಯದೇಶೀರ ಹಾಗೂ ಸಂಶಯಾತ್ಮಕ ಪತ್ರಕಗಳಿಂದ ಬೇರೆ ಮಾಡತಕ್ಕದ್ದು ಮತದಾರನು, ಯಾವ ಮತಪತ್ರಕದ ಮೇಲೆ ತನಗೆ ಕೊಡಲಿಕ್ಕೆ ಹಕ್ಕು ಇದ್ದದ್ದಕ್ಕಿಂತ ಹೆಚ್ಚು ಮತಗಳನ್ನು ಕೊಟ್ಟಿರುವನೋ ಅಥವಾ ಯಾವನೊಬ್ಬ ಉಮೇದವಾರನಿಗೆ ಒಂದಕ್ಕಿಂತ ಹೆಚ್ಚು ಮತಗಳನ್ನು ಕೊಟ್ಟಿರುವನೋ ಅಥವಾ ಯಾವದರ ಮೇಲೆ ಗುರ್ತನ್ನು ಮಾಡಿರುವದಿಲ್ಲವೋ ಅಂಥ ಪ್ರತಿಯೊಂದು ಮತಪತ್ರಕವು ಬೇಕಾಯದೇಶೀರವಾಗತಕ್ಕದ್ದು ಇದಲ್ಲದೆ, ರಿಟರ್ನಿಂಗ ಆಫೀಸರನು, ತನ್ನ ಅಭಿಪ್ರಾಯದ ಮೇರೆಗೆ, ಸದರಿ ಮತದಾರನು ತನ್ನ ಗುರುತು ಸಿಗಬೇಕೆಂದು ಅವನಿಂದ ಬರೆಯಲಾದ ಬರಹವು ಅಥವಾ ಮಾಡಲಾದ ಗುರುತು ಇರುವಂಥ ಯಾವದೇ ಮತಪತ್ರಕವನ್ನು ನಿರಾಕರಿಸಬಹುದು ಮತ್ತು ಅನಿಶ್ಚಿತತೆಯ ಮೂಲಕ ರದ್ದು ಮಾಡಲಾದ ಯಾವದೇ ಮತಪತ್ರಕವನ್ನು ಸಹ ನಿರಾಕರಿಸಬಹುದು ತಾನು ನಿರಾಕರಿಸಿದ ಮತಪತ್ರಕದ ಮೇಲೆ, "ನಿರಾಕರಿಸಲಾಗಿದೆ" ಎಂಬ ಶಬ್ದವನ್ನು ಅವನು ಬರೆಯತಕ್ಕದ್ದು ಹಾಗೂ ಅವಶ್ಯವಿದ್ದಲ್ಲಿ, ನಿರಾಕರಿಸಿದ ಕಾರಣಗಳನ್ನೂ ಬರೆಯತಕ್ಕದ್ದು.

(೩) ಮತಗಣನೆಯ ಕೆಲಸವು ಮುಗಿದ ಬಳಿಕ, ರಿಟರ್ನಿಂಗ ಆಫೀಸರನು, ಕಾದಿಟ್ಟ ಸ್ಥಳವನ್ನು ತುಂಬಲು ಆರಿಸಲ್ಪಡಲಿಕ್ಕೆ ಲಾಯಖರಾಗಿದ್ದ ಉಮೇದವಾರರು ಯಾರಾದರೂ ಇದ್ದರೆ ಅವರೊಳಗಿಂದ, ೬ನೇ ಕಾನೂನಿನ ರೂಲುಗಳಿಗೊಳಪಟ್ಟು ಎಲ್ಲಕ್ಕೂ ಹೆಚ್ಚು ಮತಗಳು ಬಿದ್ದ ಉಮೇದವಾರನು, ಇಂಥ ಕಾದಿಟ್ಟ ಸ್ಥಳಗಳನ್ನು ತುಂಬುವದಕ್ಕೆ ಆರಿಸಲ್ಪಟ್ಟಿದ್ದಾನೆಂದು ಜಾಹೀರ ಮಾಡತಕ್ಕದ್ದು. ಆ ಮೇಲೆ, ಕಾದಿಟ್ಟ ಸ್ಥಳಗಳನ್ನು, ಯಾವವಾದರೂ ಇದ್ದರೆ, ತುಂಬುವದಕ್ಕಾಗಿ ಆರಿಸಲ್ಪಟ್ಟಿದ್ದರೆಂದು ಜಾಹೀರು ಮಾಡಲ್ಪಟ್ಟವರನ್ನು ಹೊರ್ತುಪಡಿಸಿ, ಉಳಿದ ಎಲ್ಲ ಉಮೇದ-ವಾರರೊಳಗಿಂದ, ಎಲ್ಲಕ್ಕೂ ಹೆಚ್ಚು ಮತಗಳು ಬಿದ್ದ ಉಮೇದವಾರನು ಅಥವಾ ಉಮೇದವಾರರು ಕಾದಿಡದಿದ್ದ ಸ್ಥಳಗಳನ್ನು ತುಂಬುವದಕ್ಕಾಗಿ ಆರಿಸಲ್ಪಟ್ಟಿದ್ದಾನೆಂದು ಅಥವಾ ಆರಿಸಲ್ಪಟ್ಟಿದ್ದಾರೆಂದು ರಿಟರ್ನಿಂಗ ಆಫೀಸರನು ಜಾಹೀರಮಾಡತಕ್ಕದ್ದು

(೪) ಇಬ್ಬರು ಅಥವಾ ಹೆಚ್ಚು ಉಮೇದವಾರರಿಗೆ ಬಿದ್ದ ಮತಗಳ ಸಂಖ್ಯೆಯು ಸಮಾನವಿದ್ದಾಗ ಯಾವ ಉಮೇದವಾರನು ಚುನಾಯಿಸಲ್ಪಟ್ಟಿದ್ದಾ-ನೆಂದು ಜಾಹೀರ ಮಾಡಬೇಕೆಂಬದನ್ನು ರಿಟರ್ನಿಂಗ ಆಫೀಸರನ ಸಮಕ್ಷಮ ಹಾಗೂ ಅವನು ಠರಾಯಿಸುವಂಥ ರೀತಿಯಿಂದ ಚೀಟಿಹಾಕಿ ಗೊತ್ತುಪಡಿಸತಕ್ಕದ್ದು.

೨೯ **ಚುನಾವಣೆಯ ಪರಿಣಾಮವನ್ನು ಪ್ರಸಿದ್ಧಿಸುವದು.**— (೧) ರಿಟರ್ನಿಂಗ ಆಫೀಸರನು, ಚುನಾಯಿಸಲ್ಪಟ್ಟ ಉಮೇದವಾರರ ಹೆಸರುಗಳು ಗ್ರಾಮದ

ಚಾವಡಿಯಲ್ಲಿ ಅಥವಾ ಗ್ರಾಮ ಪಂಚಾಯತದ ಕಚೇರಿಯಲ್ಲಿ ಅಥವಾ ಈ ಬಗ್ಗೆ ತನ್ನಿಂದ ನೇಮಿಸಲ್ಪಡಬಹುದಾದ ಇತರ ಯಾವದೊಂದು ಸಾರ್ವಜನಿಕ ಸ್ಥಳದಲ್ಲಿ ಹಚ್ಚಲ್ಪಡುವಂತೆ ವ್ಯವಸ್ಥೆ ಮಾಡತಕ್ಕದ್ದು ಮತ್ತು ಅವನು ಇಂಥ ಹೆಸರನ್ನು ಅಥವಾ ಹೆಸರುಗಳನ್ನು ಕೂಡಲೆ ಕಲೆಕ್ಟರನಿಗೆ ತಿಳಿಸತಕ್ಕದ್ದು.

(ಬ) ಕಲೆಕ್ಟರನು ಸದರಿ ಚುನಾವಣೆಯ ಪರಿಣಾಮವನ್ನು, ತನ್ನ ಕಚೇರಿಯಲ್ಲಿ, ಗ್ರಾಮದ ಚಾವಡಿಯಲ್ಲಿ ಹಾಗೂ ಸದರಿ ಗ್ರಾಮ ಪಂಚಾಯತದ ಕಚೇರಿಯಲ್ಲಿ ಹಚ್ಚಿ ಪ್ರಸಿದ್ಧಿಸತಕ್ಕದ್ದು. ಇದಲ್ಲದೆ ಅವನು ಅದನ್ನು ಜಿಲ್ಲಾ ಲೋಕಲ್ ಬೋರ್ಡಿನ ಅಧ್ಯಕ್ಷನಿಗೆ ತಿಳಿಸತಕ್ಕದ್ದು,

೩೦ **ಚುನಾವಣೆಯ ಕೆಲಸದ ರಿಕಾರ್ಡು:—** ರಿಟರ್ನಿಂಗ ಆಫೀಸರನು ಪ್ರತಿಯೊಂದು ಚುನಾವಣೆಯ ಕೆಲಸದ ಒಂದು ರಿಕಾರ್ಡನ್ನು ಇಡತಕ್ಕದ್ದು

೩೧ **ಮತಪತ್ರಕಗಳ ತಾಬೆ.—** ಮತಗಣನೆಯು ಮುಗಿದ ಬಳಿಕ ಸದರಿ ಮತಪತ್ರಕಗಳನ್ನು, ಅವುಗಳನ್ನು ಯಾವ ಬ್ಯಾಲಟ್ ಪೆಟ್ಟಿಗೆಗಳಿಂದ ತೆಗೆಯಲಾಗಿತ್ತೋ ಆ ಪೆಟ್ಟಿಗೆಗಳಲ್ಲಿ, ಕೂಡಲೆ ತಿರುಗಿ ಇಡತಕ್ಕದ್ದು; ಸದರಿ ಪೆಟ್ಟಿಗೆಗಳಿಗೆ ಕೀಲಿ ಹಾಕತಕ್ಕದ್ದು ಹಾಗೂ ಮೊಹರು ಮಾಡತಕ್ಕದ್ದು ಹಾಗೂ ರಿಟರ್ನಿಂಗ ಆಫೀಸರನು ಅವುಗಳನ್ನು ತನ್ನ ತಾಬೆಯಲ್ಲಿ ಇಟ್ಟುಕೊಳ್ಳತಕ್ಕದ್ದು

೩೨. **ಚುನಾವಣೆಯ ಕಾಗದಪತ್ರಗಳನ್ನು ಹಾಜರಮಾಡೋಣ ಮತ್ತು ಅವುಗಳನ್ನು ತಪಾಸಿಸೋಣ:—** (೧) ಎಣಿಕೆ ಮಾಡಿದ, ನಿರಾಕಸಿದ ಅಥವಾ ಕೊಡಮಾಡಲಾದ ಮತಪತ್ರಕಗಳ ಹಾಗೂ ಅವುಗಳ ಸ್ಥಳಪ್ರತಿಗಳ ಪಾಕೀಟುಗಳು ರಿಟರ್ನಿಂಗ ಆಫೀಸರನ ತಾಬೆಯಲ್ಲಿದ್ದಾಗ್ಗೆ, ಅವುಗಳನ್ನು ಕಲೆಕ್ಟರನ ಹುಕುಮಿನಿಂದಲ್ಲದೆ ತೆರೆಯಬಾರದು, ಅವುಗಳಲ್ಲಿರುವ ಕಾಗದಪತ್ರಗಳನ್ನು ತಪಾಸಿಸಬಾರದು ಅಥವಾ ಹಾಜರ ಮಾಡಬಾರದು.

(೨) **ಕೊಡಮಾಡಲಾದ ಮತಪತ್ರಿಕೆಗಳ ತಪಾಸಣೆ—** ಯಾವನೊಬ್ಬ ಉಮೇದವಾರನ ಚುನಾವಣೆಯು ಗೈರ ಕಾಯದೇಶೀರ ಇದೆಯೋ ಹೇಗೆ ಎಂಬುದನ್ನು ನಿರ್ಣಯಿಸಲು ಕಲೆಕ್ಟರನಿಗೆ, ಕೊಡಮಾಡಲಾದ ಮತಪತ್ರಿಕೆಗಳ ತಪಾಸಣೆ ಮಾಡಲು ಅಧಿಕಾರವಿದೆ.

೩೩. **ಮತಪತ್ರಕಗಳನ್ನು ನಾಶಮಾಡುವದು:—** ಚುನಾವಣೆಯ ಪರಿಣಾಮವನ್ನು ಜಾಹೀರು ಮಾಡಿದ ತಾರೀಖಿನಿಂದ ಒಂದು ತಿಂಗಳು ಮುಗಿದ ನಂತರ, ರಿಟರ್ನಿಂಗ ಆಫೀಸರನು, ಕಲೆಕ್ಟರನ ಮಂಜೂರಿಯನ್ನು ಮುಂಚಿತವಾಗಿ ಪಡೆದು, ಬ್ಯಾಲಟ್ ಪೆಟ್ಟಿಗೆಗಳಲ್ಲಿದ್ದ ಹಾಗೂ ಮೊಹರಬಂದ ಪಾಕೀಟುಗಳಲ್ಲಿದ್ದ ಮತಪತ್ರಕಗಳನ್ನು ಹಿಡಿದು ಸದರಿ ಮತಪತ್ರಕಗಳನ್ನು, ಪಂಚಾಯತವು ನೇಮಿಸಬಹುದಾದ ಪಂಚಾಯತದ ಮೆಂಬರ ಸಮಕ್ಷಮ ನಾಶಪಡಿಸತಕ್ಕದ್ದು.

೩೪ **ಅನೇಕ ಸ್ಥಳಗಳಿಗೆ ಆರಿಸಲ್ಪಡುವದು**.— ಒಂದಕ್ಕಿಂತ ಹೆಚ್ಚು ಸ್ಥಳಗಳಿಗೆ ಚುನಾಯಿಸಲ್ಪಟ್ಟ ಯಾವನೊಬ್ಬ ಮನುಷ್ಯನು, ಇಂಥ ಚುನಾವಣೆಯ ಪರಿಣಾಮವು ಪ್ರಸಿದ್ಧವಾದ ತಾರೀಖಿನಿಂದ ಏಳು ದಿವಸಗಳೊಳಗಾಗಿ, ಅಥವಾ ಇಂಥ ಪ್ರಸಿದ್ಧಿಯು ಬೇರೆ ಬೇರೆ ತಾರೀಖುಗಳಲ್ಲಿ ಮಾಡಲ್ಪಟ್ಟಿದ್ದರೆ, ಇಂಥ ತಾರೀಖುಗಳ ಪೈಕಿ ಕೊನೆಯ ತಾರೀಖಿನಿಂದ ಏಳು ದಿವಸಗಳೊಳಗಾಗಿ, ಒಂದು ಸ್ಥಳದ ಹೊರ್ತು ಇತರ ಯಾವತ್ತು ಸ್ಥಳಗಳಿಗೆ, ರಿಟರ್ನಿಂಗ ಆಫೀಸರನ ಕಡೆಗೆ ತನ್ನ ಸಹಿಯುಳ್ಳ ಲೇಖಿ ನೋಟಿಸಿನ ಮೂಲಕ ರಾಜಿನಾಮೆಯನ್ನು ಕೊಡತಕ್ಕದ್ದು ಇಂಥ ರಾಜಿನಾಮೆ ಕೊಡುವುದರಿಂದ ಅವನ ಬೇರೆ ಜಾಗೆಗಳು ಖಾಲಿ ಆಗುವವು. ಈ ಮೇರೆಗೆ ರಾಜಿನಾಮೆಯನ್ನು ಕೊಡಲಿಕ್ಕೆ ತಪ್ಪಿದರೆ, ಪಂಚಾಯತದಲ್ಲಿದ್ದ ಇಂಥ ಮನುಷ್ಯನ ಯಾವತ್ತೂ ಸ್ಥಳಗಳು ಖಾಲಿಯಾಗತಕ್ಕದ್ದು ಮತ್ತು ಚುನಾವಣೆಯ ನಿರ್ಣಯವು ಅವನಿಗೆ ಏನೂ ಮತಗಳು ಸಿಕ್ಕಿಲ್ಲ ಎಂದು ಆಗುವುದು

೩೫. **ಆಕಸ್ಮಿಕವಾಗಿ ಖಾಲಿಯಾದ ಸ್ಥಳಗಳು**.— ಯಾವದೊಂದು ಪಂಚಾಯತದ ಸದಸ್ಯನ ಜಾಗೆಯು ಖಾಲಿ ಆದ ಬಗ್ಗೆ ೨೩ನೇ ಕಲಮಿನ (೧)ನೆಯ ಪೋಟ-ಕಲಮಿನನ್ವಯ ನೋಟೀಸು ಬಂದ ಮೇಲೆ, ಅಥವಾ ೯ನೇ ಕಲಮಿನನ್ವಯ ಯಾವದೊಂದು ಚುನಾವಣೆಯು ರದ್ದಾಗಿದೆ ಎಂದು ಜಾಹೀರಮಾಡಲ್ಪಟ್ಟಾಗ್ಗೆಲ್ಲ ಹೀಗೆ ಉಂಟಾದ ಖಾಲಿ ಜಾಗೆಯನ್ನು ತುಂಬುವದಕ್ಕಾಗಿ ಒಂದು ಉಪ-ಚುನಾವಣೆಯನ್ನು ಅನುಕೂಲವಾಗಬಹುದಾದಷ್ಟು ಬೇಗನೆ ಜರಗಿಸತಕ್ಕದ್ದು, ಮತ್ತು ೨ನೇ ಹಾಗೂ ४ನೇ ಕಾನೂನುಗಳನ್ನು ಹೊರ್ತುಪಡಿಸಿ ಈ ಕಾನೂನುಗಳು, ಅವಶ್ಯವಿರಬಹುದಾದಂಥ ಬದಲಾವಣೆಗಳೊಂದಿಗೆ, ಇಂಥ ಉಪ-ಚುನಾವಣೆಗೆ ಲಾಗೂ ಆಗತಕ್ಕದ್ದು

**ನಮೂನೆ ಅ** (೧೭ನೇ ಕಾನೂನನ್ನು ನೋಡಿ)

| ಸ್ಥಳ ಪ್ರತಿ<br>ಮತಪತ್ರಕದ ನಂಬರು | ಮೂಲ ಪ್ರತಿ<br>ಮತಪತ್ರಕದ ನಂಬರು | | | |
|---|---|---|---|---|
| ಮತದಾರರ ಯಾದಿಯಲ್ಲಿ<br>ಮತದಾರನ ನಂಬರು | ಅ ನಂ | ಉ ಹೆಸರು | ಉ ಚಿಹ್ನ | ಮತದಾರನಗುರ್ತು |
| ಮತದಾರನ ಸಹಿ<br>ಅಥವಾ ಗುರುತು | ೧<br>೨<br>ಮುಂ. | | | |

ದಯಮಾಡಿ ನಿಮ್ಮ ಮತವನ್ನು (ಮತಗಳನ್ನು) ದಾಖಲ ಮಾಡುವದಕ್ಕಿಂತ ಮುಂಚೆ ಕೆಳಗಿನ ನಿಯಮಗಳನ್ನು ಕಾಳಜೀಪೂರ್ವಕವಾಗಿ ಓದಿರಿ—

(೧) ನಿಮಗೆ ಮತವು ( ಮತಗಳು ) ( ಇರುತ್ತವೆ )

(೨) ಒಂದು ಕತ್ತರಿಯ ಗುರ್ತು ಅಂದರೆ ಒಂದು ಮತವು ಎಂದರ್ಥವಾಗುತ್ತದೆ

(೩) ಯಾವನೇ ಒಬ್ಬ ಉಮೇದವಾರನ ಹೆಸರಿನ ಎದುರಿಗೆ ಒಂದಕ್ಕಿಂತ ಹೆಚ್ಚು ಕತ್ತರಿಯ ಗುರ್ತುಗಳನ್ನು ಹಾಕಬೇಡಿರಿ

(೪) ಒಟ್ಟಿಗೆ .. ಕ್ಕಿಂತ ಹೆಚ್ಚು ಕತ್ತರಿಯ ಗುರ್ತುಗಳನ್ನು ಹಾಕಬೇಡಿರಿ

**ನಮುನೆ ಬ** ಕೂಡಮಾಡಲಾದ ಮತಗಳ ಯಾದಿಗಳು

(೧೬ ನೇ ಕಾನೂನ್ನು ನೋಡಿರಿ)

.. ... .ದ ಗ್ರಾಮಪಂಚಾಯತವು ಮತ ಕೊಡುವ ಸ್ಥಳವು

| ವಾರ್ಡಿನ ಹೆಸರು | ಮತದಾರನ ಹೆಸರು | ಮತದಾರರ ಯಾದಿಯಲ್ಲಿ ಮತದಾರನ ನಂಬರು | ಕೊಟ್ಟ ಮತಗಳ ಸಂಖ್ಯೆ |
|---|---|---|---|
| | | | |

## ನಮೂನೆ ಕ.

(೮ ನೇ ಕಾನೂನನ್ನು ನೋಡಿರಿ) ನೇಮಣೂಕಿಯ ಕಾಗದವು

ವಾರ್ಡಿನ ಹೆಸರು ( ಯಾವ ವಾರ್ಡಿನ ನೇಮಣೂಕಿಯ ಸಲುವಾಗಿ ಉಮೇದವಾರಿ ಇದೆ. )

ಉಮೇದವಾರನ ಪೂರ್ಣ ಹೆಸರು . ವಯಸ್ಸು ವಿಳಾಸ :

ಉಮೇದವಾರನ ಜಾತಿ ( ಶೆಡ್ಯೂಲ್ಡ ವಂಗಡ ಅಥವಾ ಜಾತಿಯ ಹೆಸರು— ಉಮೇದವಾರನ ಕಾದಿಟ್ಟ ಜಾಗೆಯ ಸಲುವಾಗಿ ಇದ್ದರೆ )

(ಯಾವದೇ ಒಂದು ವಾರ್ಡಿನಲ್ಲಿ ಶೆಡ್ಯೂಲ್ಡ ವಂಗಡ ಅಥವಾ ಶೆಡ್ಯೂಲ್ಡ ಜಾತಿಯ ಸಲುವಾಗಿ ಒಂದು ಅಥವಾ ಹೆಚ್ಚು ಜಾಗೆ ಇದ್ದರೆ ಆ ವಂಗಡ ಅಥವಾ ಜಾತಿಯ ಪೈಕಿ ಇರುವನೋ ಅಥವಾ ಇಲ್ಲವೋ ಇದನ್ನು ಬರೆಯಿರಿ

ಶೆಡ್ಯೂಲ್ಡ ವಂಗಡ ಅಥವಾ ಜಾತಿಯವನಿದ್ದರೆ ಆತನ ಜಾತಿಯ ಹೆಸರನ್ನು ಬರೆಯಬೇಕು

ಉಮೇದವಾರನಿಗೆ ಯಾವ ವಾರ್ಡಿನಲ್ಲಿ ಮತಕೊಡುವ ಹಕ್ಕಿದೆಯೋ ಆ ವಾರ್ಡಿನ ಹೆಸರು ಮತ್ತು ಚುನಾವಣೆಯ ಯಾದಿಯಲ್ಲಿ ಅವನ ನಂಬರು

ನಾನು ಆರಿಸಲ್ಪಟ್ಟ ಪಕ್ಷಕ್ಕೆ ಸದಸ್ಯನೆಂದು ಕೆಲಸ ಮಾಡಲು ನಾನು ಇಚ್ಛಿಸುತ್ತೇನೆಂದು ಇದರ ಮೂಲಕ ಈ ಕರಾರು ( ಜಾಹೀರ ) ..ಮಾಡುತ್ತೇನೆ ..

ತಾರೀಖು ಉಮೇದವಾರನ ಸಹಿ.

ಅನುಕ್ರಮ ನಂಬರು ರಿಟರ್ನಿಂಗ ಆಫೀಸರನಿಗೆ ನೇಮಣೂಕಿಯ ಕಾಗದನ್ನು ಕೊಟ್ಟ ತಾರೀಖು ಮತ್ತು ವೇಳೆ . . ....

# ಚುನಾವಣೆ ನಿಯಮಾವಳಿಯ ಸಿಂಹಾವಲೋಕನ

## ಚುನಾವಣೆಯ ಕಾರ್ಯಕ್ರಮವು

೩೫. ಪ್ರತಿಯೊಂದು ಪಂಚಾಯತಿಯ ಪ್ರತಿಯೊಂದು ಚುನಾವಣೆಯ ಕಾರ್ಯಕ್ರಮದಲ್ಲಿ ಕಾಲಾನುಕ್ರಮದಿಂದ ಹಾಗೂ ಕಾರ್ಯಾನುಕ್ರಮದಿಂದ ಕೂಡ ಮೂರು ಭಾಗಗಳಾಗುತ್ತವೆ (೧) ಚುನಾವಣೆಯ ಪೂರ್ವಸಿದ್ಧತೆ. (೨) ಚುನಾವಣೆಯ ದಿವಸ (೩) ಚುನಾವಣೆಯ ನಿರ್ಣಯ ( ನಿಕಾಲ ).

## ೧. ಚುನಾವಣೆಯ ಪೂರ್ವಸಿದ್ಧತೆ

೧ ಚುನಾವಣೆಯ ಪೂರ್ವಸಿದ್ಧತೆಯೊಳಗಿನ ಮೊದಲು ಮಾತೆಂದರೆ, ಮತದಾರರ ಯಾದಿಗಳನ್ನು ತಯಾರಿಸುವದು ಈ ಯಾದಿಗಳು ಚುನಾವಣೆಯ ಪೂರ್ವದಲ್ಲಿ ತೀರ ಕಡಿಮೆಯೆಂದರೆ ಮೂರು ತಿಂಗಳು ಮೊದಲು ಸಿದ್ಧವಾಗಿ, ಗ್ರಾಮದ ಪ್ರಾದೇಶಿಕ ಭಾಷೆಯಲ್ಲಿ ಪ್ರಸಿದ್ಧವಾಗಿ ಚಾವಡಿಯಂಥ ಸಾರ್ವಜನಿಕ ಸ್ಥಳದಲ್ಲಿ ಪ್ರಸಿದ್ಧಿಗಾಗಿ ಅಂಟಿಸಲಿಕ್ಕೆಬೇಕು ( ನಿಯಮ ೩ )

೨ ಈ ಮತದಾರರ ಯಾದಿಗಳನ್ನು ಸುಧಾರಿಸುವ ಆವಶ್ಯಕತೆಯು ಕಂಡು ಬಂದಲ್ಲಿ, ಅದಕ್ಕಾಗಿ ಯಾದಿಗಳು ಪ್ರಸಿದ್ಧವಾದ ದಿವಸದಿಂದ ಹದಿನಾಲ್ಕು ದಿವಸಗಳೊಳಗಾಗಿ ತಕರಾರು ಮಾಡುವದಿದ್ದರೆ, ಅದನ್ನು ಮಾಡಲಿಕ್ಕೆ ಗ್ರಾಮನಿವಾಸಿಗಳಿಗೆ ಅವಕಾಶವುಂಟು ( ನಿಯಮ ೩ )

೩ ಈ ತಕರಾರಿಯ ವಿಚಾರಣೆಯನ್ನು ಸ್ಪೇಶಲ್ ಆಫೀಸರ ( ಅಂದರೆ [illegible]ಕರಿ ಜಿಲ್ಲೆಯ ಮಾಮಲೇದಾರ ) ಅಥವಾ ಕಲೆಕ್ಟರ ಇವರು ಮಾಡುವರು; ಮತ್ತು ಅವರ ನಿರ್ಣಯದಂತೆ ಮತದಾರರ ಯಾದಿಯಲ್ಲಿ ಸುಧಾರಣೆಯಾಗುವದು ಈ ಬಗೆಯಿಂದ ಸುಧಾರಿಸಿದ ಮತದಾರರ ಯಾದಿಗಳು ಚುನಾವಣೆಯ ತಾರೀಖಿನ ಮೊದಲು ತೀರ ಕಡಿಮೆಯೆಂದರೆ ಎರಡು ತಿಂಗಳು ಮೊದಲು ಪ್ರಸಿದ್ಧವಾಗಲಿಕ್ಕೇ ಬೇಕು, ಮತ್ತು ಅವು ಪ್ರಸಿದ್ಧಿಯ ಸಲುವಾಗಿ ಮೇಲೆ ಹೇಳಿದಂತೆ ಅಂಟಿಸಲಾಗುವವು. ( ನಿಯಮ ೪ )

## ೨. ಚುನಾವಣೆಯ ದಿವಸವು

(೧) ಪ್ರತಿಯೊಬ್ಬ ಉಮೇದವಾರನು ಚುನಾವಣೆಯ ತಾರೀಖಿನ ಪೂರ್ವದಲ್ಲಿ ಕನಿಷ್ಠ ಇಪ್ಪತ್ತೈದು ದಿವಸ ಮೊದಲೇ ತನ್ನ ಉಮೇದವಾರಿಯ ಅರ್ಜಿಯನ್ನು ರಿಟರ್ನಿಂಗ ಆಫೀಸರನಿಗೆ ಸ್ವತಃ ಸಾದರಪಡಿಸಲಿಕ್ಕೆ ( ಒಪ್ಪಿಸಲಿಕ್ಕೆ ) ಬೇಕು. ಈ

ಅರ್ಜಿಯಲ್ಲಿ ಉಮೇದವಾರನು ತನ್ನ ಜಾತಿ, ಸಮಾಜ ಮತ್ತು ವರ್ಗ ಬರೆಯಲಿಕ್ಕೇ ಬೇಕು. ( ನಿ. ೮-೯ )

(೨) ರಿಟರ್ನಿಂಗ ಆಫೀಸರನು ಮೂರು ದಿನಗಳಲ್ಲಿ ಉಮೇದವಾರನ ಪಾತ್ರಾಪಾತ್ರತೆಯನ್ನು (ಯೋಗ್ಯಾಯೋಗ್ಯತೆ) ವಿಚಾರಿಸಿ, ಹರಿಯಾಳಿನ ಅರ್ಜಿಯ ಕೆಳಗೆ ನಿಕಾಲೆ (ನಿರ್ಣಯ) ಕೊಡಲಿಕ್ಕೆಬೇಕು ಅರ್ಜಿ ನಾಮಂಜೂರ ಮಾಡಿದ್ದರೆ, ಆದರ ಕಾರಣಗಳನ್ನು ನಮೂದಿಸಲಿಕ್ಕೆಬೇಕು, ಮತ್ತು ಉಮೇದವಾರನಿಗೆ ತನ್ನ ನಿರ್ಣಯವನ್ನು ತಿಳಿಸಲಿಕ್ಕೆಬೇಕು (ನಿ ೧೦)

(೩) ಈ ನಿರ್ಣಯದ ಮೇಲೆ ಕಲೆಕ್ಟರನ ಅಥವಾ ಪ್ರಾಂತ ಆಫೀಸರರ ಕಡೆಗೆ ಅಪೀಲುಮಾಡಲಿಕ್ಕೆ ಬರುತ್ತದೆ

(೪) ಲಾಯಖ ಉಮೇದವಾರರ ಸಂಖ್ಯೆ ಆಯಾ ತುಂಬತಕ್ಕ ಸ್ಥಳಗಳಷ್ಟೇ ಇದ್ದಲ್ಲಿ, ಮತಗಳನ್ನು ತೆಗೆದುಕೊಳ್ಳದಲೇ ಉಮೇದವಾರರು ಆಯ್ಕೆಯಾದ ಬಗ್ಗೆ ಜಾಹೀರಮಾಡಲಿಕ್ಕೆ ಅಡ್ಡಿಯಿಲ್ಲ (ನಿ ೧೪)

೧. ಒಂದು ವೇಳೆ ಮತತೆಗೆದುಕೊಳ್ಳುವ ಅವಶ್ಯಕತೆಯುಂಟಾದಲ್ಲಿ, ರಿಟರ್ನಿಂಗ ಆಫೀಸರನು ಉಮೇದವಾರರ ಒಂದು ಯಾದಿಯನ್ನು ಸಿದ್ಧಮಾಡಲಿಕ್ಕೆ ಬೇಕು ಪ್ರತಿಯೊಬ್ಬರಿಗೆ ಒಂದು ಚಿನ್ಹ (ಗುರುತು) ಕೊಡಲಿಕ್ಕಬೇಕು ಮತ್ತು ಈ ಯಾದಿಗಳನ್ನು ಆಯಾ ಗುರುತುಗಳೊಡನೆ ಚಾವಡಿಯಲ್ಲಿ ಅಂಟಿಸಲಿಕ್ಕೆ (ಹಚ್ಚಲಿಕ್ಕೆ) ಬೇಕು (ನಿ ೧೬-೧೭-೧೮)

೨. ಮುಂಚಿತವಾಗಿಯೇ ಪ್ರಕಟವಾದ ಠರಾವಿನ ದಿವಸ ಪೋಲಿಂಗ ಸ್ಟೇಶನ್ನಿನ (ಮತಗಟ್ಟೆಯ) ಮೇಲೆ ಜಾಹೀರ ಆದ ಅವಧಿಯಲ್ಲಿ ಮತಪತ್ರಿಕೆಗಳನ್ನು ಬಂದುಮಾಡಿದ ಪೆಟ್ಟಿಗೆಯಲ್ಲಿ ಒಗೆಯಲಿಕ್ಕೆಬೇಕು (ನಿ ೧೦-೯)

೩ ಈ ಎಲ್ಲ ಮತಪತ್ರಿಕೆಗಳ ಎಣಿಕೆಯಾಗಿ ಮೊಟ್ಟನೊದಲು ಕಾಯ್ದಿಟ್ಟ ಸ್ಥಳಗಳ ಉಮೇದವಾರರ ಚುನಾವಣೆಯ ನಿರ್ಣಯವು ಪ್ರಕಟಿಸಲಾಗುವದು (ನಿ ೨೮)

೪ ಮತ್ತು ಆ ಮೇಲೆ ಯಾರ ಆಯ್ಕೆಯು ಮೇಲೆ ಕೊಟ್ಟಂತೆ ಜಾಹೀರ ವಾಗಿರುವದೋ, ಅವರನ್ನು ಬಿಟ್ಟು ಮಿಕ್ಕ ಉಮೇದವಾರರ ಕಾಯ್ದಿಡದ ಸ್ಥಳಗಳ ಆಯ್ಕೆಯು ಜಾಹೀರ ಆಗಲಿಕ್ಕೆಬೇಕು. (ನಿ ೨೮)

ಯಾವನೊಬ್ಬ ಉಮೇದವಾರನ ವಿರುದ್ಧ ಇಲ್ಲವೆ ಬೇರೊಬ್ಬ ಉಮೇದವಾರನ ಸಲುವಾಗಿ ಬಹಿರಂಗವಾಗಿ ಕೈಯೆತ್ತಿ ಯಾವ ಸಂಕೋಚವಾಗಲಿ, ಅಡಚಣಿ (ತೊಂದರೆ) ಯಾಗಲಿ ಚುನಾವಣೆಯ ಕಾಲದಲ್ಲಿ ಅನೇಕ ಕಾರಣಗಳ ಮೂಲಕ, ಉತ್ಪನ್ನವಾಗುವ ಸಂಭವವಿರುವದೋ, ಅದು ಈ ಗುಪ್ತಮತದಾನ ಪದ್ಧತಿಯಿಂದ

ಉಳಿಯುವದಿಲ್ಲ, ಮತಗಳನ್ನು ಗುಪ್ತವಾಗಿ ಕೊಡತಕ್ಕದ್ದಿರುವದರಿಂದ ಯಾರು ಯಾರಿಗೋಸುಗ ಮತಕೊಟ್ಟರೆಂಬದು ತಿಳಿಯಲಿಕ್ಕೆ ಮಾರ್ಗವಿರುವದಿಲ್ಲ ಈ ದೃಷ್ಟಿಯಿಂದ ಗುಪ್ತ ಮತದಾನ ಪದ್ಧತಿಯು ಹೆಚ್ಚು ಶ್ರೇಯಸ್ಕರವಾದದ್ದಿರುತ್ತದೆ, ಯಾಕಂದರೆ ತನ್ನ ಸದಸದ್ವಿವೇಕಬುದ್ಧಿಗೆ ಒಪ್ಪಿಗೆಯಾಗುವ ವ್ಯಕ್ತಿಗೆ ಅಂಜಿಕೆಯಿಲ್ಲದೆ ಮತಕೊಡಲಿಕ್ಕೆ ಬರುತ್ತದೆ

## ೭. ಚುನಾವಣೆಯ ನಿರ್ಣಯ

ಆರಿಸಿಬಂದ ಉಮೇದವಾರರ ಹೆಸರುಗಳನ್ನು ಛಾಪಡಿಗೆ ಅಂಟಿಸಲಾಗುವದು, ಮತ್ತು ಅಧ್ಯಕ್ಷನು ಆ ಹೆಸರುಗಳನ್ನು ಕೂಡಲೆ ಕಲೆಕ್ಟರನಿಗೆ ತಿಳಿಸಲಿಕ್ಕೆಬೇಕು ಕಲೆಕ್ಟರನು ಅವುಗಳನ್ನು ಪ್ರಸಿದ್ಧಿಸುವನು. ಹಾಗೂ ಡಿಸ್ಟ್ರಿಕ್ಟ ಲೋಕಲ್ ಬೋರ್ಡಿಗೂ ತಿಳಿಸುವನು

ಪಂಚಾಯತಿಯ ಚುನಾವಣೆಯ ಈ ಕಾರ್ಯಕ್ರಮದ ಮೇಲಿಂದ ಸರಕಾರದವರು ಮಾಡಿದ ನಿಯಮಗಳ ರೂಪರೇಷೆಯು ಸ್ಪಷ್ಟವಾಗುವದು

### ಕ. ೯ (೧) ಚುನಾವಣೆಯು ಬೇಕಾಯದೇಶೀರವಾದುದೆಂದು ಕಲೆಕ್ಟರನು ಜಾಹೀರಮಾಡೋಣ

೮ನೇ ಕಲಮಿನ ಠರಾವುಗಳ ವಿರುದ್ಧವಾಗಿ ಯಾವನೇ ಸಭಾಸದನು ಚುನಾಯಿಸಲ್ಪಟ್ಟಿದ್ದಾನೆಂದು, ಅಥವಾ ಇಂಥ ಚುನಾವಣೆಯ ಸಂಬಂಧದಿಂದ ಯಾವದೇ ಲಂಚಗಾರಿಕೆಯ ಅಥವಾ ಅಕ್ರಮಕೃತ್ಯವು ಮಾಡಲ್ಪಟ್ಟಿದೆಯೆಂದು ಅಥವಾ ೧೮ನೇ ಕಲಮಿನಲ್ಲಿ ೧ನೇ ಪೋಟ-ಕಲಮಿನ (ಕ) ಠರಾವಿನಸ್ವರೂಪ ಮಾಡಲ್ಪಟ್ಟ ಕಾನೂನುಗಳನ್ನು ಆಚರಣೆಯಲ್ಲಿ ತರುವ ಕೆಲಸವು ಒಪ್ಪಿಸಿಕೊಡಲ್ಪಟ್ಟ ಯಾವನೇ ಅಮಲದಾರನಿಂದ ಯಾವದೇ ತಪ್ಪು ಮಾಡಲ್ಪಟ್ಟಿದೆಯೆಂದು ಹಾಗೂ ಇಂಥ ಬೇಕಾಯದೇಶೀರತನದ ಲಂಚಗಾರಿಕೆಯ ಕೃತ್ಯದ ಅಕ್ರಮದ ಅಥವಾ ತಪ್ಪಿನ ಮೂಲಕ ಸದರೀ ಚುನಾವಣೆಯ ಪರಿಣಾಮಕ್ಕೆ ಬಹಳ ಬಾಧೆಯುಂಟಾಗಿದೆಯೆಂದು ಕಲೆಕ್ಟರನಿಗೆ ತನಗೆ ಅವಶ್ಯತೋರಿದ ವಿಚಾರಣೆಯ ನಂತರ ಖಾತ್ರಿಯಾದರೆ, ಕಲೆಕ್ಟರನು (೧ಅ) ಪೋಟ-ಕಲಮಿನ ಠರಾವುಗಳಿಗೊಳಪಟ್ಟು ಸದರಿ ಸಭಾಸದನ ಚುನಾವಣೆಯು ಬೇಕಾಯದೇಶೀರವಾದುದೆಂದು ಜಾಹೀರ ಮಾಡಬಹುದು, ಮತ್ತು ಇಂಥ ಜಾಹೀರಾತಿಯು ಕೊನೆಯದಾಗತಕ್ಕದ್ದು.

ಅದರ ಗೊತ್ತುವಡಿಸುವದೇನೆಂದರೆ ಯಾವನೇ ಸಭಾಸದನು ಲಂಚಗಾರಿಕೆಯ ಕೃತ್ಯವನ್ನು ಮಾಡಿರುತ್ತಾನೆಂದು ಕಲೆಕ್ಟರನಿಗೆ ಖಾತ್ರಿಯಾದಾಗ

ಅವನು— ಬಳಿಕ ಇಂಥ ಲಂಚಗಾರಿಕೆಯ ಕೃತ್ಯದಿಂದ ಸದರಿ ಚುನಾವಣೆಯ ಮೇಲೆ ವಿಶೇಷ ಪರಿಣಾಮವಾಗಿರಲಿ ಅಥವಾ ಆಗದಿರಲಿ— ಇಂಥ ಸಭಾಸದನ ಚುನಾವಣೆಯು ಕಾಯದೆಶೀರವಲ್ಲವೆಂದು ಠರಾಯಿಸಬೇಕು. ಮತ್ತು ಠರಾವ ಕೊನೆಯದಾಗತಕ್ಕದ್ದು

**ವಿಶೇಷ ಠರಾವಿನ ನಂತರ,** ಈ ಕೆಳಗಿನ ವಿವರಣೆಯನ್ನು ನೇರಿಸತಕ್ಕದ್ದು.

**ವಿವರಣೆ**— ಈ ಪೋಟಕಲಮಿನಲ್ಲಿಯ "ತಪ್ಪು" ಎಂಬ ಸಂಜ್ಞೆಯಲ್ಲಿ ೧೧೮ ನೇ ಕಲಮಿನ (೧) ನೇ ಪೋಟ-ಕಲಮಿನ (ಕ) ರಕಮಿನನ್ವಯ ಮಾಡ ಲಾದ ಕಾನೂನಗಳ ಠರಾವುಗಳ ಯಾವದೇ 'ಉಲ್ಲಂಘನೆಯ' ಅಥವಾ ಅವುಗಳ ಅಮಲನಲ್ಲಿ ತರುವ ಕೆಲಸದಲ್ಲಿಯ ಯಾವದೇ ವಿಲೋಪದ ಅಥವಾ ಅವುಗಳನ್ನು ಯಾವದೇ ರೀತಿಯಿಂದ ಪಾಲಿಸದಿರೋಣದರ ಸಮಾವೇಶವಾಗತಕ್ಕದ್ದು

**ಕ ೯ (೧೬) ೧ನೇ ಪೋಟ-ಕಲಮಿಗ ಜೋಡಿಸಲಾದ ವಿಶೇಷ ಠರಾವು ಲಾಗೂ ಆಗದಿರುವಂಥ ಯಾವದೇ ಬಾಬತ್ತಿನಲ್ಲಿ ಯಾವದೊಂದು ಚುನಾವಣೆಯ ಕಾಯದೆಶೀರತನದ ಬಗ್ಗೆ ಇಬ್ಬರು ಅಥವಾ ಹೆಚ್ಚು ಉಮೇದವಾರರ ನಡುವೆ ತಂಟೆಯುಂಟಾದರೆ, ಸದರೀ ಕಲೆಕ್ಟರನು ಪ್ರತಿಯೊಬ್ಬ ಉಮೇದವಾರನಿಗೆ ಅನುಕೂಲವಾಗಿ ಬಿದ್ದ ಮತಗಳ ಪರಿಶೋಧನೆಯನ್ನು ಹಾಗೂ ಎಣಿಕೆಯನ್ನು ಮಾಡಿದನಂತರ, ಯಾವನಿಗೆ ಅನುಕೂಲವಾಗಿ ಎಲ್ಲಕ್ಕೂ ಹೆಚ್ಚು ಸಂಖ್ಯೆಯಷ್ಟು ಕಾಯದೇಶೀರ ಮತಗಳು ಬಿದ್ದಿರುವವೆಂದು ಕಂಡುಬರುವದೋ ಅಂಥ ಉಮೇದವಾರನು ಯೋಗ್ಯ ರೀತಿಯಿಂದ ಚುನಾಯಿಸಲ್ಪಟ್ಟಿದ್ದಾನೆಂದು ಜಾಹೀರಮಾಡತಕ್ಕದ್ದು.**

ಆದರೆ ಗೊತ್ತುಪಡಿಸುವದೇನಂದರೆ, ಇಂಥ ಎಣಿಕೆಯ ಉದ್ದೇಶದ ಸಲುವಾಗಿ ಯಾವದೇ ಮತವು ಅದನ್ನು ಕೊಡುವಾಗ ಅಥವಾ ಪಡೆಯುವಾಗ ಗೊತ್ತಿದ್ದ ಅಥವಾ ಗೊತ್ತಿರದ ಯಾವನೇ ಮನುಷ್ಯನು ಯಾವದೇ ಲಂಚಗಾರಿಕೆಯ ಕೃತ್ಯವನ್ನು ಮಾಡಿದ್ದಾನೆಂದು ಕಲೆಕ್ಟರನಿಗೆ ಕಂಡು ಬಂದರೆ, (ಆ ಮತವು) ಕಾಯದೇಶೀರವೆಂದು ಎಣಿಸಲ್ಪಡತಕ್ಕದ್ದಲ್ಲ.

ಇನ್ನೂ ಗೊತ್ತುಪಡಿಸುವದೇನಂದರೆ, ಇಂಥ ಎಣಿಕೆಯ ನಂತರ ಯಾರಾದರೂ ಉಮೇದವಾರರ ನಡುವೆ ಮತಗಳು ಸಮವಾಗಿ ಬಿದ್ದದ್ದು ಕಂಡುಬಂದರೆ ಮತ್ತು ಒಂದು ಮತವನ್ನು ಹೆಚ್ಚಾಗಿ ಕೊಟ್ಟರೆ ಸದರೀ ಉಮೇದವಾರರ ಪೈಕೀ ಯಾವದೇ ಉಮೇದವಾರನು ಚುನಾಯಿಸಲ್ಪಟ್ಟಿ-ರುವನೆಂದು ಜಾಹೀರಮಾಡಲ್ಪಡಲಿಕ್ಕೆ ಅವನು ಬಾಧ್ಯಸ್ಥನಾಗುವಂತಿದ್ದರೆ, ಕಲೆಕ್ಟರನ ಸಮಕ್ಷಮದಲ್ಲಿ ಅವನು ನಿರ್ಣಯಿಸಬಹುದಾದ ರೀತಿಯಿಂದ

ಚೀಟಿಹಾಕಿ ತೆಗೆದು ಆರಿಸಲ್ಪಟ್ಟ, ಪ್ರಸಂಗವಿದ್ದಂತೆ ಇಂಥ ಉಮೇದವಾರ-ರಿಗೆ ಅನುಕೂಲವಾಗಿ ದೊರಕಿರುತ್ತವೆಂದು ಕಂಡು ಬಂದ ಕಾಯದೇಶೀರ ಮತಗಳ ಒಟ್ಟು ಸಂಖ್ಯೆಗೆ ಒಂದು ಹೆಚ್ಚಿನ ಮತವನ್ನು ಸೇರಿಸತಕ್ಕದ್ದು.

(೨) ಯಾವ ಮನುಷ್ಯನು —

(ಅ) ಯಾವನೇ ಮತದಾರನನ್ನು ಯಾವನೇ ಉಮೇದವಾರನಿಗೆ ಮತ ಕೊಡುವಂತೆ ಅಥವಾ ಕೊಡದಿರುವಂತೆ ಒಲಿಸುವ ಉದ್ದೇಶದಿಂದ ಯಾವನೇ ಮನುಷ್ಯನಿಗೆ ಯಾವದೇ ಹಣವನ್ನು ಅಥವಾ ಬೆಲೆಯುಳ್ಳ ಪ್ರತಿಫಲವನ್ನು ಕೊಡಮಾಡುವನೋ ಅಥವಾ ಕೊಡುವನೋ, ಅಥವಾ ಅವನಿಗೆ ವ್ಯಕ್ತಿಶಃ ಲಾಭ ಮಾಡಿಕೊಡುವೆನೆಂದು ಯಾವದೇ ವಚನವನ್ನು ಕೊಡುವನೋ, ಅಥವಾ ಅವನಿಗೆ ಹಾನಿಯುನ್ನುಂಟುಮಾಡುವ ಅಂಜಿಕೆಯನ್ನು ತೋರಿಸುವನೋ ಅಥವಾ

(ಬ) ಮತವನ್ನು ಕೊಡುವ ಮನುಷ್ಯನಲ್ಲದ ಯಾವನೊಬ್ಬ ಮತದಾರನ ಹೆಸರಿನಲ್ಲಿ ಇಂಥ ಮತವನ್ನು ಕೊಡುವನೋ, ಸಂಗ್ರಹಿಸುವನೋ ಅಥವಾ ಮತ ಕೊಡುವಂತೆ ಸಹಾಯ ಮಾಡುವನೋ

ಅಂಥ ಮನುಷ್ಯನು ಲಂಚಗಾರಿಕೆಯ ಕೃತ್ಯವನ್ನು ಮಾಡಿದನೆಂದು ತಿಳಿಯಬೇಕು

ವಿವರಣೆ ೧— ಯಾವದೊಂದು ಲಂಚಗಾರಿಕೆಯ ಕೃತ್ಯವು ಯಾವನೊಬ್ಬ ಉಮೇದವಾರನಿಂದ ಬುದ್ಧಿಪೂರ್ವಕವಾಗಿ ಮತ್ತು ಅವನ ಸಮ್ಮತಿಯಿಂದ ಮಾಡಲ್ಪಟ್ಟಿದ್ದರ, ಅಥವಾ ಸದರಿ ಚುನಾವಣೆಯ ಸಂಬಂಧದಿಂದ ಇಂಥ ಉಮೇದವಾರನ ಸಾಮಾನ್ಯ ಅಥವಾ ವಿಶೇಷ ಅಧಿಕಾರವನ್ನುಳ್ಳ ಕೆಲಸ ಮಾಡುವ ಮನುಷ್ಯನಿಂದ ಮಾಡಲ್ಪಟ್ಟಿದ್ದರ, ಅದು ಸದರಿ ಉಮೇದವಾರನಿಂದ ಮಾಡಲ್ಪಟ್ಟಿರುತ್ತದೆಂದು ತಿಳಿಯಲ್ಪಡಬೇಕು.

ವಿವರಣೆ ೨— "ವೈಯಕ್ತಿಕ ಲಾಭ ಮಾಡಿಕೊಡುವ ವಚನವು"—

(೧) ಎಂಬ ಸಂಜ್ಞೆಯಲ್ಲಿ, ಪಂಚಾಯತದ ಮುಂದೆ ವಿಚಾರ ಮಾಡುವದಕ್ಕಾಗಿ ಬರಬಹುದಾದ ಯಾವದೇ ವಿಶಿಷ್ಟ ಯೋಜನೆಗೆ ಅನುಕೂಲವಾಗಿ ಅಥವಾ ಅದರ ವಿರುದ್ಧವಾಗಿ ಮತಕೊಡಲಿಕ್ಕೆ ಕೊಟ್ಟ ವಚನವು ಸಮಾವೇಶವಾಗುವದಿಲ್ಲ, ಆದರೆ

(೨) ಅದಕ್ಕೆ ಒಳಪಟ್ಟು, ಸ್ವಂತ ಸದರಿ ಮನುಷ್ಯನ ಅಥವಾ ಅವನು ಸಂಬಂಧಪಡುವ ಯಾವನೇ ಮನುಷ್ಯನ ಲಾಭದ ಬಗ್ಗೆ ಕೊಟ್ಟ ವಚನವು ಸದರಿ ಸಂಜ್ಞೆಯಲ್ಲಿ ಸಮಾವೇಶವಾಗುತ್ತದೆ

**೯ ಅ— ತನಗೆ ಅವಶ್ಯತೋರುವ ಯಾವದೇ ಚೌಕಶಿಯನ್ನು ಮಾಡಿದ ನಂತರ ಮತ್ತು ಸಂಬಂಧಪಟ್ಟ ಸಭಾಸದನಿಗೆ ತನ್ನ ಅಂಬೋಣವನ್ನು ಹೇಳಲಿಕ್ಕೆ ಸಂಧಿಯನ್ನು ಕೊಟ್ಟ ನಂತರ, ಕಲೆಕ್ಟರನಿಗೆ, ಯಾವದೇ ಕಾಲಕ್ಕೆ,—**

**(ಅ) ೬ನೇ ಕಲಮಿನ (೩)ನೇ ಪೋಟ-ಕಲಮಿನನ್ವಯ ನೇಮಿಸಲ್ಪಟ್ಟ ಸಭಾಸದನು ತನ್ನ ನೇಮಣೂಕಿಯ ಕಾಲದಲ್ಲಿ ೬ನೇ ಕಲಮಿನಲ್ಲಿ ಹೇಳಿದ ನಾಲಾಯಖಿಗಳ ಪೈಕಿ ಯಾವದೊಂದು ನಾಲಾಯಖಿಗೆ ಒಳಪಟ್ಟಿರುತ್ತಾನೆಂದು, ಅಥವಾ**

**(ಬ) ಯಾವನೊಬ್ಬ ಚುನಾಯಿಸಲ್ಪಟ್ಟ ಅಥವಾ ನೇಮಿಸಲ್ಪಟ್ಟ ಸಭಾಸದನು, ಪ್ರಸಂಗವಿದ್ದಂತೆ, ತನ್ನ ಚುನಾವಣೆಯ ಮತ್ತು ನೇಮಣೂಕಿಯ ನಂತರ ೬ನೇ ಕಲಮಿನಲ್ಲಿ ಹೇಳಿದ ಯಾವದೇ ನಾಲಾಯಖಿಗೆ ಪಾತ್ರನಾಗಿರುತ್ತಾನೆಂದು ಖಾತ್ರಿಯಾದರೆ, ಅವನು ಪ್ರಸಂಗವಿದ್ದಂತೆ ಇಂಥ ಸಭಾಸದನ ನೇಮಣೂಕು ಬೇಕಾಯದೆಶೀರವಿದೆಯೆಂದು ಮತ್ತು ಇಂಥ ಸಭಾಸದನು ಸದರಿ ಪಂಚಾಯತದ ಸಭಾಸದನೆಂದು ಮುಂದೆ ಕೆಲಸ ಮಾಡತಕ್ಕದ್ದಲ್ಲವೆಂದು ಜಾಹೀರಮಾಡತಕ್ಕದ್ದು**

ಇಂಥ ಜಾಹೀರಾತಿಯು ಕೊನೆಯದಾಗಿರತಕ್ಕದ್ದು.

ಆದ ಚುನಾವಣೆಯು ಯಾರು, ಹೇಗೆ ಮತ್ತು ಯಾವ ಕಾರಣದಿಂದ ಬೇಕಾಯದೇಶೀರ (ಕಟ್ಟಳೆಗೆಟ್ಟದ್ದೆಂದು) ರದ್ದಾಯಿಸಬಹುದು ?

ಕಲೆಕ್ಟರನಿಗೆ—ಅವಶ್ಯವೆನಿಸಿದಷ್ಟು ಚೌಕಶಿ ಮಾಡಿದ ಮೇಲೆ, ಒಂದು ವೇಳೆ ಅವನ ಮನವರಿಕೆಯು ಹೀಗಾದಲ್ಲಿ,

೧. ೬ನೇ ಕಲಮು ಮೀರಿದ ಯಾವನೇ ಸಭಾಸದನು ಆರಿಸಲ್ಪಟ್ಟಿರುವನು ಅಥವಾ

೨. ಇಂಥ ಚುನಾವಣೆಯ ಸಂಬಂಧವಾಗಿ ಯಾವದೇ ಲಂಚಗೂಳಿತನದ ಕೆಲಸ ಅಥವಾ

೩. ( ಇಂಥ ಚುನಾವಣೆಯ ಸಂಬಂಧವಾಗಿ ) ಗೈರಶಿಸ್ತುತನವಾಗಿದೆ,

**ಮತ್ತು**

ಇಂಥ (೧) ಬೇಕಾಯದೇಶೀರತನದಿಂದ (೨) ಲಂಚಗೂಳಿತನದ ಕೃತಿಯಿಂದ ಇಲ್ಲವೆ ಗೈರಶಿಸ್ತತನದಿಂದ ಸದರೀ ಚುನಾವಣೆಯ ಕೆಲಸಕ್ಕೆ ವಿಶೇಷ ಬಾಧೆ ಬಂದಿದ್ದರೆ,

ಇಂಥ ಸಭಾದರ ಚುನಾವಣೆಯು ಬೇಕಾಯದೇಶೀರವಿದೆ ಎಂದು ಠರಾಯಿಸುವ ಅಧಿಕಾರ ಕಲೆಕ್ಟರನಿಗೆ ಇರುತ್ತದೆ,

ಮತ್ತು ಇಂಥ ಠರಾವು ಕೊನೆಯದೊಂದು ತಿಳಿಯಲಾಗುವದು ಆದರೆ ಲಂಚಗೂಳಿತನದ ಕೃತಿಮಾಡಲಾಗಿದೆ ಹೀಗೆ ಮನಸಂಕೆಯಾದರೆ ಇಂಥ ಸಭಾಸದನ ಚುನಾವಣಿ ಬೇಕಾಯದೇಶೀರ ಠರಾಯಿಸಲಿಕ್ಕೆಬೇಕು

ಲಂಚಗೂಳಿತನದ ಕೃತಿ ಯಾವಾಗ್ಗೆ ಆಯಿತು ಹೀಗೆ ಅನ್ನಲಿಕ್ಕೆಬರುವದು ?

## ಚುನಾವಣೆಯು ಅಥವಾ ನೇಮಣೂಕು ಬೇಕಾಯದೇಶೀರಾದರೆ ಹೊಸ ಚುನಾವಣೆಯನ್ನು ಅಥವಾ ನೇಮಣೂಕನ್ನು ಮಾಡೋಣ

**೧೦ ಕಲೆಕ್ಟರನು, ಯಾವನೇ ಸಭಾಸದನ ಚುನಾವಣೆಯು ಅಥವಾ ನೇಮಣೂಕು ಬೇಕಾಯದೇಶೀರವಿದೆಯೆಂದು ಮತ್ತು ಯಾವನೇ ಸಭಾಸದನು ಯಾವದೊಂದು ಪಂಚಾಯತದ ಸಭಾಸದನಾಗಿರುವದು ಚಾಲೂ ಇರಬಾರದೆಂದು ಪ್ರಸಂಗದ ಪ್ರಕಾರ ೯ನೇ ಅಥವಾ ೯ ಅ ಕಲಮಿನನ್ವಯ ಜಾಹೀರಮಾಡಿದರ, ಹೀಗೆ ತೆರವು ಬಿದ್ದ ಸ್ಥಳದ ಸಲುವಾಗಿ ಈ ಆಕ್ಟಿನ ಠರಾವುಗಳ ಪ್ರಕಾರ ಹೊಸ ಚುನಾವಣೆಯು ಅಥವಾ ನೇಮಣೂಕು ಮಾಡಲ್ಪಡಬೇಕು.**

## ಸಭಾಸದರ ಹುದ್ದೆಯ ಮುದತು

**೧೧ (೧) ಪಂಚಾಯತದ ಸಭಾಸದರು, ಈ ಆಕ್ಟಿನಲ್ಲಿ ಇತರ ರೀತಿಯಿಂದ ಠರಾಯಿಸಿದ್ದನ್ನು ಹೊರ್ತುಪಡಿಸಿ, ಮೂರು ವರ್ಷಗಳ ವರಗೆ ಹುದ್ದೆಯನ್ನು ಧಾರಣ ಮಾಡತಕ್ಕದ್ದು**

**(೨) ಕಲೆಕ್ಟರನು ಬರಹಮೂಲಕವಾಗಿ ಹುಕುಮು ಮಾಡಿ, ಅದರಲ್ಲಿ ಬರೆದಿಟ್ಟ ಕಾರಣಗಳ ಬಗ್ಗೆ ಸದರಿ ಮುದತನ್ನು ಒಟ್ಟು ಐದು ವರ್ಷಗಳಿಗಿಂತ ಹೆಚ್ಚಲ್ಲದ ಮುದತಿನ ವರೆಗೆ ಬೆಳಿಸಬಹುದು ಇಂಥ ಯಾವದೇ ಹುಕುಮು ಕಲೆಕ್ಟರನು ಪಸಂತು ಮಾಡಬಹುದಾದ ರೀತಿಯಿಂದ ಪ್ರಸಿದ್ಧಿಸಲ್ಪಡಬೇಕು**

## ಹುದ್ದೆಯ ಮುದತಿನ ಪ್ರಾರಂಭ

**೧೨ (೧) ಸಾಮಾನ್ಯ ಚುನಾವಣೆಯ ಚುನಾಯಿಸಲ್ಪಟ್ಟ ಅಥವಾ ೬ ನೇ ಕಲಮಿನ (೩) ನೇ ಪೋಟ-ಕಲಮಿನನ್ವಯ ನೇಮಿಸಲ್ಪಟ್ಟ ಸಭಾಸದರ**

ಹುದ್ದೆಯ ಮುದತು ಪಂಚಾಯತದ ಮೊದಲನೇ ಸಭೆಯ ತಾರೀಖಿನಿಂದ ಪ್ರಾರಂಭವಾಗುತ್ತದೆಂದು ತಿಳಿಯಬೇಕು. ಚುನಾಯಿಸಲ್ಪಟ್ಟ ಸಭಾಸದರ ಹೆಸರುಗಳು ಯಾವ ತಾರೀಖಿಗೆ ೬ ನೇ ಕಲಮಿನನ್ವಯ ಪ್ರಸಿದ್ಧಿಸಲ್ಪಡುವವೋ ಆ ತಾರೀಖಿನಿಂದ ನಾಲ್ಕು ವಾರಗಳೊಳಗಿರುವಂಥ ಜಿಲ್ಹಾ ಲೋಕಲ್ ಬೋರ್ಡಿನ ಅಧ್ಯಕ್ಷನಿಂದ ಗೊತ್ತುಮಾಡಲ್ಪಟ್ಟ ದಿವಸ ಪಂಚಾಯತದ ಮೊದಲನೇ ಸಭೆಯನ್ನು ನೆರಯಿಸಬೇಕು ನಿರ್ದಿಷ್ಟ ಮಾಡಿದ ಅವಧಿಯೊಳಗೆ ಅಧ್ಯಕ್ಷನು ಇಂಥ ತಾರೀಖನ್ನು ಗೊತ್ತುಮಾಡಲಿಕ್ಕೆ ತಪ್ಪಿದರೆ, ಕಲೆಕ್ಟರನು ಇಂಥ ತಾರೀಖನ್ನು ಗೊತ್ತುಮಾಡತಕ್ಕದ್ದು

(೨) ಹೊರಗೆ ಹೋಗುವ (ಹಿಂದಿನ) ಸಭಾಸದರ ಹುದ್ದೆಯ ಮುದತು, ಇಂಥ ಸಭೆಯ ಹಿಂದಿನ ದಿನದ ವರೆಗೆ ಇರುತ್ತದೆಂದು ಮತ್ತು ಆ ದಿನದಿಂದ ಮುಗಿಯುತ್ತದೆಂದು ತಿಳಿಯಬೇಕು.

## ಸಭಾಸದರ ರಾಜಿನಾಮೆ

೧೩. ಯಾವನೇ ಸಭಾಸದನು ಆ ಬಗ್ಗೆ ಸರಪಂಚನಿಗೆ ಬರಹಮೂಲಕವಾದ ನೋಟೀಸನ್ನು ಕೊಟ್ಟು ತನ್ನ ಹುದ್ದೆಗೆ ರಾಜಿನಾಮೆ ಕೊಡಬಹುದು, ಮತ್ತು ಸದರಿ ರಾಜಿನಾಮೆಯು, ಅದು ಸರಪಂಚನಿಗೆ ಮುಟ್ಟಿದ ತಾರೀಖಿನಿಂದ ಅಮಲಿನಲ್ಲಿ ಬರತಕ್ಕದ್ದು

## ಸರಪಂಚನ ಮತ್ತು ಡೆಪ್ಯುಟಿ ಸರಪಂಚನ ಚುನಾವಣೆಯು

೧೪. ಪ್ರತಿಯೊಂದು ಪಂಚಾಯತಕ್ಕೆ ಒಬ್ಬ ಸರಪಂಚನು ಅಧ್ಯಕ್ಷನಾಗಿರಬೇಕು, ಮತ್ತು ಸಭಾಸದರು ತಮ್ಮೊಳಗಿಂದ ಅವನನ್ನು ಚುನಾಯಿಸಬೇಕು. ಇದಲ್ಲದೆ, ಪಂಚಾಯತವು ತನ್ನ ಸಭಾಸದರೊಳಗಿಂದ ಒಬ್ಬನನ್ನು ಡೆಪ್ಯುಟಿ ಸರಪಂಚನೆಂದು ಚುನಾಯಿಸಬೇಕು

## ಸರಪಂಚನ ಮತ್ತು ಡೆಪ್ಯುಟಿ ಸರಪಂಚನ ಹುದ್ದೆಯ ಮುದ್ದತು

೧೫. ಈ ಆಕ್ಟಿನಲ್ಲಿ ಇತರ ರೀತಿಯಿಂದ ಠರಾಯಿಸಿದ್ದನ್ನು ಹೊರ್ತುಪಡಿಸಿ, ಸರಪಂಚನು ಅಥವಾ ಡೆಪ್ಯುಟಿ ಸರಪಂಚನು ಪಂಚಾಯತದ ಮುದತಿನ ವರೆಗೆ ಹುದ್ದೆಯನ್ನು ಧಾರಣಮಾಡತಕ್ಕದ್ದು.

## ೧೬. ತನ್ನ ಸ್ಥಾನಾಪನನ್ನು ನೇಮಿಸಲ್ಪಡುವ ವರೆಗೆ ಸರಪಂಚನು ತನ್ನ ಚಾಲೂ ಕೆಲಸಗಳನ್ನು ಮಾಡುತ್ತಿರೋಣ

ಸರಪಂಚನು, ತನ್ನ ಹುದ್ದೆಯ ಮುದತು ಮುಗಿದ ಬಳಿಕ, ಹೊಸ ಸರಪಂಚನು ಚುನಾಯಿಸಲ್ಪಡುವವರೆಗೆ ಮತ್ತು ಅವನು ತನ್ನ ಚಾರ್ಜು ತೆಗೆದುಕೊಳ್ಳುವ ವರೆಗೆ, ತನ್ನ ಹುದ್ದೆಯ ಚಾಲೂ ಕೆಲಸಗಳನ್ನು ಮಾಡುತ್ತಿರಬೇಕು.

( ಸ್ಥಾನಾಪನನ್ನು ಅಂದರೆ ತನ್ನ ಸ್ಥಳಕ್ಕೆ ಬರುವ ಬದಲಿ ಇಸಮು)

## ೧೭. ಪಂಚಾಯತವು ಸ್ಥಾಪಿಸಲ್ಪಟ್ಟ ಬಳಿಕ ಸರಪಂಚನ ಚುನಾವಣೆ ಮುಂತಾದ್ದು

(೧) ಈ ಆಕ್ಟಿನನ್ವಯ ಪಂಚಾಯತವು ಮೊದಲನೇ ಸಾರೆ ಸ್ಥಾಪಿಸಲ್ಪಡಲಾಗಿ ಅಥವಾ ಅದು ೧೦೨ ನೇ ಅಥವಾ ೧೦೩ ನೇ ಕಲಮಿನನ್ವಯ ಪುನಃ ರಚಿಸಲ್ಪಡಲಾಗಿ ಅಥವಾ ಸ್ಥಾಪಿಸಲ್ಪಡಲಾಗಿ, ಜಿಲ್ಹಾ ಲೋಕಲ್ ಬೋರ್ಡಿನ ಅಧ್ಯಕ್ಷನು ೧೨ ನೇಕಲಮಿನ (೧)ನೇ ಪೋಟ ಕಲಮಿನನ್ವಯ ಠರಾಯಿಸಲ್ಪಟ್ಟ ತಾರೀಖಿನ ದಿವಸ ಒಂದು ಸಭೆಯನ್ನು ನೆರೆಯಿಸಬೇಕು ಮತ್ತು ಅವನು ಅಲ್ಲಿ ತಾನೇ ಅಧ್ಯಕ್ಷನಾಗಬೇಕು ಅಥವಾ ಪಂಚಾಯತದ ಸಭಾಸದನಲ್ಲದ ಯಾವನೊಬ್ಬ ಮನುಷ್ಯನನ್ನು ಸದರಿ ಸಭೆಯ ಅಧ್ಯಕ್ಷನನ್ನಾಗಿ ನೇಮಿಸಬೇಕು ಜಿಲ್ಹಾ ಲೋಕಲ್ ಬೋರ್ಡಿನ ಅಧ್ಯಕ್ಷನು ಅಥವಾ ಹೀಗೆ ನೇಮಿಸಲ್ಪಟ್ಟ ಮನುಷ್ಯನು ಆ ಬಳಿಕ ಇಂಥ ಸಭೆಯ ಅಧ್ಯಕ್ಷನಾಗಬೇಕು, ಆದರೆ ಅವನಿಗೆ ಮತ ಕೊಡುವ ಹಕ್ಕಿರತಕ್ಕದ್ದಲ್ಲ ಮತ್ತು ಆ ಬಳಿಕ ಆ ಸಭೆಯ ಸರಪಂಚನನ್ನು ಚುನಾಯಿಸುವ ಕೆಲಸವನ್ನು ಕೈಕೊಳ್ಳಬೇಕು. ಮತಗಳು ಸಮಾನವಾದರೆ, ಸರಪಂಚನ ಚುನಾವಣೆಯ ಪರಿಣಾಮವು, ಸದರಿ ಸಭೆಯ ಅಧ್ಯಕ್ಷನು ನಿರ್ಣಯಿಸಬಹುದಾದ ರೀತಿಯಿಂದ ಅವನಿಂದ ಚೀಟಿ ಹಾಕಲ್ಪಟ್ಟು ನಿರ್ಣಯಿಸಲ್ಪಡಬೇಕು.

(೨) ಪಂಚಾಯತದ ಮುದತು ಬಳಿಕ ಸರಪಂಚನು ೧೨ನೇ ಕಲಮಿನ (೧)ನೇ ಪೋಟ-ಕಲಮಿನನ್ವಯ ಠರಾಯಿಸಲ್ಪಟ್ಟ ತಾರೀಖಿನ ದಿವಸ ಹೊಸ ಸರಪಂಚನ ಚುನಾವಣೆಯ ಸಲುವಾಗಿ ಪಂಚಾಯತದ ಒಂದು ಸಭೆಯನ್ನು

ನೆರೆಯಿಸಬೇಕು, ಅವನು ಇಂಥ ಸಭೆಯಲ್ಲಿ ಅಧ್ಯಕ್ಷನಾಗಬೇಕು, ಆದರೆ ಅವನು ಆ ಕಾಲದಲ್ಲಿ ಸದರಿ ಪಂಚಾಯತದ ಸಭಾಸದನಿರದಿದ್ದರೆ, ಆ ಸಭೆಯಲ್ಲಿ ಮತ ಕೊಡಬಾರದು. ಮತಗಳು ಸಮಾನವಾದಾಗ, ಚುನಾವಣೆಯ ಪರಿಣಾಮವು, ಅಧ್ಯಕ್ಷನಿರುವ ಸರಪಂಚನು ನಿರ್ಣಯಿಸ ಬಹುದಾದ ರೀತಿಯಿಂದ ಅವನಿಂದ ಚೀಟಿಹಾಕಿ ನಿರ್ಣಯಿಸಲ್ಪಡಬೇಕು.

ಆದರೆ ಗೊತ್ತುಪಡಿಸುವದೇನಂದರೆ, ನಿವೃತ್ತನಾಗುವ ಸರಪಂಚನು ೧೨ನೇ ಕಲಮಿನ (೧) ನೇ ಪೋಟ-ಕಲಮಿನನ್ವಯ ಠರಾಯಿಸಲ್ಪಟ್ಟ ತಾರೀ ಖಿನ ದಿವಸ, ಸರಪಂಚನ ಚುನಾವಣೆಗಾಗಿ ಯಾವದೇ ಸಭೆಯನ್ನು ಕರೆದಿರ ದಿದ್ದರೆ ಅಥವಾ ಈ ಕಾರಣದ ಬಗ್ಗೆ ಮೇಲೆ ಹೇಳಿದ ತಾರೀಖಿನ ದಿವಸ ಅವನಿಂದ ಕರೆಯಲ್ಪಟ್ಟ ಸಭೆಗೆ ಅವನು ಹಾಜರಾಗಿರದಿದ್ದರೆ, ಜಿಲ್ಹಾ ಲೋಕಲ್ ಬೋರ್ಡಿನ ಅಧ್ಯಕ್ಷನು (೧) ನೇ ಪೋಟ ಕಲಮಿನಲ್ಲಿ ಹೇಳಿದ ರೀತಿಯಿಂದ ಪಂಚಾಯತದ ಒಂದು ಸಭೆಯನ್ನು ಕರೆಯಲುಪಕ್ರಮಿಸಬೇಕು ಮತ್ತು ಆ ಪ್ರಕಾರ ಹೊಸ ಸರಪಂಚನು ಚುನಾಯಿಸಲ್ಪಡಬೇಕು.

೧೨ ನೇ ಕಲಮಿನ (೧ನೇ ಪೋಟ-ಕಲಮಿನನ್ವಯ ಠರಾಯಿಸಲ್ಪಟ್ಟ ತಾರೀಖಿನಿಂದ ೧೫ ದಿವಸಗಳ ಅವಧಿಯೊಳಗೆ ಇಂಥ ಸಭೆಯನ್ನು ಕರೆಯ ಲಿಕ್ಕೆ ಜಿಲ್ಹಾ ಲೋಕಲ್ ಬೋರ್ಡಿನ ಅಧ್ಯಕ್ಷನು ತಪ್ಪಿದರೆ, ಕಲೆಕ್ಟರನು ತಾನೇ ಸ್ವತಃ ಇಂಥ ಸಭೆಯನ್ನು ಕರೆಯತಕ್ಕದ್ದು ಪ್ರಸಂಗವಿದ್ದಂತೆ ಜಿಲ್ಹಾ ಲೋಕಲ್ ಬೋರ್ಡಿನ ಅಧ್ಯಕ್ಷನು ಅಥವಾ ಕಲೆಕ್ಟರನು ಸಭಾಸದರ ಪೈಕಿ ಯಾವನೊಬ್ಬನನ್ನು ಹೀಗೆ ಕರೆದ ಸಭೆಯ ಅಧ್ಯಕ್ಷನೆಂದು ನೇಮಿಸ ಬೇಕು. ಹೀಗೆ ನೇಮಿಸಲಾದ ಮನುಷ್ಯನು ಸಭೆಯ ಅಧ್ಯಕ್ಷನಾಗಲಿಕ್ಕೆ ತಪ್ಪಿದರೆ, ಹಾಜರಿದ್ದ ಸಭಾಸದರು ತಮ್ಮ ಪೈಕಿ ಒಬ್ಬನನ್ನು ಅಧ್ಯಕ್ಷನೆಂದು ಚುನಾಯಿಸಬೇಕು.

(೩) (೧) ನೇ ಪೋಟ-ಕಲಮಿನನ್ವಯ ಅಥವಾ (೨) ನೇ ಪೋಟ-ಕಲಮಿನನ್ವಯ ಯಾವನೊಬ್ಬ ಸರಪಂಚನ ಚುನಾವಣೆಯ ಕಾಯದೇಶೀರ ತನದ ಬಗ್ಗೆ ಯಾವದೊಂದು ತಂಟೆಯು ಉದ್ಭವಿಸಿದ ಪ್ರಸಂಗದಲ್ಲಿ, ಸದರಿ ತಂಟೆಯನ್ನು ಕುರಿತು ನಿರ್ಣಯಕ್ಕಾಗಿ ಕಲೆಕ್ಟರನ ಕಡೆಗೆ ಬರೆದು ಕಳಿಸ ತಕ್ಕದ್ದು. ಕಲೆಕ್ಟರನ ನಿರ್ಣಯವು ಕೊನೆಯದಾಗತಕ್ಕದ್ದು ಮತ್ತು ಯಾವದೇ ದಾವೆಯು ಅಥವಾ ಇತರ ವ್ಯವಹರಣೆಯು ಇಂಥ ಯಾವದೇ ನಿರ್ಣಯದ ಬಾಬತ್ತಿನಲ್ಲಿ ಯಾವದೇ ಕೋರ್ಟಿನಲ್ಲಿ ನಡೆಯತಕ್ಕದ್ದಲ್ಲ.

## ೧೮. ಸರಪಂಚನು ಅಥವಾ ಡೆಪ್ಯೂಟಿ ಸರಪಂಚನು ರಾಜಿನಾಮೆ ಕೊಡೋಣ

ಡೇಪ್ಯೂಟಿ ಸರಪಂಚನಿಗೆ ಬರಹಮೂಲಕವಾದ ನೋಟೀಸನ್ನು ಕೊಟ್ಟು ತನ್ನ ಹುದ್ದೆಗೆ ರಾಜಿನಾಮೆ ಕೊಡಬಹುದು.

ಸರಪಂಚನು ಜಿಲ್ಹಾ ಲೋಕಲ್ ಬೋರ್ಡಿನ ಅಧ್ಯಕ್ಷನಿಗೆ ಬರಹ ಮೂಲಕವಾದ ನೋಟೀಸನ್ನು ಕೊಟ್ಟು ತನ್ನ ಹುದ್ದೆಗೆ ರಾಜಿನಾಮೆ ಕೊಡಬಹುದು.

ಇಂಥ ರಾಜಿನಾಮೆಗಳು ಅವು ಅಂಗೀಕರಿಸಲ್ಪಟ್ಟ ತಾರೀಖಿನಿಂದ ಅಮಲಿನಲ್ಲಿ ಬರತಕ್ಕದ್ದು.

## ೧೯. ಪಂಚಾಯತವು ಸಭೆಗೂಡುವವೇಳೆ ಹಾಗೂ ಸ್ಥಳ ಮತ್ತು ಸಭೆಗಳಲ್ಲಿ ಕೆಲಸ ನಡಿಸುವ ರೀತಿ

ಪಂಚಾಯತವು ಸಭೆಗೂಡುವ ವೇಳೆಯೂ ಮತ್ತು ಸ್ಥಳವು ಮತ್ತು ಅದರ ಸಭೆಯಲ್ಲಿ ನಡಿಸಲ್ಪಡುವ ಕೆಲಸದ ರೀತಿಯೂ ಪೋಟ-ಕಾಯದೆಗಳ ಮೇರೆಗೆ ಇರಬೇಕು

## ೨೦. ಪಂಚಾಯತದ ಅಮಲಬಜಾವಣೆಯ ಅಧಿಕಾರ

ಈ ಆಕ್ಟಿನ ಠರಾವುಗಳನ್ನು ಮತ್ತು ಪಂಚಾಯತದಿಂದ ಪಾಸು ಮಾಡಲ್ಪಟ್ಟ ಠರಾವುಗಳನ್ನು ಅಮಲಿನಲ್ಲಿ ತರುವ ವಿಷಯದ ಅಮಲ ಬಜಾವಣೆಯ ಅಧಿಕಾರವು ಸರಪಂಚನಲ್ಲಿ ನಿವಿಷ್ಟವಾಗಿದೆ, ಮತ್ತು ಅವನು ಈ ಆಕ್ಟಿನಿಂದ ಅಥವಾ ಈ ಆಕ್ಟಿನನ್ವಯ ಪಂಚಾಯತದ ಮೇಲೆ ಹೊರಿಸಲ್ಪಟ್ಟ ಕರ್ತವ್ಯಗಳನ್ನು ಯೋಗ್ಯವಾಗಿ ಕೊನೆಗಾಣಿಸುವ ಬಗ್ಗೆ ಪ್ರತ್ಯಕ್ಷವಾಗಿ ಹೊಣೆಗಾರನಾಗತಕ್ಕದ್ದು. ಸರಪಂಚನು ಇಲ್ಲದಿದ್ದರೆ, ಸರಪಂಚನ ಅಧಿಕಾರಗಳು ಮತ್ತು ಕರ್ತವ್ಯಗಳು, ಪೋಟ-ಕಾಯದೆಗಳಿಂದ ಇತರ ರೀತಿಯಿಂದ ಠರಾಯಿಸಿದ್ದನ್ನು ಹೊರ್ತುಪಡಿಸಿ, ಡೆಪ್ಯುಟಿ ಸರಪಂಚನಿಂದ ನಡಿಸಲ್ಪಡತಕ್ಕದ್ದು ಮತ್ತು ಮಾಡಲ್ಪಡತಕ್ಕದ್ದು.

## ೨೧. ಹುದ್ದೆಯಿಂದ ತೆಗೆದುಹಾಕುವದು

ಜಿಲ್ಹಾ ಲೋಕಲ್ ಬೋರ್ಡು, ಕಲೆಕ್ಟರನ ಮಂಜೂರಿಯನ್ನು ಮುಂಚಿತವಾಗಿ ಪಡೆದು, ಪಂಚಾಯತಕ್ಕೆ ಯೋಗ್ಯ ನೋಟೀಸನ್ನು ಕೊಟ್ಟು ಮತ್ತು ತನಗೆ ಯೋಗ್ಯ ತೋರುವ ಚೌಕಶಿಯನ್ನು ಮಾಡಿ, ಯಾವನು

೧ ದುರ್ನಡತೆಯುವನಿರುವನೋ ಅಥವಾ ತನ್ನ ಕರ್ತವ್ಯವನ್ನು ಮಾಡು ವದರಲ್ಲಿ ತಾತ್ಸಾರವನ್ನು ಅಥವಾ ಅಸಮರ್ಥತೆಯನ್ನು ತೋರಿಸುವನೋ ಅಥವಾ ಯಾವನು ತನ್ನ ಕರ್ತವ್ಯಗಳನ್ನು ಮಾಡುವದರಲ್ಲಿ ಒಂದೇ ಸವನೆ ತಾತ್ಸಾರ ಮಾಡುವನೋ ಅಂಥ ಯಾವನೇ ಸಭಾಸದನನ್ನು ಸರಪಂಚನನ್ನು ಅಥವಾ ಡೆಪ್ಯುಟಿ ಸರಪಂಚನನ್ನು ಹುದ್ದೆಯಿಂದ ತೆಗೆದು ಹಾಕಬಹುದು. ಈ ಪ್ರಕಾರ ತೆಗೆದುಹಾಕಲ್ಪಟ್ಟ ಸರಪಂಚನನ್ನು ಅಥವಾ ಡೆಪ್ಯುಟಿ ಸರಪಂಚ ನನ್ನು, ಜಿಲ್ಹಾ ಲೋಕಲ್ ಬೋರ್ಡಿನ ಮರ್ಜಿಯ ಮೇರೆಗೆ ಅಂಥ ಮಂಜೂರಿಗೊಳಪಟ್ಟು, ಸದರಿ ಪಂಚಾಯತದಿಂದ ಸಹ ತೆಗೆದುಹಾಕ ಬಹುದು.

ಜಿಲ್ಹಾ ಲೋಕಲಬೋರ್ಡಿಗೆ ಯಾವದೊಂದು ಪಂಚಾಯತಿಯ ಯಾವ ನೊಬ್ಬನು (೧) ಸಭಾಸದ ಇಲ್ಲವೆ (೨) ಸರಪಂಚ ಇಲ್ಲವೆ (೩) ಡೆಪ್ಯುಟಿ ಸರಪಂಚ (೧) ಗೈರವರ್ತನೆ, ಇಲ್ಲವೆ (೨) ತನ್ನ ಕರ್ತವ್ಯದ ಕಡೆಗ ದುರ್ಲಕ್ಷ್ಯ ಅಥವಾ (೩) ಅದನ್ನು ಮಾಡುವ ಅಯೋಗ್ಯತೆ (ನಾಲಾಯಖಿ) ಇವುಗಳಿಗಾಗಿ ದೋಷಿ ಯೆಂದು ಠರಾಯಿಸಿರುವನೋ— ಅವನಿಗೆ ಪಂಚಾಯತಿಗೆ ಯೋಗ್ಯ ನೋಟೀಸು ಕೊಟ್ಟ ಮೇಲೆ ಮತ್ತು ಅದಕ್ಕೆ (ಲೋಕಲ ಬೋರ್ಡಿಗೆ) ಯೋಗ್ಯವೆಂದು ತೋರು ವಷ್ಟು ಚವಕಶಿಮಾಡಿದ ಮೇಲೆ ಕಲೆಕ್ಟರನ ಮುಂಗಡ ಮಂಜೂರಿಯಿಂದ ಹುದ್ದೆ ಯಿಂದ ತೆಗೆದುಹಾಕುವ ಅಧಿಕಾರವಿರುತ್ತದೆ. ಈ ರೀತಿಯಿಂದ ತೆಗೆದುಹಾಕಿದ (೧) ಸರಪಂಚನಿಗೆ (೨) ಡೆಪ್ಯುಟಿ ಸರಪಂಚನಿಗೆ ಸದರೀ ಜಿಲ್ಹಾ— ಲೋಕಲ್ ಬೋರ್ಡಿನ ಮನಸಿಗೆ ಬಂದಲ್ಲಿ-ಅಂಥದೇ ಮಂಜೂರಿಗೆ ಪಾತ್ರನಾಗಿ ಉಳಿದ- (ಕಲೆಕ್ಟರನ ಮುಂಗಡ ಮುಂಜೂರಿಯಿಂದ) ಪಂಚಾಯತಿಯೊಳಗಿಂದಾದರೂ ತೆಗೆದು ಹಾಕುವ ಅಧಿಕಾರವಿದೆ.

"ಜಿಲ್ಹಾ ಲೋಕಲ್ ಬೋರ್ಡಿನ ಮತದಿಂದ" "ಜಿಲ್ಹಾ ಲೋಕಲ್ ಬೋರ್ಡಿಗೆ ಯೋಗ್ಯವಾಗಿ ತೋರುವಂಥ ಚವಕಶಿ" "ಜಿಲ್ಹಾ ಲೋಕಲ್ ಬೋರ್ಡಿನ ಮನಸಿಗೆ ಬಂದರೆ" (ಈ ಕೆಲಸದಲ್ಲಿ ಜಿಲ್ಹಾ ಲೋಕಲ್ ಬೋರ್ಡವು ಬಹುಮತದಿಂದ ಠರಾವು ಮಾಡತಕ್ಕದ್ದಿರುತ್ತದೆ)

## ೨೨. ಗೈರಹಾಜರಿಯ ರಜೆ

(೧) ಪಂಚಾಯತದ ಯಾವ ಸಭಾಸದನು ತನ್ನ ಹುದ್ದೆಯ ಅವಧಿಯಲ್ಲಿ—

(ಅ) ಅವನಿಗೆ ಪಂಚಾಯತದಿಂದ ಅವನ ಗ್ರಾಮದಿಂದ ಆರು ತಿಂಗ ಳಿಗಿಂತ ಹೆಚ್ಚಿಲ್ಲದ ಮುದತಿನ ವರೆಗೆ ಗೈರಹಾಜರಾಗಲಿಕ್ಕೆ ರಜೆಯು ಕೊಡ

ಲ್ಪಟ್ಟ ಹೊರ್ತು, ನಾಲ್ಕಕ್ಕಿಂತ ಹೆಚ್ಚು ತಿಂಗಳ ವರೆಗೆ ಸತತವಾಗಿ ಗೈರ ಹಾಜರಾಗುವನೋ, ಅಥವಾ

(ಬ) ಸದರಿ ಪಂಚಾಯತದ ಪರವಾನಗಿ ಇಲ್ಲದೆ ಪಂಚಾಯತದ ಸಭೆಗಳಿಂದ ಸತತ ಆರು ತಿಂಗಳ ವರೆಗೆ ಗೈರಹಾಜರಾಗುವನೋ ಇಂಥ ಸಭಾಸದನು ಸಭಾಸದನಾಗಿರುವದು ನಿಂತು ಹೋಗತಕ್ಕದ್ದು ಮತ್ತು ಅವನ ಹುದ್ದೆಯು ಖಾಲಿಯಾಗತಕ್ಕದ್ದು.

(೨) ಈ ಕಲಮಿನನ್ವಯ ಯಾವದೊಂದು ಸ್ಥಳವು ಖಾಲಿಯಾಗಿರುವದೋ ಅಥವಾ ಇಲ್ಲವೋ ಎಂಬ ಸಂಬಂಧದ ಯಾವದೇ ವಿವಾದವು ಕಲೆಕ್ಟರನ ನಿರ್ಣಯದ ಸಲುವಾಗಿ ಕಳುಹಿಸಿಕೊಡಲ್ಪಡಬೇಕು, ಮತ್ತು ಅವನ ನಿರ್ಣಯವು ಕೊನೆಯದಾಗಿರತಕ್ಕದ್ದು.

## ೨೨. (ಅ) ಪುನಃ ಚುನಾವಣೆಯ ಪ್ರಸಂಗದಲ್ಲಿಯ ಪಾತ್ರತೆ

ಯಾವನೊಬ್ಬ ಪಂಚಾಯತಿಯ ಸಭಾಸದನ ನೇಮಣೂಕು ಕ. ೯. (ಅ)ದ ಪ್ರಕಾರ ಬೇಕಾಯದೇಶೀರ ಎಂದು ಜಾಹೀರ ಮಾಡುವುದರಲ್ಲಿ ಬಂದಿದ್ದರೆ ಅಥವಾ ಯಾವನ ಜಾಗೆಯು ಕ. ೨೨ ರ ಪ್ರಕಾರ ಖಾಲಿ ಆಗಿದ್ದರೆ ಆತನ ನಾಲಾಯಖಿ ಅಥವಾ ಅಪಾತ್ರತೆಯು ಇಲ್ಲದಂತಾದಮೇಲೆ ಆತನಿಗೆ ಮತ್ತೆ ಚುನಾವಣೆಗೆ ನಿಲ್ಲಲಿಕ್ಕೆ ಅಧಿಕಾರವಿದೆ.

ಪಂಚಾಯತಿಯ ಸಭಾಸದನು ತನ್ನ ಹುದ್ದೆಯ ಮುದ್ದತಿನಲ್ಲಿ, ಸದರಿ ಊರೊಳಗಿಂದ ಒಂದೇಸವನೆ ನಾಲ್ಕು ತಿಂಗಳುಗಳಿಗಿಂತ ಹೆಚ್ಚು ಮುದ್ದತ್ತಿನ ವರೆಗೆ ಗೈರಹಾಜರ ಇದ್ದರೆ— (ಆರು ತಿಂಗಳುಗಳಿಗಿಂತ ಹೆಚ್ಚಲ್ಲದಷ್ಟು ಮುದ್ದತ್ತಿನ ವರೆಗೆ ಈ ಬಗೆಯಿಂದ ಗೈರಹಾಜರಾಗಿ ನಿಲ್ಲಲು ಅಪ್ಪಣೆ (ಪರವಾನಗಿ) ಕೊಟ್ಟಹೊರತು [ಪರವಾನಗಿಯಿಲ್ಲದಾಗ]-

## ೨೩. ಖಾಲಿಯಾದ ಸ್ಥಳಗಳನ್ನು ತುಂಬೋಣ

(೧) ಸರಪಂಚನ ಅಥವಾ ಡೆಪ್ಯುಟಿ ಸರಪಂಚನ ಅಥವಾ ಯಾವನೊಬ್ಬ ಸಭಾಸದನ ಅಂಗಹೀನತ್ವ, ಮರಣ, ರಾಜಿನಾಮೆ, ನಾಲಾಯಖಿ, ಪರವಾನಗಿ ಇಲ್ಲದ ಗೈರಹಾಜರಿ ಅಥವಾ ತೆಗೆದು ಹಾಕೋಣ, ಇವುಗಳ ಮೂಲಕ ಖಾಲಿ ಬಿದ್ದ ಯಾವ ಸ್ಥಳದ ಸಂಬಂಧದಿಂದ ಕಲೆಕ್ಟರನಿಗೆ ಠರಾಯಿಸಿದ ರೀತಿಯಿಂದ ನೋಟೀಸು ಕೊಡಲ್ಪಟ್ಟಿರುವದೋ ಅಂಥ ಯಾವದೇ ಸ್ಥಳವನ್ನು ಸರಪಂಚನ ಅಥವಾ ಡೆಪ್ಯುಟಿ ಸರಪಂಚನ ಅಥವಾ

ಸಭಾಸದನ ಚುನಾವಣೆಯಿಂದ ತುಂಬಬೇಕು, ಮತ್ತು ಅವನು, ಯಾವ ಸರಪಂಚನ ಡೆಪ್ಯುಟಿ ಸರಪಂಚನ ಅಥವಾ ಸಭಾಸದನ ಸ್ಥಳದಲ್ಲಿ ಚುನಾಯಿಸಲ್ಪಟ್ಟಿರುವನೋ ಅಂಥ ಸರಪಂಚನು, ಡೆಪ್ಯುಟಿ ಸರಪಂಚನು ಅಥವಾ ಸಭಾಸದನು ಸದರೀ ಸ್ಥಳವು ಖಾಲಿ ಆಗಿರದಿದ್ದರೆ ಹುದ್ದೆಯನ್ನು ಧಾರಣ ಮಾಡುತ್ತಿದ್ದ ವೇಳೆಯ ವರೆಗೆ ಮಾತ್ರ ಹುದ್ದೆಯನ್ನು ಧಾರಣ ಮಾಡಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಸದರಿ ಖಾಲಿ ಜಾಗೆಯ ಸಂಬಂಧದ ನೋಟೀಸು ಕಲೆಕ್ಟರನಿಗೆ ಕೊಡಲ್ಪಟ್ಟ ತಾರೀಖಿನಿಂದ ನಾಲ್ಕು ವಾರಗಳೊಳಗಾಗಿ ಯಾವನೇ ಸಭಾಸದನು ಹೀಗೆ ಚುನಾಯಿಸಲ್ಪಡದಿದ್ದರೆ, ಜಿಲ್ಹಾ ಲೋಕಲ್ ಬೋರ್ಡಿನ ಸ್ಥಾಯೀ ಸಮಿತಿಯು, ಲಗತು ಮುಂದಿನ ಎಂಟು ವಾರಗಳೊಳಗಾಗಿ ಚುನಾಯಿಸಲ್ಪಡಲಿಕ್ಕೆ ಲಾಯಖನಾಗುತ್ತಿದ್ದಂಥ ಯಾವನೊಬ್ಬ ಮನುಷ್ಯನನ್ನು ನೇಮಿಸತಕ್ಕದ್ದು. ಸದರಿ ಜಿಲ್ಹಾ ಲೋಕಲ್ ಬೋರ್ಡಿನ ಸ್ಥಾಯೀ ಸಮಿತಿಯು ನಮೂದಿಸಲಾದ ವೇಳೆಯೊಳಗಾಗಿ ಇಂಥ ಯಾವದೇ ನೇಮಣೂಕನ್ನು ಮಾಡಲು ತಪ್ಪಿದರೆ, ಕಲೆಕ್ಟರನು ಇಂಥ ನೇಮಣೂಕನ್ನು ಮಾಡತಕ್ಕದ್ದು ಮತ್ತು ಹೀಗೆ ನೇಮಿಸಲ್ಪಟ್ಟ ಮನುಷ್ಯನು ಈ ಪೋಟ-ಕಲಮಿನನ್ವಯ ಯೋಗ್ಯ ರೀತಿಯಿಂದ ಚುನಾಯಿಸಲ್ಪಟ್ಟಿದ್ದಾನೆಂದು ತಿಳಿಯತಕ್ಕದ್ದು.

ಆದರೆ ಇನ್ನೂ ಗೊತ್ತುಪಡಿಸುವದೇನಂದರೆ; ೬ ನೇ ಕಲಮಿನಲ್ಲಿ ಯಾವದೇ ಮಜಕೂರು ಇದ್ದಾಗ್ಯೂ, ಸದರಿ ಖಾಲಿಯಾದ ಸ್ಥಳವು ಯಾವನೊಬ್ಬ ಚುನಾಯಿಸಲ್ಪಟ್ಟ ಸಭಾಸದನಾಗಿದ್ದರೆ, ಮತ್ತು ಅದು, ಯಾವ ತಾರೀಖಿನ ದಿವಸ ಸದರಿ ಪಂಚಾಯತದ ಸಭಾಸದರ ಹುದ್ದೆಯ ಅವಧಿಯು ೧೧ ನೇ ಕಲಮಿನನ್ವಯ ಮುಗಿಯುವದೋ ಅಂಥ ತಾರೀಖಿನ ಹಿಂದಿನ ನಾಲ್ಕು ತಿಂಗಳೊಳಗಾಗಿ ಉಂಟಾದರೆ, ಸದರಿ ಖಾಲಿಯಾದ ಸ್ಥಳವನ್ನು ತುಂಬತಕ್ಕದ್ದಲ್ಲ.

೨. (೧) ನೇ ಪೋಟ-ಕಲಮಿನನ್ವಯ ಸರಪಂಚನ ಚುನಾವಣೆಯ ವಿಷಯದ ಸಭೆಯನ್ನು, ಜಿಲ್ಹಾ ಲೋಕಲ್ ಬೋರ್ಡಿನ ಅಧ್ಯಕ್ಷನು ೧೭ ನೇ ಕಲಮಿನ (೧)ನೇ ಪೋಟ ಕಲಮಿನಲ್ಲಿ ವಿವರಿಸಿದ ರೀತಿಯಿಂದ ನೆರೆಯಿಸಬೇಕು.

**ಕಲಮು ೨೩ ರಂತೆ ಕೊಡುವ ನೋಟೀಸು**

೧. ಸರಪಂಚನ, ಡೆಪ್ಯುಟಿ ಸರಪಂಚನ ಅಥವಾ ಸಭಾಸದನ ಹುದ್ದೆಯ ಖಾಲಿ ಜಾಗೆಯ ನೋಟೀಸನ್ನು, ಸರಪಂಚನು, ಸರಪಂಚನ ಗೈರಹಾಜರಿಯಲ್ಲಿ ಡೆಪ್ಯುಟಿ ಸರಪಂಚನು, ಮತ್ತು ಸರಪಂಚ ಮತ್ತು ಡೆಪ್ಯುಟಿ ಸರಪಂಚ ಇವರಿಬ್ಬರ ಗೈರಹಾಜರಿಯಲ್ಲಿ ಸೆಕ್ರೆಟರಿಯು ಕಲೆಕ್ಟರನಿಗೆ, ಹೀಗೆ ಖಾಲಿಯಾದ ಏಳು ದಿವಸಗಳೊಳಗೆ ಕೊಡಬೇಕು. ಸರಪಂಚನ ಹುದ್ದೆಯ ಜಾಗೆಯು ಖಾಲಿಯಾಗಿದ್ದರೆ, ನೋಟೀಸಿನ ಒಂದು ಪ್ರತಿಯನ್ನು ಜಿಲ್ಹಾ ಲೋಕಲ್ ಬೋರ್ಡಿನ ಅಧ್ಯಕ್ಷನಿಗೆ ಕಳಿಸಬೇಕು

೨. ನೋಟೀಸಿನಲ್ಲಿ ಸದರಿ ಜಾಗೆ ಖಾಲಿಯಾದ ಕಾರಣವನ್ನು ಹೇಳಬೇಕು, ಮತ್ತು ಮರಣ ಅಥವಾ ರಾಜಿನಾಮೆ ಇದರ ಹೊರ್ತಾಗಿ ಇತರ ಕಾರಣದ ಮೂಲಕ ಜಾಗೆಯು ಖಾಲಿಯಾದ ಬಾಬತಿನಲ್ಲಿ, ಜಾಗೆ ಖಾಲಿಯಾಗುವದಕ್ಕೆ ಉಂಟಾದ ಸಂಗತಿಗಳನ್ನು ನೋಟೀಸಿನಲ್ಲಿ ಹೇಳಬೇಕು

## ೨೪. ಸ್ಥಳವು ಖಾಲಿಯಾದದ್ದರ ಮೇಲಿಂದ ಪಂಚಾಯತದ ಕೆಲಸಗಳಿಗೆ ಬಾಧೆ ತಟ್ಟಲಾರದು

**ಪಂಚಾಯತದಲ್ಲಿ ಯಾವದೇ ಸ್ಥಳವು ಖಾಲಿಬಿದ್ದ ಕಾಲದಲ್ಲಿ, ಚಾಲೂ ಸಭಾಸದರು, ಯಾವದೇ ಖಾಲೀಸ್ಥಳವು ಉಂಟಾಗಿರದಿದ್ದರೆ ಹ್ಯಾಗೋ ಹಾಗೆಯೋ ವರ್ತಿಸಬಹುದು.**

## ೨೫. ಈ ಆಕ್ಟಿನನ್ವಯ ಪಂಚಾಯತಗಳು ಸ್ಥಾಪಿಸಲ್ಪಡುವ ವರೆಗೆ ತಾತ್ಪೂರ್ತಿಕ ವ್ಯವಸ್ಥೆ

**ಈ ಆಕ್ಟಿನಲ್ಲಿ ಯಾವದೇ ಮಜಕೂರು ಇದ್ದಾಗ್ಯೂ, ಗ್ರಾಮದ ಫಂಡಿನ ಕಾರಭಾರವು, ಪ್ರಾಂತಿಕ ಸರಕಾರದವರು ಸರಕಾರೀ ಗ್ಯಾಝೇಟಿನಲ್ಲಿ ಜಾಹೀರನಾಮೆ ಕೊಟ್ಟು ಠರಾಯಿಸಬಹುದಾದ ತಾರೀಖಿನ ವರೆಗೆ, ಸಾಧ್ಯವಿರುವ ಮಟ್ಟಿಗೆ, ಸನ್ ೧೯೨೦ನೇ ಇಸವಿಯ ಮುಂಬಯಿಯ ಗ್ರಾಮ ಪಂಚಾಯತಗಳ ವಿಷಯದ ಆಕ್ಟಿನನ್ವಯ ಸ್ಥಾಪಿಸಲ್ಪಟ್ಟ ಪಂಚಾಯತಗಳಿಂದ — ಈ ಪಂಚಾಯತಗಳು ಈ ಆಕ್ಟಿನನ್ವಯ ಸ್ಥಾಪಿಸಲ್ಪಟ್ಟಿರುವವೆಂದು ತಿಳಿಯಲ್ಪಡತಕ್ಕದ್ದು — ಈ ಆಕ್ಟಿನ ಠರಾವುಗಳನ್ವಯ ನಡಿಸಲ್ಪಡತಕ್ಕದ್ದು.**

## ಪ್ರಕರಣ ಸಮಾರೋಪವು

ಸನ್ ೧೯೩೩ನೇ ಇಸವಿಯ ಕಾಯದೆಯಲ್ಲಿ ಇ ಸ ೧೯೩೯ ರಲ್ಲಿ ವಿಶೇಷ ತಿದ್ದುಪಡೆಯನ್ನು ಮಾಡಿ, ಈ ಕಾಯದೆ ಚಾಲೂ ಮಾಡುವದರಲ್ಲಿ ಬಂದಿರುತ್ತದೆ. ಯಾವ ಸುಧಾರಣೆಗಳ ಸಮಾವೇಶವು ಈ ಪ್ರಕರಣದಲ್ಲಿ ಆಗಿರುವದೋ ಅವು ಕೆಳಗೆ ಕೊಡಲಾಗಿದೆ

(೧) ೨೦೦೦ ವಸ್ತಿಯುಳ್ಳ ಪ್ರತಿಯೊಂದು ಊರಲ್ಲಿ ಪಂಚಾಯತಿಯನ್ನು ಸ್ಥಾಪಿಸುವ ಹೊಣೆಗಾರಿಕೆಯನ್ನು ಸರಕಾರದವರು ತಮ್ಮ ಮೇಲೆ ತಕ್ಕೊಂಡಿರುವರು ೧೦೦೦ ವಸ್ತಿಯುಳ್ಳ ಪ್ರತಿಯೊಂದು ಊರಲ್ಲಿ ಪಂಚಾಯತಿಯನ್ನು ಸ್ಥಾಪಿಸುವ ಧೋರಣವನ್ನು ಸರಕಾರದವರು ಜಾಹೀರಮಾಡಿದ್ದಾರೆ.

(೨) ಎಲ್ಲ ಸಭಾಸದರು ಆರಿಸಿಯೇ ಬರತಕ್ಕವರಿದ್ದಾರೆ

(೩) ಅಲ್ಪಸಂಖ್ಯಾಕರ ಹಿತಸಂರಕ್ಷಣಕ್ಕಾಗಿ ಕಾಯ್ದಿಟ್ಟ ಸ್ಥಳಗಳ ಯೋಜನೆ ಮಾಡಲಾಗಿದೆ

ಮೊದಲಿನ ಕಾಯದೆಯಂತೆ ಗ್ರಾಮಪಂಚಾಯತಿಯ ಬೇಡಿಕೆಯನ್ನು ಊರ ಜನರು ಮಾಡಿದ ಮೇಲೆ ಮತ್ತು ಸರಕಾರದ ಮನಸ್ಸಿಗೆ ಬಂದರೆ, ಪಂಚಾಯತಿಯು ಸ್ಥಾಪನೆಯಾಗುತ್ತಿತ್ತು; ಹೊರತಾಗಿ ಸಭಾಸದರ ಕೆಲವು ಸ್ಥಳಗಳು ಸರಕಾರದಿಂದ ತುಂಬಲಾಗುತ್ತಿದ್ದವು, ಮತ್ತು ಅಲ್ಪಸಂಖ್ಯಾಕರ ಸಲುವಾಗಿ ಕಾದಿಟ್ಟ ಸ್ಥಳಗಳು ಇರುತ್ತಿರಲಿಲ್ಲ.



# ಬಾಬು ೩.

## ಕಾರಭಾರದ ಸಂಬಂಧವಾದ ಅಧಿಕಾರ ಮತ್ತು ಕರ್ತವ್ಯಗಳು

**ಪ್ರಕರಣದ ವಿಷಯು :**— ಪಂಚಾಯತಿಯ ಕಾರಭಾರದ ಅಧಿಕಾರ ಮತ್ತು ಕರ್ತವ್ಯಗಳು— ಪಂಚಾಯತಿಯ ಕಾರಭಾರದ ಕ್ಷೇತ್ರ, ವಿಸ್ತಾರ ಮತ್ತು ಮರ್ಯಾದೆ (ಮೇರೆ).

ಯಾವ ಅಧಿಕಾರ ಹಾಗೂ ಯಾವ ಕರ್ತವ್ಯಗಳು ಗ್ರಾಮಪಂಚಾಯತಿಯ ಕಾರಭಾರದ ಕಕ್ಷೆಯಲ್ಲಿ ಬರಲಾರವು ?

**ಉದಾ.**— ಧಾರ್ಮಿಕ ಉನ್ನತಿಯ ಕೆಲಸ, ಗ್ರಾಮಪಂಚಾಯತಿಯ ಅಧಿಕಾರಕ್ಷೇತ್ರದಲ್ಲಾಗಲಿ, ಕರ್ತವ್ಯಮರ್ಯಾದೆಯಲ್ಲಾಗಲಿ ಬರಲಾರದು.

ಯಾವ ಕರ್ತವ್ಯಗಳನ್ನು **ಅವಶ್ಯವಾಗಿ** ಮುಗಿಸಲಿಕ್ಕೆಬೇಕು; ಮತ್ತು ಯಾವವು ಪಂಚಾಯತಿಯ **ಇಚ್ಛೆಯ** ಮೇಲೆ ಇಟ್ಟಿರುವವು ?

**ಅವಶ್ಯವಾದ** ಕರ್ತವ್ಯಗಳು ಕಲಮು ೨೬ ರಲ್ಲಿ ಕೊಟ್ಟಿರುವವು. **ಐಚ್ಛಿಕ ಕರ್ತವ್ಯಗಳು** ಕಲಮು ೨೬ ಅ ಕೊಡಲಾಗಿವೆ.

ಅವಶ್ಯವಾದ ಕರ್ತವ್ಯಗಳಲ್ಲಿ, ಮನೆವೆಚ್ಚಕ್ಕಾಗಿ ನೀರಿನ ಪೂರೈಕೆ, ಸಾರ್ವಜನಿಕ ಬೀದಿ–ಮಾರ್ಗಗಳು ಮತ್ತು ಸ್ಥಳಗಳ ಸ್ವಚ್ಛತೆ, ಊರೊಳಗಿನ ದೀವಿಗೆ–ದೀಪಗಳು, ಜಾತ್ರೆ–ಸಂತೆಗಳ ನಿಯಮನ ಒಟ್ಟಾರೆ ಊರ ಜನರ (ರಹಿವಾಸಿಗಳ) ಆರೋಗ್ಯಕ್ಕೂ ಸುಸ್ಥಿತಿಗೂ ಹಿತವಾಗುವ ಎಲ್ಲ ಸಂಗತಿಗಳ ಸಮಾವೇಶವಾಗುತ್ತದೆ.

ಐಚ್ಛಿಕ ಕರ್ತವ್ಯಗಳ ಮರ್ಯಾದೆಗಳು ಬಹಳೇ ವಿಸ್ತೃತವಾಗಿರುವವು.

### ೨೬. ಪಂಚಾಯತಗಳ ಕಾರಭಾರ ನಡಿಸುವ ಅಧಿಕಾರ ಮತ್ತು ಕರ್ತವ್ಯಗಳು

(೧) **ಈ ಕೆಳಗಿನ ಬಾಬತುಗಳ ಸಂಬಂಧದಿಂದ, ಜಿಲ್ಹಾ ಲೋಕಲ ಬೋರ್ಡಿನ ಸಾಮಾನ್ಯ ನಿರ್ಬಂಧಕ್ಕೊಳಪಟ್ಟು, ಸದರಿ ಗ್ರಾಮದಲ್ಲಿ ತನ್ನ ಕೈಯಲ್ಲಿದ್ದ ಗ್ರಾಮದ ಫಂಡಿನ ಮಟ್ಟಿಗೆ ವಾಜವಿ ತಜವೀಜು ಮಾಡುವದು ಪಂಚಾಯತದ ಕರ್ತವ್ಯವಾಗಿರುವದು, ಅಂದರೆ:**—

(ಅ) **ಮನೆಯ ಉಪಯೋಗದ ಬಗ್ಗೆ ನೀರಿನ ಪುರವಠೆ ;............೧**

ಉದಾ·— ಭಾವಿ ಇಲ್ಲವೆ ಕೆರೆಗಳನ್ನು ಕಟ್ಟಿಸುವದು ಮತ್ತು ಅವುಗಳ ರಿಪೇರಿ.

(ಬ) ಸಾರ್ವಜನಿಕ ಮಾರ್ಗ, ಕಾಲಿವೆ, ಒಡ್ಡು, ಕೆರೆ ಮತ್ತು ಬಾವಿ (ನೀರಾವರಿಗಾಗಿ ಉಪಯೋಗಿಸಲ್ಪಡುವ ಕೆರೆ ಮತ್ತು ಬಾವಿಗಳ ಹೊರ್ತು) ಮತ್ತು ಇತರ ಸಾರ್ವಜನಿಕ ಸ್ಥಳ ಅಥವಾ ಕಾಮುಗಿರಿಗಳನ್ನು ಸ್ವಚ್ಛ ಮಾಡುವದು ,......................೨

ಟೀಪ್ರ — ಇವುಗಳಲ್ಲಿ ಧರ್ಮ ಶಾಲೆಗಳ ಸಮಾವೇಶವೂ ಆಗುತ್ತದೆ.

(ಬ ಅ) ಸಾರ್ವಜನಿಕ ಬೀದಿಗಳಲ್ಲಿಯು ಅಥವಾ ಸ್ಥಳಗಳಲ್ಲಿಯು ಮತ್ತು ಖಾಸಗಿ ಆಸ್ತಿಯಾಗಿರದಂಥ ಹಾಗೂ ಸಾರ್ವಜನಿಕರ ಉಪಭೋಗದ ಸಲುವಾಗಿ ತೆರೆದಿರುವಂಥ ಜಾಗೆಗಳಲ್ಲಿಯು ಇಂಥ ಜಾಗೆಗಳು ಪಂಚಾಯತದಲ್ಲಿ ನಿವಿಷ್ಟವಾಗಿರಲಿ ಅಥವಾ ಸರಕಾರದವರ ಮಾಲಕಿಗೊಳಪಟ್ಟಿರಲಿ, ಆಟಂಕಗಳನ್ನು ಹಾಗೂ ಮುಂದೆ ಚಾಚಿದ ಭಾಗಗಳನ್ನು ತೆಗೆದು ಹಾಕುವದು ........೩

(ಕ) ಸಾರ್ವಜನಿಕ ಮಾರ್ಗ ಕಾಲಿವೆ, ಒಡ್ಡು ಮತ್ತು ಪೂಲುಗಳನ್ನು ಕಟ್ಟುವದು, ಒಳ್ಳೇ ಸ್ಥಿತಿಯಲ್ಲಿಡುವದು ಮತ್ತು ದುರಸ್ತು ಮಾಡುವದು ;.........................................೪

ಆದರೆ ಗೊತ್ತುಪಡಿಸುವದೇನಂದರೆ, ಸದರಿ ಮಾರ್ಗ, ಕಾಲಿವೆ, ಒಡ್ಡು ಮತ್ತು ಪೂಲುಗಳು ಬೇರೆ ಯಾವದೇ ಸಾರ್ವಜನಿಕ ಅಧಿಕಾರಿಯಲ್ಲಿ ನಿವಿಷ್ಟವಾಗಿದ್ದರೆ, ಇಂಥ ಕೆಲಸಗಳು ಇಂಥ ಅಧಿಕಾರಿಯ ಸಮ್ಮತಿ ಇಲ್ಲದೆ ಕೈಕೊಳ್ಳಲ್ಪಡಬಾರದು.

(ಡ) ಆರೋಗ್ಯರಕ್ಷಣೆ, ಕಸ ಮುಂತಾದ್ದನ್ನು ತೆಗೆದೊಯ್ಯುವದು ಮತ್ತು ಪೀಡನೆಗಳಾದಂತೆ ಮಾಡುವದು ಮತ್ತು ಪೀಡನೆಗಳನ್ನು ಕಡಿಮೆಮಾಡುವದು ;..................................೫

(ಇ) ಸಾರ್ವಜನಿಕ ಆರೋಗ್ಯವನ್ನು ಕಾಪಾಡುವದು ಮತ್ತು ಅದರಲ್ಲಿ ಸುಧಾರಣೆ ಮಾಡುವದು:................................೬

ಟೀಪು — ಊರೊಳಗಿನ ಉಪಹಾರ ಗೃಹಗಳನ್ನು ಸ್ವಚ್ಛವಾಗಿಡಿಸುವ ಜವಾಬದಾರಿ ಹಾಗು ಸಾಂಸರ್ಗಿಕ ರೋಗಗಳನ್ನು ಹಬ್ಬಗೊಡದಿರುವ ಜವಾಬದಾರಿಗಳು ಅದರಲ್ಲಿ ಬರುತ್ತವೆ.

(ಫ) ಪಂಚಾಯತದ ಮಾಲಕಿಯಲ್ಲಿರುವ ಅಥವಾ ಅದರ ನಿರ್ಬಂಧದಲ್ಲಿರುವ ಸಾರ್ವಜನಿಕ ಇಮಾರತುಗಳನ್ನೂ ಹುಲ್ಲುಗಾವಲುಗಳನ್ನೂ (೧೯೨೭ ನೇ ಇಸವಿಯ ಹಿಂದುಸ್ತಾನದ ಜಂಗಲಿನ ಆಕ್ಟಿನ ೨೮ ನೇ ಕಲಮಿನನ್ವಯ ಕೊಡಲ್ಪಟ್ಟ ಭೂಮಿಗಳನ್ನು

ಹಿಡಿದು ) ಜಂಗಲಿನ ಭೂಮಿಗಳನ್ನೂ, (ಕೇವಲ ನೀರಾವರಿಯ ಕೆಲಸಕ್ಕೆ ಉಪಯೋಗಿಸಲ್ಪಡುವ ಕೆರೆ ಮತ್ತು ಬಾವಿಗಳ ಹೊರ್ತಾದ) ಪಂಚಾಯತದಲ್ಲಿ ನಿವಿಷ್ಟವಾಗಿದ್ದ ಅಥವಾ ಅದರ ನಿರ್ಬಂಧದಲ್ಲಿದ್ದ ಕೆರೆಗಳನ್ನೂ ಬಾವಿಗಳನ್ನೂ ಒಳ್ಳೇ ಸ್ಥಿತಿಯಲ್ಲಿಡುವದು ಮತ್ತು ಅವುಗಳ ಉಪಯೋಗದ ನಿಯಮನ ಮಾಡುವದು ;......................................೭

(ಗ) ಗ್ರಾಮದೊಳಗೆ ದೀಪಗಳನ್ನು ಹಚ್ಚುವದು ;....................೮

(ಹ) ಜಾತ್ರೆಗಳ, ಪೇಟೆಗಳ, ಕಟಿಕರ ಮನೆಗಳ ಮತ್ತು ಬಂಡಿ ನಿಲ್ಲಿಸುವ ಸ್ಥಳಗಳ ನಿರ್ಬಂಧ; ಮತ್ತು........... . ..... .. .....೯

(ಐ) ಹೆಣ ಸುಡುವ ಮತ್ತು ಹುಗಿಯುವ ಸ್ಥಳಗಳ ವ್ಯವಸ್ಥೆ ಮಾಡುವದು ಮತ್ತು ಅವುಗಳನ್ನು ನಡಿಸುವದು............೧೦

(೨) ಪಂಚಾಯತವು, ಜಿಲ್ಹಾ ಲೋಕಲ್ ಬೋರ್ಡಿನ ಮಂಜೂರಿಯನ್ನು ಮುಂಚಿತವಾಗಿ ಪಡೆದು, ೧ ನೇ ಪೋಟ ಕಲಮಿನಲ್ಲಿ ಹೇಳಿದ ಸ್ವರೂಪದ ಯಾವದೇ ಕೆಲಸವನ್ನು ಗ್ರಾಮದ ಹೊರಗೆ ಮಾಡುವ ಬಗ್ಗೆ ಸಹ ವ್ಯವಸ್ಥೆ ಮಾಡಬಹುದು.

## ೨೬. ಅ. ಪಂಚಾಯತಗಳ ಮರ್ಜಿಯ ಮೇಲೆ ಇರುವ ಅಧಿಕಾರಗಳು ಹಾಗೂ ಕರ್ತವ್ಯಗಳು

(೧) ಯಾವದೊಂದು ಪಂಚಾಯತವು, ಅದರ ವ್ಯವಸ್ಥೆಯ ಕೆಳಗಿರುವ ಗ್ರಾಮದ ಫಂಡಿನ ಅನಕೂಲತೆಯಿರುವಷ್ಟರ ಮಟ್ಟಿಗೆ ಹಾಗೂ ಜಿಲ್ಹಾ ಲೋಕಲ್ ಬೋರ್ಡಿನ ಸಾಮಾನ್ಯ ನಿಯಂತ್ರಣಕ್ಕೊಳಪಟ್ಟು, ಈ ಕೆಳಗಿನ ವಿಷಯಗಳ ಸಂಬಂಧದಿಂದ ಸದರಿ ಗ್ರಾಮದೊಳಗೆ ವಾಜವಿ ತಜವೀಜು ಮಾಡುವದಕ್ಕೆ ಸಮರ್ಥವಿರತಕ್ಕದ್ದು. ಅಂದರೆ—

(ಅ) ಬೆಳೆಯ ಸಂಬಂಧದ ಪ್ರಯೋಗಗಳು ;

(ಬ) ಕಟುಕರ ಮನೆಗಳನ್ನು ಕಟ್ಟಿಸುವದು ಮತ್ತು ಸುಸ್ಥಿತಿಯಲ್ಲಿಡುವುದು ,

(ಕ) ಅನಾಥರಿಗೆ ಹಾಗೂ ಅಸ್ವಸ್ಥರಿಗೆ ಸಹಾಯ ಕೊಡುವದು ;

(ಡ) ಒಕ್ಕಲತನವನ್ನು ಸುಧಾರಿಸುವದು ;

(ಇ) ಸಹಕಾರೀ ತತ್ವದ ಮೇಲೆ ಹೊಲಸಾಗುವಳಿ ಮಾಡುವದು ;

(ಫ) ದನಗಳನ್ನು ಹಾಗೂ ಪಶುಗಳ ಪೀಳಿಗೆಯನ್ನು ಸುಧಾರಿಸುವದು; ಮತ್ತು ಜನಾವರಗಳ ಸಾಮಾನ್ಯ ಕಾಳಜಿಯನ್ನು ತೆಗೆದುಕೊಳ್ಳುವದು ;

(ಗ) ಕಣಜಗಳನ್ನು ಸ್ಥಾಪಿಸುವದು

(ಹ) ಗ್ರಾಮದ ಗ್ರಂಥಾಲಯಗಳು ಮತ್ತು ವಾಚನಾಲಯಗಳು ;

(ಐ) ರಸ್ತೆಗಳಗುಂಟ, ಪೇಟೆಯ ಸ್ಥಳಗಳಲ್ಲಿ ಹಾಗೂ ಇತರ ಸಾರ್ವಜನಿಕ ಸ್ಥಳಗಳಲ್ಲಿ ಗಿಡಗಳನ್ನು ಹಚ್ಚುವದು. ಮತ್ತು ಅವುಗಳನ್ನು ಸುಸ್ಥಿತಿಯಲ್ಲಿಡುವದು ಹಾಗೂ ಸಂರಕ್ಷಿಸುವದು ;

(ಜೆ) ಗ್ರಾಮದ ಮಕ್ಕಳ ಸಲುವಾಗಿ ಆಟದ ಬೈಲುಗಳನ್ನು ಹಾಗೂ ಸಾರ್ವಜನಿಕ ತೋಟಗಳನ್ನು ರಚಿಸುವದು ಹಾಗೂ ಸುಸ್ಥಿತಿಯಲ್ಲಿಡುವದು ;

(ಕ) ಮನೆಯಲ್ಲಿ ಮಾಡಲಾಗುವ ಉದ್ಯೋಗಗಳನ್ನು ಬೆಳೆಯಿಸುವದು, ಸುಧಾರಿಸುವದು ಹಾಗೂ ಅವುಗಳಿಗೆ ಪ್ರೋತ್ಸಾಹನೆ ಕೊಡುವದು ;

(ಲ) ತಿರುಕ ಹಾಗೂ ಮಾಲಕರಿಲ್ಲದ ನಾಯಿಗಳನ್ನು ಕೊಲ್ಲುವದು ;

(ಮ) ಧರ್ಮಶಾಲೆಗಳನ್ನು ಕಟ್ಟಿಸುವದು ಮತ್ತು ಸುಸ್ಥಿತಿಯಲ್ಲಿಡುವದು ;

(ನ) ಇತರ ಯಾವನೇ ಅಧಿಕಾರಿಯಿಂದ ದೇಖರೇಖಿ ಮಾಡಲ್ಪಡದ ದಿನ್ನಗಾಟಿಗಳ ವ್ಯವಸ್ಥೆ ನೋಡುವದು ಮತ್ತು ಅವುಗಳ ಮೇಲೆ ನಿಯಂತ್ರಣ ವನ್ನಿಡುವದು ;

(ಓ) ಯಾವದೇ ನೈಸರ್ಗಿಕ ಸಂಕಟವು ಸಂಭವಿಸಿದಾಗ್ಗೆ ಗ್ರಾಮದ ರಹಿವಾಸಿಗಳಿಗೆ ಸಹಾಯನೀಡುವದು ;

(ಪ) ಹಕ್ಕು ಹೇಳಲಾಗದಿದ್ದ ಮನುಷ್ಯರ ಹಾಗೂ ಪ್ರಾಣಿಗಳ ಹೆಣಗಳ ಮತ್ತು ಹಕ್ಕು ಹೇಳಲಾಗದಿದ್ದ ದನಗಳ ವ್ಯವಸ್ಥೆ ಮಾಡುವದು ;

(ಕ್ಯು) ಸಾರ್ವಜನಿಕ ಪಾಯಖಾನೆಗಳನ್ನು ಕಟ್ಟಿಸುವದು ಹಾಗೂ ಸುಸ್ಥಿತಿಯಲ್ಲಿಡುವದು ;

(ರ) ಪೇಟೆಗಳನ್ನು ಸ್ಥಾಪಿಸುವದು ಹಾಗೂ ಸುಸ್ಥಿತಿಯಲ್ಲಿಡುವದು ;

(ಸ) ಗ್ರಾಮದ ಹಾಗೂ ಅಲ್ಲಿಯ ಬೆಳೆಗಳ ಮೇಲೆ ಪಹರೆಯನ್ನಿಡುವದು ; ಆದರೆ ಗೊತ್ತುಪಡಿಸುವದೇನಂದರೆ, (ಸ) ಪ್ಯಾರಾಗ್ರಾಫಿನನ್ವಯದ ಪಹರೆಯ ಖರ್ಚನ್ನು ಗ್ರಾಮದಲ್ಲಿಯ ಠರಾಯಿಸಲ್ಪಡಬಹುದಾದಂಥ ಜನರ ಮೇಲೆ ಹಾಗೂ ಅವರ ಕಡೆಯಿಂದ ಮತ್ತು ಅಂಥ ರೀತಿಯಿಂದ ಸದರೀ ಪಂಚಾಯತವು ಕೂಡಿಸತಕ್ಕದ್ದು ಹಾಗೂ ವಸೂಲ ಮಾಡತಕ್ಕದ್ದು.

(೬೩) ಪಂಚಾಯತದ ಸ್ವಚ್ಛತೆಯನ್ನಿಡುವ ಶಿಬಂದಿಯ ಸಲುವಾಗಿ ಮನೆಗಳನ್ನು ಕಟ್ಟಿಸುವದು ಹಾಗೂ ಸುಸ್ಥಿತಿಯಲ್ಲಿಡುವದು.

(೨) ಯಾವದೊಂದು ಪಂಚಾಯತವು, ಸದರಿ ಗ್ರಾಮದ ನಿವಾಸಿಗಳ ಆರೋಗ್ಯದ, ಸುರಕ್ಷಿತತೆಯ, ಶಿಕ್ಷಣದ, ಸುಖದ, ಸೌಕರ್ಯದ ಅಥವಾ ಸಾಮಾಜಿಕ ಅಥವಾ ಆರ್ಥಿಕ ಕಲ್ಯಾಣದ ಅಭಿವೃದ್ಧಿಯನ್ನುಂಟುಮಾಡುವ ಸಂಭವವಿರುವ ಇತರ ಯಾವದೇ ಕೆಲಸವನ್ನು ಅಥವಾ ಉಪಾಯವನ್ನು ಸದರಿ ಗ್ರಾಮದೊಳಗೆ ಕೈಕೊಳ್ಳುವ ಬಗ್ಗೆ ಸಹ ತಜವೀಜು ಮಾಡಬಹುದು.

(೩) ಯಾವದೊಂದು ಪಂಚಾಯತವು, ತನ್ನ ಸಭೆಯಲ್ಲಿ ಪಾಸು ಮಾಡಲ್ಪಟ್ಟ ಹಾಗೂ ತನ್ನ ಸಭಾಸದರ ಇಡೀ ಸಂಖ್ಯೆಯ ಪೈಕಿ ಎರಡು ಮೂರಾಂಶದಷ್ಟು ಸಭಾಸದರಿಂದ ಬೆಂಬಲ ಕೊಡಲ್ಪಟ್ಟ ಠರಾವಿನ ಮೂಲಕ ಸದರೀ ಗ್ರಾಮದೊಳಗೆ ಮಾಡಲಾಗುವ ಯಾವದೇ ಸಾರ್ವಜನಿಕ ಆದರ ಸತ್ಕಾರದ, ಉತ್ಸವದ, ಮನೋರಂಜನೆಯ ಅಥವಾ ಪ್ರದರ್ಶನದ ಸಲುವಾಗಿ ತಜವೀಜನ್ನು ಮಾಡಬಹುದು

ಆದರೆ ಗೊತ್ತುಪಡಿಸುವದೇನಂದರೆ, ಸದರಿ ಪಂಚಾಯತವು ಕಲೆಕ್ಟರನ ಪೂರ್ವ ಮಂಜೂರಿಯನ್ನು ಪಡೆಯದೆ, ಇಂಥ ಯಾವದೇ ಸಾರ್ವಜನಿಕ ಆದರ ಸತ್ಕಾರದ, ಉತ್ಸವದ, ಮನೋರಂಜನೆಯ ಅಥವಾ ಪ್ರದರ್ಶನದ ಬಗ್ಗೆ ೨೫ ರೂಪಾಯಿಗೆ ಮೀರುವ ವೆಚ್ಚವನ್ನು ಮಾಡತಕ್ಕದ್ದಲ್ಲ

೨೭. ಸಂಸ್ಥೆಗಳ ವ್ಯವಸ್ಥೆಯನ್ನು ಮತ್ತು ಇತರ ಕೆಲಸಗಳನ್ನು ಕೊನೆಗಾಣಿಸುವದನ್ನು ತಬದಿಲುಮಾಡಿಕೊಡಲಿಕ್ಕೆ ಜಿಲ್ಲಾ ಲೋಕಲ್ ಬೋರ್ಡಿನ ಅಧಿಕಾರವು

ಜಿಲ್ಹಾ ಲೋಕಲ್‌ಬೋರ್ಡು, ಯಾವದೇ ಕಾಲದಲ್ಲಿ, ಪಂಚಾಯತದ ಅನುಮತಿಯಿಂದ, ಯಾವದೇ ಸಂಸ್ಥೆಯ ವ್ಯವಸ್ಥೆಯನ್ನು ಅಥವಾ ೨೬ನೇ ಕಲಮಿನಲ್ಲಿ ತಜವೀಜುಮಾಡಿರದಿದ್ದ ಯಾವದೇ ಕೆಲಸವನ್ನು ಕೊನೆಗಾಣಿಸುವದನ್ನು ಇಂಥ ಪಂಚಾಯತಕ್ಕೆ ತಬದೀಲು ಮಾಡಿಕೊಡಬಹುದು, ಮತ್ತು ಆ ತರುವಾಯ ಇಂಥ ಪಂಚಾಯತವು ಇಂಥ ಸಂಸ್ಥೆಯ ವ್ಯವಸ್ಥೆ ನೋಡಲುಪಕ್ರಮಿಸುವದು ಅಥವಾ ಇಂಥ ಕೆಲಸವನ್ನು ಕೊನೆಗಾಣಿಸಲುಪಕ್ರಮಿಸುವದು ಕಾಯದೇಶೀರಾಗುವದು

ಆದರೆ ಗೊತ್ತುಪಡಿಸುವದೇನೆಂದರೆ, ಇಂಥ ಪ್ರತಿಯೊಂದು ಬಾಬತಿನಲ್ಲಿ ಇಂಥ ವ್ಯವಸ್ಥೆಗೆ ಅಥವಾ ಕೊನೆಗಾಣಿಸೋಣಕ್ಕೆ ಅವಶ್ಯವಿರುವ ಫಂಡು

ಗಳು, ಜಿಲ್ಲಾ ಲೋಕಲ ಬೋರ್ಡಿನಿಂದ ಸದರಿ ಪಂಚಾಯತದ ತಾಬೆಯಲ್ಲಿ ಕೊಡಲ್ಪಡಬೇಕು.

## ೨೮. ಇತರ ಕರ್ತವ್ಯಗಳು

(೧) ಪಂಚಾಯತವು—

೧ ನೇ ಪ್ರೋಟ ಕಲಮಿನ ೧ ನೇ ರಕಮು ತೆಗೆದು ಹಾಕಲ್ಪಟ್ಟಿತು

(೨) ಈ ಬಗ್ಗೆ ಜಿಲ್ಲಾ ಲೋಕಲ ಬೋರ್ಡಿನಿಂದ ಮಾಡಲ್ಪಡಬೇಕಾದ ಪ್ರೋಟ- ಕಾಯದೆಗಳಿಗೊಳಪಟ್ಟು,—

(ಅ) ಗ್ರಾಮದೊಳಗಿನ ಕಾಮಗಿರಿಗಳ ಮೇಲೆ ಲೋಕಲ್ ಬೋರ್ಡುಗಳು ಕೆಲಸಕ್ಕೆ ಹಚ್ಚಿದ ಕೂಲಿಕಾರರ ಮೇಲೆ ಮೇಲ್ವಿಚಾರಣೆ ನಡಿಸಬೇಕು ;

(ಬ) ಧರ್ಮಶಾಲೆಗಳ ದುರಸ್ತಿಗಳ ಮೇಲೆ ಮೇಲ್ವಿಚಾರಣೆ ನಡಿಸಬೇಕು ;

(ಕ) ದನಗಳ ದೊಡ್ಡಿಗಳ ವ್ಯವಸ್ಥೆ ನೋಡಬೇಕು ; ಮತ್ತು ಅವುಗಳನ್ನು ನಡಿಸಬೇಕು ; ಮತ್ತು

(ಡ) ತನಗೆ ಜಿಲ್ಲಾ ಲೋಕಲ ಬೋರ್ಡಿನಿಂದ ಒಪ್ಪಿಸಿ ಕೊಡಲ್ಪಟ್ಟ ಕೆಲಸಗಳನ್ನು ಮಾಡಬೇಕು ; ಮತ್ತು

(ಇ) ಪ್ರಾಂತಿಕ ಸರಕಾರದವರು ಹೊರಿಸಬಹುದಾದ ಶರ್ತುಗಳಿಗೊಳಪಟ್ಟು ಮತ್ತು ಸಂಬಂಧವಿರುವ ಪಂಚಾಯತದ ಅನುಮತಿಯಿಂದ, ಜಿಲ್ಲಾ ಲೋಕಲ ಬೋರ್ಡಿನ ಆಲೋಚನೆಯನ್ನು ಕೇಳಿಕೊಂಡು, ಪ್ರಾಂತಿಕ ಸರಕಾರದವರು, ಸರಕಾರೀ ಗಾಝೀಟಿನಲ್ಲಿ ಜಾಹೀರನಾಮೆ ಕೊಟ್ಟು, ತನಗೆ ನೇಮಿಸಿ ಕೊಡಬಹುದಾದ ಕಾರಭಾರದ ಸಂಬಂಧದ ಇತರ ಕೆಲಸಗಳನ್ನು, ಕಾಲಿವೆಯ ನೀರನ್ನು ಹಂಚಿಕೊಡುವ ಕೆಲಸವನ್ನು ಹಿಡಿದು, ಮಾಡಬೇಕು.

ಕಲಮು ೨೮ ರಲ್ಲಿಯ ಪ್ರೋಟ ಕಲಮು ೨ನ್ನು ತೆಗೆದು ಹಾಕಲ್ಪಟ್ಟಿತು.

(೩) ಜಿಲ್ಲಾ ಲೋಕಲ್ ಬೋರ್ಡು ಸಾಕಷ್ಟು ಹಣವನ್ನು ಪಂಚಾಯತದ ಸ್ವಾಧೀನದಲ್ಲಿ ಕೊಟ್ಟ ಹೊರ್ತು ೧ ನೇ ಪ್ರೋಟ ಕಲಮಿನ (೨) ನೇ ರಕಮಿನಲ್ಲಿ ನಿರ್ದಿಷ್ಟಮಾಡಿದ ಕರ್ತವ್ಯಗಳನ್ನು ಮಾಡಲಿಕ್ಕೆ ಪಂಚಾಯತವು ಬದ್ಧವಾಗಲಾರದು.

## ೨೮. ಅ. ಎರಡು ಅಥವಾ ಅದಕ್ಕಿಂತ ಹೆಚ್ಚು ಸ್ಥಾನಿಕ ಸಂಸ್ಥೆಗಳ ಸಂಯುಕ್ತ ಸಮಿತಿಗಳು

(೧) ಯಾವದೊಂದು ಪಂಚಾಯತವು, ಕಾಲ ಕಾಲಕ್ಕೆ ಈ ಕೆಳಗಿನ ಬಾಬತುಗಳಲ್ಲಿ, ಇತರ ಯಾವದೇ ಪಂಚಾಯತದ ಕೂಡ ಅಥವಾ ಯಾವದೇ ಮ್ಯುನಸಿಪಾಲಿಟಿಯ, ಜಿಲ್ಲಾ ಲೋಕಲ್‌ಬೋರ್ಡಿನ ಅಥವಾ ಕ್ಯಾಂಟೊನ ಮೆಂಟ ಅಧಿಕಾರಿ ಸಂಘದ ಅಥವಾ ಯಾವದೊಂದು ನೋಟಿಫಾಯಿಡ್ ಕ್ಷೇತ್ರದ ಸಲುವಾಗಿ ನೇಮಿಸಲ್ಪಟ್ಟ ಕಮಿಟಿಯ ಕೂಡ ಅಥವಾ ಒಂದ ಕ್ಕಿಂತ ಹೆಚ್ಚು ಇಂಥ ಪಂಚಾಯತಗಳ ಮ್ಯುನಸಿಪಾಲಿಟಿಗಳ ಜಿಲ್ಲಾ ಲೋಕಲ್‌ಬೋರ್ಡುಗಳ ಅಧಿಕಾರಿ ಸಂಘಗಳ ಅಥವಾ ಕಮಿಟಿಗಳ ಕೂಡ ಒಪ್ಪಿಕೊಳ್ಳಬಹುದು. ಆ ಬಾಬತುಗಳು ಯಾವವೆಂದರೆ—

(ಅ) ಯಾವ ಉದ್ದೇಶದಲ್ಲಿ ಅವುಗಳಿಗೆ ಸಂಯುಕ್ತವಾಗಿ ಹಿತ ಸಂಬಂಧವಿರುವದೊ ಅಂಥ ಯಾವದೇ ಉದ್ದೇಶದ ಬಗ್ಗೆ ತನ್ನ ತಮ್ಮ ಸಂಸ್ಥೆಗಳೊಳಗಿಂದ ಒಂದು ಸಂಯುಕ್ತ ಸಮಿತಿಯನ್ನು ನೇಮಿಸುವದು ಮತ್ತು ಇಂಥ ಸಮಿತಿಯ ಚೇರಮನ್ನನನ್ನು ನೇಮಿಸುವದು ;

(ಬ) ಯಾವದೇ ಸಂಯುಕ್ತ ಕಾಮಗಿರಿಯನ್ನು ರಚಿಸುವ ಹಾಗೂ ಅದನ್ನು ಆ ನಂತರ ಸುಸ್ಥಿತಿಯಲ್ಲಿಡುವ ಬಗ್ಗೆ ಇಂಥ ಪ್ರತಿಯೊಂದು ಸಂಸ್ಥೆಯ ಮೇಲೆ ಬಂಧನಕಾರಕವಾಗುವ ಕರಾರುಗಳನ್ನು ತಯಾರ ಮಾಡುವ ಅಧಿಕಾರವನ್ನು ಮತ್ತು ಇಂಥ ಸಂಸ್ಥೆಗಳ ಪೈಕಿ ಯಾವದೇ ಸಂಸ್ಥೆಯಿಂದ ಅಥವಾ ಯಾವವೇ ಸಂಸ್ಥೆಗಳಿಂದ ನಡಿಸಲ್ಪಡಬಹುದಾಗಿದ್ದ ಯಾವದೇ ಅಧಿಕಾರವನ್ನು ಇಂಥ ಯಾವದೇ ಸಮಿತಿಗೆ ಒಪ್ಪಿಸಿಕೊಡುವದು; ಮತ್ತು

(ಕ) ಯಾವ ಉದ್ದೇಶದ ಸಲುವಾಗಿ ಸದರಿ ಸಮಿತಿಯು ನೇಮಿಸ ಲ್ಪಟ್ಟಿರುವದೋ ಅಂಥ ಉದ್ದೇಶಕ್ಕೆ ಸಂಬಂಧಪಡುವ ಇಂಥ ಯಾವದೇ ಸಮಿತಿಯ ವ್ಯವಹರಣೆಗಳನ್ನು ಹಾಗೂ ಪತ್ರವ್ಯವಹಾರ ನಡಿಸುವದನ್ನು ನಿಯಮನಗೊಳಿಸುವದರ ಸಲುವಾಗಿ ಕಾನೂನಗಳನ್ನು ತಯಾರಿಸುವದು ಹಾಗೂ ಅವುಗಳನ್ನು ಸುಧಾರಿಸುವದು

(೨) ಯಾವದೊಂದು ಪಂಚಾಯತವು, ಕಾಲಕಾಲಕ್ಕೆ ಸರಕಾರ ದವರ ಮಂಜೂರಿಗೊಳಪಟ್ಟು, ಇತರ ಯಾವದೇ ಪಂಚಾಯತದ ಕೂಡ, ಅಥವಾ ಯಾವದೇ ಮ್ಯುನಸಿಪಾಲ್ಟಿಯ, ಜಿಲ್ಲಾ ಲೋಕಲ್ ಬೋರ್ಡಿನ,

ಕ್ಯಾಂಟೋನಮೆಂಟ ಅಧಿಕಾರಿ ಸಂಘದ ಅಥವಾ ಯಾವದೊಂದು ನೋಟಿಫಾಯಿಡ್ ಕ್ಷೇತ್ರದ ಸಲುವಾಗಿ ನೇಮಿಸಲ್ಪಟ್ಟ ಕಮಿಟಿಯು ಕೂಡ ಅಥವಾ ಇಂಥ ಯಾವವೇ ಸಂಸ್ಥೆಗಳ ಸಮೂಹದ ಕೂಡ, ಆಕ್ಟ್ರಾಯ ಡ್ಯೂಟಿಯನ್ನು ಕೂಡ್ರಿಸುವ ಬಗ್ಗೆ ಒಂದು ಕರಾರನಾಮೆಯನ್ನು ಮಾಡಿಕೊಳ್ಳಬಹುದು ಮತ್ತು ಸದರಿ ಕರಾರನಾಮೆಯಿಂದ ಹೀಗೆ ಕರಾರು ಮಾಡಿಕೊಳ್ಳುವ ಸಂಸ್ಥೆಗಳಿಂದ ಅನುಕ್ರಮವಾಗಿ ಕೂಡ್ರಿಸಲ್ಪಡತಕ್ಕ ಆಕ್ಟ್ರಾಯ ಡ್ಯೂಟಿಗಳನ್ನು ಸದರಿ ಸಂಸ್ಥೆಗಳ ನಿಯಂತ್ರಣಕ್ಕೊಳಪಟ್ಟ ಕ್ಷೇತ್ರದ ಹದ್ದುಗಳೊಳಗೆ ಪ್ರತ್ಯೇಕವಾಗಿ ಕೂಡ್ರಿಸುವದರ ಬದಲಾಗಿ ಒಟ್ಟಾಗಿ ಕೂಡ್ರಿಸಬಹುದು.

(೩) ಯಾವದೊಂದು ಪಂಚಾಯತವು ಯಾವದೇ ವಿಷಯದ ಸಂಬಂಧದಿಂದ ಒಪ್ಪಿಗೆಯನ್ನು ಕೊಡಲು (೧)ನೇ ಅಥವಾ (೨)ನೇ ಪೋಟಕಲಮಿನ ರರಾವುಗಳನ್ವಯ ಇತರ ಯಾವದೇ ಸ್ಥಾನಿಕ ಅಧಿಕಾರಿ ಸಂಘಕ್ಕೆ ವಿನಂತಿಯನ್ನು ಮಾಡಿಕೊಂಡಾಗ್ಗೆ ಮತ್ತು ಇಂಥ ಇತರ ಸ್ಥಾನಿಕ ಅಧಿಕಾರಿ ಸಂಘವು ಒಪ್ಪಿಗೆಯನ್ನು ಕೊಡಲು ನಾಕಾರಿಸಿದಾಗ್ಗೆ, ಸದರಿ ಕಮೀಶನರು, ಆ ಮೇಲೆ ಹೇಳಿದ ವಿಷಯದಲ್ಲಿ ಕ್ಯಾಂಟೋನಮೆಂಟ ಅಧಿಕಾರಿ ಸಂಘವಾಗಿರದ ಇತರ ಇಂಥ ಸ್ಥಾನಿಕ ಅಧಿಕಾರಿ ಸಂಘಕ್ಕೆ ತನ್ನ ಒಪ್ಪಿಗೆಯನ್ನು ಕೊಡಲು ಫರ್ಮಾಯಿಸುವ ಬಗ್ಗೆ ತನಗೆ ಯೋಗ್ಯವೆಂದು ತೋರಬಹುದಾದಂಥ ಹುಕುಮುಗಳನ್ನು ಮಾಡಬಹುದು ಮತ್ತು ಇಂಥ ಇತರ ಸ್ಥಾನಿಕ ಅಧಿಕಾರಿ ಸಂಘವು ಇಂಥ ಹುಕುಮುಗಳನ್ನು ಪಾಲಿಸತಕ್ಕದ್ದು.

(೪) ಈ ಕಲಮಿನನ್ವಯ ವರ್ತಿಸುವ ಸ್ಥಾನಿಕ ಸಂಸ್ಥೆಗಳ ನಡುವೆ ಯಾವದೇ ಭಿನ್ನಾಭಿಪ್ರಾಯವುಂಟಾದರೆ, ಅದರ ಮೇಲಿನ ಪ್ರಾಂತಿಕ ಸರಕಾರದವರ ಅಥವಾ ಈ ಬಗ್ಗೆ ಅವರು ನೇಮಿಸುವಂಥ ಅಮಲದಾರನ ನಿರ್ಣಯವು ಕೊನೆಯದಾಗಿರತಕ್ಕದ್ದು.

ಆದರೆ ಗೊತ್ತುಪಡಿಸುವದೇನಂದರೆ, ಸದರಿ ಸ್ಥಾನಿಕ ಸಂಸ್ಥೆಗಳ ಪೈಕಿ ಒಂದು ಸಂಸ್ಥೆಯು ಕ್ಯಾಂಟೋನಮೆಂಟ ಅಧಿಕಾರೀ ಸಂಘವಾದಾಗ್ಗೆ, ಪ್ರಾಂತಿಕ ಸರಕಾರದವರು ಅಥವಾ ಸದರಿ ಅಮಲದಾರನ ನಿರ್ಣಯವು ಮಧ್ಯವರ್ತಿ ಸರಕಾರದವರ ಸಮ್ಮತಿಗೊಳಪಟ್ಟಿರತಕ್ಕದ್ದು.

## ೨೮ ಬ. ಸರಕಾರದವರು ಪಂಚಾಯತದಲ್ಲಿ ಕೆಲವೊಂದು ಭೂಮಿಗಳನ್ನು ನಿಹಿತಮಾಡಬಹುದು

ಈ ಪ್ರಕರಣದ ಉದ್ದೇಶಗಳ ಸಲುವಾಗಿ, ಪ್ರಾಂತಿಕ ಸರಕಾರದವರು, ಹೊರಿಸಲು ಯೋಗ್ಯವೆಂದು ತಮಗೆ ತೋರಬಹುದಾದಂಥ ಶರ್ತುಗಳಿಗೆ

ಹಾಗೂ ನಿರ್ಬಂಧಗಳಿಗೆ ಒಳಪಟ್ಟು ಕ್ರೌನಿನಲ್ಲಿ ನಿವಿಷ್ಟವಾಗಿರುವ ಗ್ರಾಮದಲ್ಲಿಯ ಬೈಲು ಪ್ರದೇಶಗಳನ್ನು, ಹಾಳುಬಿದ್ದ, ಖಾಲಿ ಇರುವ, ಅಥವಾ ಜನಾವರಗಳನ್ನು ಮೇಯಿಸುವ ಭೂಮಿಗಳನ್ನು ಅಥವಾ ಸಾರ್ವಜನಿಕ ರಸ್ತೆಗಳನ್ನು ಹಾಗೂ ಮಾರ್ಗಗಳನ್ನು, ಬಾವಿಗಳನ್ನು, ನದಿಯ ಒಡಲುಗಳನ್ನು, ಕೆರೆಗಳನ್ನು, ಗಿಡಗಳನ್ನು ಅಥವಾ ಇತರ ಯಾವದೇ ಆಸ್ತಿಯನ್ನು ಯಾವದೊಂದು ಪಂಚಾಯತದಲ್ಲಿ ನಿವಿಷ್ಟ ಮಾಡಬಹುದು. (ಕ್ರೌನಿನಲ್ಲಿ ಅಂದರೆ ಸರಕಾರದಲ್ಲಿ)

## ೨೮. ಕ. ಸಾರ್ವಜನಿಕ ಬೀದಿಗಳ ಹಾಗೂ ಖುಲ್ಲಾ ಜಾಗೆಗಳ ಮೇಲೆ ಆತಂಕಗಳು ಹಾಗೂ ಅತಿಕ್ರಮಣಗಳು

(೧) ಸದರಿ ಗ್ರಾಮದ ಹದ್ದುಗಳೊಳಗೆ ಯಾವನಾದರೂ ಮನುಷ್ಯನು ಯಾವದೇ ಸಾರ್ವಜನಿಕ ಬೀದಿಯಲ್ಲಿ ಅಥವಾ ಸ್ಥಳದಲ್ಲಿ ಅಥವಾ ಇಂಥ ಬೀದಿಯಲ್ಲಿಯ ಅಥವಾ ಸ್ಥಳದಲ್ಲಿಯ ಯಾವದೇ ತರದ ಡ್ರೇನಿನಲ್ಲಿ, ಗಟಾರಿನಲ್ಲಿ, ಹೊಲಸು ನೀರು ಹರಿದು ಹೋಗುವ ಮಾರ್ಗದಲ್ಲಿ ಅಥವಾ ಕಾಲುವೆಯಲ್ಲಿ ಅಥವಾ ಅದರ ಮೇಲಿಂದ ಅಥವಾ ಅದರ ಮೇಲೆ—

(ಅ) ಯಾವದೇ ಗೋಡೆಯನ್ನು ಅಥವಾ ಯಾವದೇ ಬೇಲಿಯನ್ನು ಕಂಬಿಯನ್ನು, ಕಂಬವನ್ನು, ಮಳಿಗೆಯನ್ನು ವರಾಂಡವನ್ನು ಪ್ಲಾಟಫಾರ್ಮನ್ನು, ಗದ್ದುಗೆ ಕಲ್ಲನ್ನು, ಪಾವಟಿಗೆಯನ್ನು ಅಥವಾ ಯಾವದೇ ಮುಂದೆ ಚಾಚುವ ಕಟ್ಟಡವನ್ನು ಅಥವಾ ವಸ್ತುವನ್ನು ಅಥವಾ ಇತರ ಅತಿಕ್ರಮಣ ಮಾಡುವಂಥಾದ್ದನ್ನು ಅಥವಾ ಆತಂಕವನ್ನುಂಟು ಮಾಡುವಂಥಾದ್ದನ್ನು ಕಟ್ಟಿದ್ದಾದರೆ ಅಥವಾ ನಿಲ್ಲಿಸಿದ್ದಾದರೆ, ಅಥವಾ ಕಟ್ಟಿದರೆ ಅಥವಾ ನಿಲ್ಲಿಸಿದರೆ, ಅಥವಾ

(ಬ) ಯಾವದೇ ಪೆಟ್ಟಿಗೆಯನ್ನು, ಗಂಟನ್ನು, ಪ್ಯಾಕೇಜನ್ನು ಅಥವಾ ವ್ಯಾಪಾರದ ಸರಕನ್ನು, ಅಥವಾ ಇತರ ಯಾವದೇ ವಸ್ತುವನ್ನು ನಿಕ್ಷೇಪಿಸಿದರೆ ಅಥವಾ ಇಡುವಂತೆ ಅಥವಾ ನಿಕ್ಷೇಪಿಸುವಂತೆ ಮಾಡಿದರೆ, ಅವನು, ಅವನ ಮೇಲೆ ಅಪರಾಧ ಸಾಬೀತಿಯು ರರಾನಾದ ಬಳಿಕ, ಇಪ್ಪತ್ತು ರೂಪಾಯಿಗಳವರೆಗಿನ ದಂಡದ ಶಿಕ್ಷೆಯಿಂದ, ಮತ್ತು ಇಂಥ ಅಪರಾಧದ ಬಗ್ಗೆ ಮೊದಲನೇ ಸಾರೆ ಅಪರಾಧ ಸಾಬೀತಿಯು ರರಾವು ಮಾಡಲ್ಪಟ್ಟ ತಾರೀಖಿನ ನಂತರ ಇಂಥ ಮುಂದೆ ಚಾಚಿದ ಭಾಗವನ್ನು, ಅತಿಕ್ರಮಣವನ್ನು, ಆತಂಕವನ್ನು

ಅಥವಾ ನಿಕ್ಷೇಪವನ್ನು ಹಾಗೆ ಚಾಲೂ ಇಟ್ಟ ಪ್ರತಿಯೊಂದು ದಿವಸದ ಬಗ್ಗೆ ೧ ರೂಪಾಯಿ ವರೆಗಿನ ಇನ್ನೂ ಹೆಚ್ಚಿನ ದಂಡದ ಶಿಕ್ಷೆಯಿಂದ ಶಿಕ್ಷಿಸಲ್ಪಡ ತಕ್ಕದ್ದು.

(೨) ಸದರಿ ಪಂಚಾಯತಿಗೆ ಇಂಥ ಯಾವದೇ ಆತಂಕವನ್ನು ಅಥವಾ ಅತಿಕ್ರಮಣವನ್ನು ತೆಗೆದು ಹಾಕುವ ಬಗ್ಗೆ ಅಧಿಕಾರವಿರತಕ್ಕದ್ದು ಮತ್ತು ಖಾಸಗಿ ಆಸ್ತಿಯಾಗಿರದಂಥ ಯಾವದೇ ಖುಲ್ಲಾ ಜಾಗೆಯಲ್ಲಿ ಇಂಥ ಜಾಗೆಯು ಸದರಿ ಪಂಚಾಯತದಲ್ಲಿ ನಿವಿಷ್ಟವಾಗಿರಲಿ ಅಥವಾ ನಿವಿಷ್ಟವಾಗ ದಿರಲಿ, ಅಂತಹದೇ ಸ್ವರೂಪದ ಯಾವದೇ ಅನಧಿಕೃತವಾದ ಆತಂಕವನ್ನು ಅಥವಾ ಅತಿಕ್ರಮಣವನ್ನು ತೆಗೆದು ಹಾಕುವ ಬಗ್ಗೆ ಅಂತಹದೇ ಅಧಿಕಾರ ವಿರತಕ್ಕದ್ದು, ಆದರೆ ಗೊತ್ತುಪಡಿಸುವದೇನಂದರೆ, ಸದರೀ ಜಾಗೆಯು ಸರಕಾರ ದವರಲ್ಲಿ ನಿವಿಷ್ಟವಾಗಿದ್ದರೆ ಕಲೆಕ್ಟರನ ಅಥವಾ ಈ ಬಗ್ಗೆ ಅವನಿಂದ ಅಧಿಕಾರ ಕೊಡಲ್ಪಟ್ಟ ಯಾವನೇ ಅಮಲದಾರನ ಪರವಾನಗಿಯನ್ನು ಮೊದಲು ಪಡೆಯತಕ್ಕದ್ದು. ಹೀಗೆ ತೆಗೆದುಹಾಕೋಣದರ ಸಂಬಂಧದ ವೆಚ್ಚವನ್ನು ಸದರಿ ಆತಂಕವನ್ನು ಅಥವಾ ಅತಿಕ್ರಮಣವನ್ನು ಉಂಟುಮಾಡಿದ ಮನುಷ್ಯನು ಕೊಡತಕ್ಕದ್ದು. ಮತ್ತು ಅದು ೯ನೇ ಪ್ರಕರಣದನ್ವಯ ವಸೂಲಮಾಡಲ್ಪಡ ಬೇಕಾದ ಯಾವದೇ ಕರದ ಸಲುವಾಗಿ ಹಕ್ಕು ಹೇಳಲಾದ ರಕಮು ಯಾವ ರೀತಿಯಿಂದ ವಸೂಲ ಮಾಡಲ್ಪಡುವದೋ ಅದೇ ರೀತಿಯಿಂದ ವಸೂಲ ಮಾಡಲ್ಪಡತಕ್ಕದ್ದು.

(೩) ಆ ಬಗ್ಗೆ ಯೋಗ್ಯ ರೀತಿಯಿಂದ ಅಧಿಕಾರ ಕೊಡಲ್ಪಟ್ಟಿರದಿದ್ದ ಯಾವನೇ ಮನುಷ್ಯನು, ಖಾಸಗೀ ಆಸ್ತಿಯಾಗಿರದಂಥ ಯಾವದೇ ಖುಲ್ಲಾ ಜಾಗೆಯಿಂದ ಮಣ್ಣನ್ನು, ಉಸುಕನ್ನು ಅಥವಾ ಇತರ ವಸ್ತುವನ್ನು ತೆಗೆ ದೊಯ್ದರೆ ಅಥವಾ ಅದರಲ್ಲಿ ಅಥವಾ ಅದರ ಮೇಲೆ ಯಾವದೇ ಅತಿಕ್ರಮಣ ವನ್ನು ಮಾಡಿದರೆ, ಅವನು, ಅವನ ಮೇಲೆ ಅಪರಾಧ ಸಾಬೀತಿಯ ಠರಾ ವಾದ ಬಳಿಕ, ನಾಲ್ವತ್ತು ರೂಪಾಯಿಗಳ ವರೆಗಿನ ದಂಡದ ಶಿಕ್ಷೆಯಿಂದ ಮತ್ತು ಅತಿಕ್ರಮಣದ ಬಾಬತ್ತಿನಲ್ಲಿ ಮೊದಲನೇ ಸಾರೆ ಅಪರಾಧ ಸಾಬೀ ತಿಯ ಠರಾವು ಮಾಡಲ್ಪಟ್ಟ ತಾರೀಖಿನ ನಂತರ ಸದರಿ ಅತಿಕ್ರಮಣವನ್ನು ಚಾಲೂ ಇಟ್ಟ ಪ್ರತಿಯೊಂದು ದಿವಸದ ಬಗ್ಗೆ ಎರಡು ರೂಪಾಯಿಗಳ ವರೆ ಗಿನ ಇನ್ನೂ ಹೆಚ್ಚಿನ ದಂಡದ ಶಿಕ್ಷೆಯಿಂದ ಶಿಕ್ಷಿಸಲ್ಪಡತಕ್ಕದ್ದು.

(೪) ಸಮಾರಂಭಗಳ ಹಾಗೂ ಉತ್ಸವಗಳ ಪ್ರಸಂಗಗಳಲ್ಲಿ ಯಾವದೇ ಸಾರ್ವಜನಿಕ ಬೀದಿಯ ಯಾವದೇ ತಾತ್ಪೂರ್ತಿಕ ಭೋಗವಟೆಯನ್ನು

ಮಾಡಲಿಕ್ಕೆ ಅಥವಾ ಅವರ ಮೇಲೆ ಯಾವದೇ ತಾತ್ಪೂರ್ತಿಕ ಕಟ್ಟಡವನ್ನು ಕಟ್ಟಲಿಕ್ಕೆ, ಅಥವಾ ನಾಲ್ಕು ದಿವಸಗಳಿಗಿಂತ ಹೆಚ್ಚಲ್ಲದಷ್ಟು ಅವಧಿಯ ವರೆಗೆ ಹಾಗೂ ಸಾರ್ವಜನಿಕರಿಗೆ ಅಥವಾ ಯಾವದೇ ವ್ಯಕ್ತಿಗೆ ಅನಾನುಕೂಲತೆ ಯುಂಟಾಗದಂಥ ರೀತಿಯಿಂದ ಉಪಬೀದಿಗಳಲ್ಲಿ ಹಾಗೂ ಜಾಗೆಗಳಲ್ಲಿ ಉರವಲವನ್ನು ಒಟ್ಟಲಿಕ್ಕೆ ಸದರಿ ಪಂಚಾಯತವು ಪರವಾನಗಿಯನ್ನು ಕೊಡುವದಕ್ಕೆ ಈ ಕಲಮಿನಲ್ಲಿದ್ದ ಯಾವದೇ ಮಜಕೂರಿನಿಂದ ಪ್ರತಿಬಂಧ ವುಂಟಾಗತಕ್ಕದ್ದಲ್ಲ



# ಬಾಬು ೪.

## ಗ್ರಾಮಪಂಚಾಯತವನ್ನು ಏಕವ್ಯಕ್ತಿಭೂತವಾಗಿ ಮಾಡುವದು ; ಅದರ ಆಸ್ತಿ ಮತ್ತು ಫಂಡು

**ಪ್ರಕರಣದ ವಿಷಯ :—** ಪ್ರತಿಯೊಂದು ಗ್ರಾಮಪಂಚಾಯತಿಗೆ ಈ ಕಾಯದೆಯ ಮೂಲಕ ಬರುವಂಥ ಕಾಯದೆಗೆ ಒಳಪಟ್ಟ ಸ್ವರೂಪವು, ಅದರ ಸ್ಥಾವರ-ಜಂಗಮ ಆಸ್ತಿಯು ಅದರ ಗಳಿಕೆ-ಬಳಿಕೆ-ಪ್ರಾಪ್ತಿ ಮತ್ತು ಪ್ರಾಪ್ತಿಯ ವಿನಿಯೋಗ ಹಾಗೂ ಅಧಿಕಾರ

### ೨೯. ಗ್ರಾಮಪಂಚಾಯತವನ್ನು ಏಕವ್ಯಕ್ತಿಭೂತವಾಗಿ ಮಾಡೋಣ

ಪ್ರತಿಯೊಂದು ಪಂಚಾಯತವು............ದ ಗ್ರಾಮಪಂಚಾಯತವು ಎಂಬ ಹೆಸರಿನಿಂದ ಏಕವ್ಯಕ್ತಿಭೂತವಾಗಿರುವದು, ಮತ್ತು ಅದಕ್ಕೆ ನಿರಂತರವಾದ ಪರಂಪರೆಯೂ ಸಾಮಾಯಿಕ ಮೊಹರೂ ಇರುವವು, ಮತ್ತು ಅದು ತನ್ನ ಏಕವ್ಯಕ್ತಿಭೂತ ಹೆಸರಿನಲ್ಲಿ ದಾವೆ ಮಾಡಬಹುದು ಮತ್ತು ಅದರ ಮೇಲೆ ದಾವೆಯು ಮಾಡಲ್ಪಡಬಹುದು, ಮತ್ತು ತನ್ನ ಅಧಿಕಾರ ಸೀಮೆಯೊಳಗಿನ ಗ್ರಾಮದ ಹದ್ದುಗಳಲ್ಲಿ ಅಥವಾ ಅವುಗಳ ಹೊರಗೆ ಸ್ಥಾವರ ಮತ್ತು ಜಂಗಮ ಆಸ್ತಿಯನ್ನು ಸಂಪಾದಿಸಲಿಕ್ಕೆ ಮತ್ತು ಧಾರಣ ಮಾಡಲಿಕ್ಕೆ, ಮತ್ತು ತನ್ನಲ್ಲಿ ನಿವಿಷ್ಟವಾಗಿರಬಹುದಾದ ಅಥವಾ ತಾನು ಸಂಪಾದಿಸಬಹುದಾದ ಜಂಗಮ ಅಥವಾ ಸ್ಥಾವರ ಆಸ್ತಿಯನ್ನು ಪಟ್ಟೆಗೆ, ಕೊಡಲಿಕ್ಕೆ ಮಾರಲಿಕ್ಕೆ ಅಥವಾ ಇತರ ರೀತಿಯಿಂದ ತಬದೀಲು ಮಾಡಲಿಕ್ಕೆ, ಮತ್ತು ಕರಾರು ಮಾಡಲಿಕ್ಕೆ ಮತ್ತು ಈ ಆಕ್ಟಿನ ಉದ್ದೇಶಗಳ ಬಗ್ಗೆ ಅವಶ್ಯವಿರುವ ಇತರ ಯಾವತ್ತು ಸಂಗತಿಗಳನ್ನು ಮಾಡಲಿಕ್ಕೆ ಅದಕ್ಕೆ ಅಧಿಕಾರವಿರುವದು

ಆದರೆ ಗೊತ್ತುಪಡಿಸುವದೇನಂದರೆ ಮೂರು ವರ್ಷಗಳಿಗಿಂತ ಹೆಚ್ಚಿನ ಮುದತಿನ ಸ್ಥಾವರಾಸ್ತಿಯ (೩೦ ನೇ ಕಲಮಿನ (೧) ನೇ ಪೋಟ ಕಲಮಿನಲ್ಲಿ ಹೇಳಿದ ಆಸ್ತಿಯ ಹೊರ್ತು) ಯಾವದೇ ಪಟ್ಟೆಯು ಮತ್ತು ಇಂಥ ಯಾವದೇ ಆಸ್ತಿಯ ಯಾವದೇ ಮಾರಾಟವು ಅಥವಾ ಇದರ ತಬದಿಲಿಯು ಇಂಥ ಪಟ್ಟೆ, ಮಾರಾಟ ಅಥವಾ ಇತರ ತಬದಿಲಿಯು ಕಲೆಕ್ಟರನ ಮುಂಚಿತವಾದ ಮಂಜೂರಿಯಿಂದ ಮಾಡಲ್ಪಟ್ಟಿದ್ದ ಹೊರ್ತು, ಕಾಯದೇಶೀರವಾಗಲಾರದು

“ **ತಬದಿಲಿ** ”— ಟ್ರಾನ್ಸಫರ ( Transfer )—ಎರಡನೆಯವರಿಗೆ ಕೊಡುವದು

## ೪೦. ಪಂಚಾಯತದ ಆಸ್ತಿ

(೧) ಲೋಕಲ್‌ಬೋರ್ಡಿನ ವಶದಲ್ಲಿದ್ದ ಯಾವದಾದರೂ ಆಸ್ತಿಯು ಪಂಚಾಯತದಲ್ಲಿ ನಿವಿಷ್ಟವಾಗಬೇಕೆಂದು ಆಗಾಗ್ಗೆ ಹುಕುಮು ಮಾಡುವದು ಅಂಥ ಲೋಕಲ್‌ಬೋರ್ಡಿನ ಅಧಿಕಾರದಲ್ಲಿರತಕ್ಕದ್ದು. ಮತ್ತು ಇಂಥ ಹುಕುಮು ಮಾಡಲ್ಪಟ್ಟ ಬಳಿಕ, ಸದರಿ ಆಸ್ತಿಯು, ಸನ್ ೧೮೮೨ನೇ ಇಸ್ವಿಯ ಆಸ್ತಿಯನ್ನು ತಬದಿಲಿ ಮಾಡಿಕೊಡುವ ವಿಷಯದ ಆಕ್ಟಿನಲ್ಲಿ ಅಥವಾ ಸನ್ ೧೯೦೮ ನೇ ಇಸವಿಯ ಭಾರತದ ನೋಂದಣಿ ವಿಷಯದ ಆಕ್ಟಿನಲ್ಲಿ ಯಾವದೇ ಮಜಕೂರು ಇದ್ದಾಗ್ಯೂ ಸದರಿ ಪಂಚಾಯತದಲ್ಲಿ ನಿವಿಷ್ಟವಾಗತಕ್ಕದ್ದು.

ಆದರೆ ಗೊತ್ತುಪಡಿಸುವದೇನಂದರೆ, ಇಂಥ ಯಾವದೇ ಸ್ಥಾವರಾಸ್ತಿಯ ಸಂಬಂಧದಿಂದ ಪಂಚಾಯತವು ಮಾಡಿದ ಯಾವದೇ ಪಟ್ಟೆಯು, ಮಾರಾಟವು ಅಥವಾ ಇದರ ತಬದಿಲಿಯು, ಕಮೀಶನರನ ಹಾಗೂ ಇಂಥ ಲೋಕಲ್‌ಬೋರ್ಡಿನ ಮುಂಚಿತವಾದ ಮಂಜೂರಿ ಇಲ್ಲದೆ ಕಾಯದೇಶೀರ ವಾಗತಕ್ಕದ್ದಲ್ಲ.

(೨) ಗ್ರಾಮದ ಫಂಡಿನೊಳಗಿಂದ ಪಂಚಾಯತವು ಮಾಡಿದ ಪ್ರತಿಯೊಂದು ಕಾಮಗಿರಿಯು ಇಂಥ ಪಂಚಾಯತದಲ್ಲಿ ನಿವಿಷ್ಟವಾಗಿರುವದು

"ನಿವಿಷ್ಟ" ದಾಖಲ, ಸಮಾವಿಷ್ಟ, ಲೋಕಲ್ ಬೋರ್ಡಿನ ಯಾವದೇ ಮಿಳಕತ್ತು (ಗಳಿಕೆ-ಸಂಪಾದನೆ) ಪಂಚಾಯುತಿಯ ಸ್ವಾಧೀನಪಡಿಸುವ ಅಧಿಕಾರ ಲೋಕಲ್‌ಬೋರ್ಡಿಗೆ ಇರುವದು.

## ೪೧. ಗ್ರಾಮದ ಫಂಡು

(೧) ಪ್ರತಿಯೊಂದು ಗ್ರಾಮದಲ್ಲಿ ಗ್ರಾಮದ ಫಂಡು ಎಂದು ಕರೆಯಲ್ಪಡುವ ಒಂದು ಫಂಡು ಇರಬೇಕು.

(೨) ಈ ಕೆಳಗಿನವುಗಳು ಗ್ರಾಮದ ಫಂಡಿನ ಭಾಗವಾಗಿರುವವು ಅಥವಾ ಗ್ರಾಮದ ಫಂಡಿಗೆ ಕೊಡಲ್ಪಡುವವು ಅಂದರೆ —

(ಅ) ಸನ್ ೧೯೦೧ ನೇ ಇಸವಿಯ ಮುಂಬಯಿಯ ಡಿಸ್ಟ್ರಿಕ್ಟ ಮ್ಯುನಿಸಿಪಲ ಆಕ್ಟಿನ ೧೯೧ ನೇ ಕಲಮಿನ ಠರಾವುಗಳನ್ವಯ ೧ [ ಪ್ರಾಂತಿಕ ಸರಕಾರದವರು ] ೧ ಗ್ರಾಮದ ಫಂಡಿಗೆ ನೇಮಿಸಿ ಕೊಡಬಹುದಾದ ರಕಮು ;

(ಬ) ೮೯ ನೇ ಕಲಮಿನನ್ವಯ ಹೊರಿಸಲ್ಪಟ್ಟ ಯಾವದೇ ಕರದ ಅಥವಾ ಫೀಯ ಉತ್ಪನ್ನವು ;

(ಕ) ೪೫ ನೇ ಮತ್ತು ೪೬ ನೇ ಕಲಮುಗಳನ್ವಯ ವಸೂಲು ಮಾಡಿದ ಮೊಬದಲೆಯೆಂದು ಕೊಡಬೇಕಾಗಿ ಹುಕುಮಾದ ಯಾವತ್ತು ೩ [ + + + + ] ೩ ರಕಮುಗಳು ;

(ಡ) ಗ್ರಾಮದ ಫಂಡಿನ ಲೆಖ್ಖಕ್ಕೆ ಜಮಾ ಮಾಡಬೇಕೆಂದು ಕೋರ್ಟ ಹುಕುಮುಕೊಟ್ಟ ಇತರ ಯಾವತ್ತು ರಕಮುಗಳು;

(ಇ) ಗ್ರಾಮದ ನೌಕರರು ಒಟ್ಟುಗೂಡಿಸಿದ ಎಲ್ಲ ಧೂಳು, ಹೊಲಸು ಶೆಗಣಿ ಅಥವಾ ಕಸಕಡ್ಡಿ (ಇದರಲ್ಲಿ ಜನಾವರಗಳ ಹೆಣಗಳ ಸಮಾವೇಶವಾಗುವದು) ಇವುಗಳ ವಿಕ್ರಯದ ಉತ್ಪನ್ನವು ಯಾವನೇ ಮನುಷ್ಯನಿಗೆ ಇಂಥ ಇಡೀ ಉತ್ಪನ್ನಮೇಲೆ ಅಥವಾ ಅದರ ಭಾಗದ ಮೇಲೆ ಇರುವ ಹಕ್ಕನ್ನು ಹೊರ್ತುಪಡಿಸಿ ;

(ಫ) ೧ [ ಪ್ರಾಂತಿಕ ಸರಕಾರದವರು ] ೧ ಅಥವಾ ಯಾವದೊಂದು ಜಿಲ್ಹಾ ಲೋಕಲ ಬೋರ್ಡು ಗ್ರಾಮದ ಫಂಡಿಗೆ ಕೊಟ್ಟ ರಕಮುಗಳು ;

(ಗ) ೧ [ ಪ್ರಾಂತಿಕ ಸರಕಾರದವರಿಂದ ] ೧ ಅಥವಾ ಯಾವದೊಂದು ಜಿಲ್ಹಾ ಲೋಕಲ ಬೋರ್ಡಿನಿಂದ ಸಾಲವೆಂದು ಅಥವಾ ದೇಣಗಿಯೆಂದು ಪಡೆದ ಎಲ್ಲ ರಕಮುಗಳು ;

(ಹ) ೧ [ + + + + ] ೧

(ಐ) ಪಂಚಾಯತದಲ್ಲಿ ನಿವಿಷ್ಟವಾಗಿರುವ ಯಾವದೇ ಆಸ್ತಿಯ ಉತ್ಪನ್ನವು , ಮತ್ತು

(ಜೆ) ೫೪ ನೇ ಕಲಮಿನನ್ವಯ ದಾವೆಗಳನ್ನು ಮತ್ತು ಖಟ್ಲೆಗಳನ್ನು ಮಾಡುವ ಬಗ್ಗೆ ತಗೆದುಕೊಂಡ ಫೀಗಳು

## ೩೨. ಗ್ರಾಮದ ಫಂಡಿನ ವಿನಿಯೋಗ

ಈ ಆಕ್ಟಿನನ್ವಯ ಪಂಚಾಯತದಲ್ಲಿ ನಿವಿಷ್ಟವಾದ ಯಾವತ್ತು ಆಸ್ತಿಯು ಮತ್ತು ಈ ಆಕ್ಟಿನ ಠರಾವುಗಳ ಮೇರೆಗೆ ಅದು ಪಡೆದ ಯಾವತ್ತು ಫಂಡುಗಳು, ಮತ್ತು ಆಯಾ ಕಾಲದಲ್ಲಿ ಅಮಲಿನಲ್ಲಿರುವ ಯಾವದೇ ಕಾಯಿದೆಯ ಠರಾವುಗಳನ್ವಯ ಅದಕ್ಕೆ ದೊರೆಯುವ ಯಾವತ್ತು ರಕಮುಗಳು, ಈ ಆಕ್ಟಿನ ಠರಾವುಗಳಿಗೊಳಪಟ್ಟು ಮತ್ತು ಈ ಆಕ್ಟಿನ ಉದ್ದೇಶಗಳ ಬಗ್ಗೆ ವಿನಿಯೋಗಿಸಲ್ಪಡಬೇಕು, ಮತ್ತು ಇಂಥ ಯಾವತ್ತು ಫಂಡು ಮತ್ತು ರಕಮುಗಳು ಠರಾಯಿಸಲ್ಪಡಬಹುದಾದ ತಾಬೆಯಲ್ಲಿ ಇಡಲ್ಪಡಬೇಕು

## ಕಲಮು ೩೨ ರಂತೆ ಪಂಚಾಯತಿಗೆ ದೊರೆತ ಫಂಡದ ಎಲ್ಲ ರಕಮುಗಳು ಹಾಗೂ ಆದರ ಕಡೆಗೆ ಬರುವ ಎಲ್ಲ ರಕಮುಗಳನ್ನು ಯಾವ ರೀತಿಯಿಂದ ವಶದಲ್ಲಿಟ್ಟುಕೊಳ್ಳಬೇಕು ಎಂಬ ( ಸರಕಾರಿ ಠರಾವದಿಂದ ಗೊತ್ತಾದ ) ರೀತಿ

[ ನಂ ಎಸ್ ೧೬೧/೧ ತಾ ೧೮-೧೨-೧೯೩೪ ]

೧ (೧) ಯಾವದೊಂದು ಪಂಚಾಯತವು ಚಾಲೂ ವೆಚ್ಚವನ್ನು ನಡಿಸುವದಕ್ಕೆ ೫೦ ರೂಪಾಯಿಗಳಿಗೆ ಮೀರಿದ ಒಂದು ಕಾಯಮ ತಸಲಮಾತನ್ನು ಇಟ್ಟುಕೊಳ್ಳಲಿಕ್ಕೆ ತನ್ನ ಸೆಕ್ರೆಟರಿಗೆ ಪರವಾನಗಿ ಕೊಡಬಹುದು

(೨) ಪ್ರತಿಯೊಂದು ತಿಂಗಳ ಕೊನೆಗೆ, ಸರಪಂಚನು, ಅಥವಾ ಅವನ ಗೈರಹಾಜರಿಯಲ್ಲಿ ಡೆಪ್ಯುಟಿ ಸರಪಂಚನು ಸೆಕ್ರೆಟರಿಯ ಕಾಯಮ ತಸಲಮಾತಿನ ಲೆಖ್ಖವನ್ನು ಪರೀಕ್ಷಿಸಿ ಶಿಲುಕನ್ನು ಸರಿ ನೋಡಬೇಕು

೨ (೧) ಯಾವದೊಂದು ಪಂಚಾಯತವು—

(ಅ) ಕಾನೂನು ೧ರ (೧)ನೇ ಪೋಟ-ಕಾನೂನಿನನ್ವಯ ತನ್ನ ಸೆಕ್ರೆಟರಿಗೆ ಇಟ್ಟುಕೊಳ್ಳಲಿಕ್ಕೆ ಪರವಾನಗಿ ಕೊಟ್ಟ ರಕಮಿನ ಹೊರ್ತು ಇತರ ಯಾವತ್ತು ಹಣವನ್ನು, ಕಲೆಕ್ಟರನು ಮಂಜೂರ ಮಾಡಬಹುದಾದಂಥ ಬ್ಯಾಂಕಿನಲ್ಲಿ ಠೇವು ಇಡಬಹುದು, ಅಥವಾ

(ಬ) ಸನ್ ೧೯೦೧ ನೇ ಇಸವಿಯ ಮುಂಬಯಿಯ ಡಿಸ್ಟ್ರಿಕ್ಟ ಮ್ಯುನಿಸಿಪಲ ಆಕ್ಟಿನ ೩ನೇ ಕಲಮಿನ (೧೮)ನೇ ರಕಮಿನಲ್ಲಿ ವ್ಯಾಖ್ಯಾಯಿಸಿದಂತೆ ಸಾರ್ವಜನಿಕ ಸಿಕ್ಯೂರಿಟಿಗಳಲ್ಲಿ ಪಂಚಾಯತದ ಹೆಸರಿನಿಂದ ಇಂಥ ಫಂಡುಗಳನ್ನು ಬಡ್ಡಿಗೆ ಹಚ್ಚಬಹುದು ಮತ್ತು ವೇಳೆವೇಳೆಗೆ ಅವಶ್ಯವಿರಬಹುದಾದಂಥ ಇಂಥ ಸಿಕ್ಯೂರಿಟಿಗಳ ವ್ಯವಸ್ಥೆ ಮಾಡಬಹುದು

(೨) ಇಂಥ ಯಾವತ್ತು ಹಣವು, (೧)ನೇ ಪೋಟ-ಕಾನೂನಿನನ್ವಯ ಠೇವು ಇಡಲ್ಪಟ್ಟ ಅಥವಾ ಬಡ್ಡಿಗೆ ಹಚ್ಚಲ್ಪಟ್ಟ ಹೊರ್ತು, ಇಂಥ ಹಣವು ೧೦೦ ರೂಪಾಯಿಗಳಿಗಿಂತ ಹೆಚ್ಚಿರದಿದ್ದರೆ, ಪ್ರತಿ ತಿಂಗಳ ಮೊದಲನೇ ವಾರದೊಳಗೆ ಮತ್ತು ಇಂಥ ಸಬ್-ಟ್ರೆಝರಿಯಲ್ಲಿ ಠೇವು ಇಡಲ್ಪಡಬೇಕು.

---

# ಪ್ರಕರಣದ ಸಮಾರೋಪ

(೧) **ಗ್ರಾಮಪಂಚಾಯತಿಯ ಫಂಡು** (ಕಲಮು ೩೧ (೨) ಅ ದಿಂದ ಜೆ)

(i) **ಪಂಚಾಯಿತಿಯ ಪ್ರತ್ಯಕ್ಷ ಉತ್ಪನ್ನ**:—

(೧) ಕರ ಇಲ್ಲವೆ ಫೀ ರೂಪದಿಂದ ವಸೂಲ ಆದ ಹಣ.... (ಬ)

(೨) ಗ್ರಾಮದ ನೌಕರರು ಕೂಡಿಸಿದ ಕಸ, ಹೊಲಸು ಮುಂತಾದವುಗಳನ್ನು ಮಾರಿಬಂದ ಹಣ .. ... ... .. (ಈ)

(೩) ಪಂಚಾಯತಿಯ ತಾಬೆಯಲ್ಲಿದ್ದ ಗಳಿಕೆಯ ಮೇಲಿನ ಉತ್ಪನ್ನ .... .. ... . .. .. .. ... ... .. .. (ಆಯ್)

(ii) **ಸರಕಾರವು ಕೊಟ್ಟ ರಕಮುಗಳು**:—

(೧) ಡಿಸ್ಟ್ರಿಕ್ಟ ಮ್ಯುನಸಿಪಲ್ ಆಕ್ಟಿನ ೯೧ನೇ ಕಲಮಿನನ್ವಯ ಸರಕಾರವು ಕೊಟ್ಟ ರಕಮು ಅಂದರೆ ರದ್ದುಪಡಿಸಿದ ನೊಟಿಫಾಯಿಡ್ ಏರಿಯಾ ಕಮಿಟಿಯ ಮಾಲಮತ್ತೆ .. (ಅ)

(೨) ಸರಕಾರವು ಕೊಟ್ಟ ಹಣ ... .. .. ... .. ... ... ...(ಫ)

(೩) ಸರಕಾರದ ಕಡೆಯಿಂದ ಸಿಕ್ಕ ಸಾಲ ... ... ... ... ... (ಗ)

(iii) **ಜಿಲ್ಲಾ ಲೋಕಲ್ ಬೋರ್ಡಿನ ಕಡೆಯಿಂದ ದೊರೆತ ರಕಮುಗಳು**:—

(೧) ಜಿಲ್ಲಾ ಲೋಕಲ್ ಬೋರ್ಡು ಕೊಟ್ಟ ರಕಮು ...... ...(ಫ)

(೨) ಜಿಲ್ಲಾ ಲೋಕಲ್‌ಬೋರ್ಡು ಕೊಟ್ಟ ಸಾಲದ ಹಣ ...(ಗ)

(iv) **ಕೋರ್ಟಿನಿಂದ ಹುಕುಮು ಮಾಡಲ್ಪಟ್ಟ ರಕಮುಗಳು**:—

(೧) ಭರಪಾಯಿ ಮಾಡಲಿಕ್ಕೆ ಹುಕುಮು ಮಾಡಿದ ರಕಮು ಮತ್ತು ಫಂಡು (ಕಲಮು ೪೫–೪೬) ....... . .. ........(ಕ)

(೨) ಗ್ರಾಮದ ಫಂಡಿಗೆ ಜಮಾಮಾಡಲಿಕ್ಕೆಂದು ಕೋರ್ಟಿನಿಂದ ಹುಕುಮು ಮಾಡಲ್ಪಟ್ಟ ರಕಮುಗಳು....... ... ........(ಡ)

(೩) ದಿವಾಣಿ ಇಲ್ಲವೆ ಫೌಜದಾರಿ ಫಿರ್ಯಾದಿಯನ್ನು ದಾಖಲ ಮಾಡಲು ಬೇಕಾಗುವ ಫೀಯ ರಕಮು........ ...........(ಜೆ)

(v) ದೇಣಿಗೆಯ ರೂಪದಿಂದ ದೊರೆತ ಎಲ್ಲ ರಕಮುಗಳು.......... (ಗ)

(೨) **ಗ್ರಾಮಫಂಡಿನ ವಿನಿಯೋಗ** — (ಕಲಮು ೩೨ ೧ನೇ ಭಾಗ) ಪಂಚಾಯತಿಯ ಕಾಯದೆಯಂತೆ ಮತ್ತು ಅದರಲ್ಲಿ ಕೊಟ್ಟ ಕಾರಣಗಳಿಗಾಗಿಯೇ ಮಾಡಬೇಕು

(೩) **ಗ್ರಾಮಫಂಡಿನ ತಾಬೆ** — (ಕ ೩೩ ರ ಕೆಳಗಿನ ನಿಯಮ ಕೊನೆಯಭಾಗ) ಪಂಚಾಯತಿಗೆ ದೊರೆಯತಕ್ಕ ಎಲ್ಲ ಹಣದ ತಾಬೆಯ ಬಗ್ಗೆ ನಿಯಮಗಳು.

(i) **ಚಿಟಣೀಸನ ಹತ್ತರ ಕಾಯಮ ಇರುವ ರಕಮು** —

(೧) ತಾಲೂ ವೆಚ್ಚಕ್ಕಾಗಿ ೫೦ ರೂಪಾಯಿಗಳಿಗಿಂತ ಹೆಚ್ಚಲ್ಲದಷ್ಟು ರಕಮು ಚಿಟನೀಸನ ಹತ್ತರ ಇರಬೇಕೆಂದು ಪರವಾನಿಗೆಯನ್ನು ಕೊಡುವ ಅಧಿಕಾರವು ಪಂಚಾಯತಿಗೆ ಇದೆ

(೨) ಪತಿ ತಿಂಗಳ ಕೊನೆಗೆ ಪರಾಂಚನು ಸದರೀ ಲೆಕ್ಕವನ್ನು ತಪಾಸಿಸಬೇಕು

(ii) **ಬ್ಯಾಂಕಿನಲ್ಲಿಯ ಅನಾಮತ ರಕಮು** —

ಚಿಟಣೀಸನ ಹತ್ತರ ಕಾಯಂ ಇರುವ ರಕಮಿನ ಹೊರತಾಗಿ ಉಳಿದ ಎಲ್ಲ ರಕಮನ್ನು ಪಂಚಾಯತಿಯು, ಕಲೆಕ್ಟರನು ಗೊತ್ತುಪಡಿಸಿದ ಬ್ಯಾಂಕಿನಲ್ಲಿ ಇಡಬೇಕು

(iii) **ರೇವುಗಳು** — ಪಂಚಾಯತಿಗೆ ತನ್ನ ಎಲ್ಲ ರಕಮನ್ನು ಸ್ವಂತದ ಹೆಸರಿನಲ್ಲಿ* ಸರಕಾರೀ ಸೆಕ್ಯೂರಿಟಿಗಳಲ್ಲಿ ತೊಡಗಿಸುವ ಮತ್ತು ಕಾಲಕಾಲಕ್ಕೆ ಅವಶ್ಯಕಂಡಂತೆ ಇಂಥ ಸೆಕ್ಯೂರಿಟಿಗಳ ವಿಲೇವಾಟಮಾಡುವ ಅಧಿಕಾರವಿದೆ

(iv) **ತಾಲೂಕಿನ ಸಬ್-ಟ್ರೇಝರಿಯೊಳಗಿನ ಅನಾಮತ ರಕಮು** —

ಗ್ರಾಮಫಂಡಿನೊಳಗಿನ ಯಾವತ್ತೂ ರಕಮುಗಳು ಯಾವವು —

(೧) ಬ್ಯಾಂಕಿನಲ್ಲಿ ಇಡಲ್ಪಟ್ಟಿಲ್ಲವೋ, ಅಥವಾ

(೨) ಪಬ್ಲಿಕ್ ಸೆಕ್ಯೂರಿಟಿಗಳಲ್ಲಿ ತೊಡಗಿಸಲ್ಪಟ್ಟಿಲ್ಲವೋ, ಅಂಥವುಗಳನ್ನು ತಾಲೂಕಿನ ಸಬ್ ಟ್ರೇಝರಿಯಲ್ಲಿ ಅನಾಮತ ಇಡಬೇಕು ರಕಮು ೧೦೦ ರೂ ಗಳಿಗಿಂತ ಹೆಚ್ಚು ಇರದಿದ್ದರೆ, ಪ್ರತಿ ತಿಂಗಳ ಮೊದಲನೇ ವಾರದ ಒಳಗಾಗಿ ರಕಮು ೧೦೦ ರೂ. ಗಳಿಗಿಂತ ಹೆಚ್ಚಿಗೆ ಇದ್ದರೆ, ಉಪಯೋಗದ ದೃಷ್ಟಿಯಿಂದ ರಕಮಿನಷ್ಟು ಬೇಗನೆ

**ಸರಕಾರೀ (ಪಬ್ಲಿಕ್) ಸೆಕ್ಯೂರಿಟಿಗಳು** — ೧೯೦೧ ರ ಡಿಸ್ಟ್ರಿಕ್ಟ, ಮ್ಯುನಿಸಿಪಲ್ ಆಕ್ಟ ಕಲಮು ೩ (೧೮) ರ ಅನ್ವಯ "ಪಬ್ಲಿಕ್ ಸೆಕ್ಯುರಿಟೀಜ"ಗಳು ಕೆಳಗಿನಂತೆ ತಿಳಿಯಲ್ಪಡುವವು —

(೧) ಭಾರತ ಸರಕಾರದ ಸೆಕ್ಯೂರಿಟಿಗಳು (೨) ಯಾವುದರ ಬಡ್ಡಿಯ ಹೊಣೆಯನ್ನು ಇಂಡಿಯಾ ಇನ್-ಕೌನ್ಸಿಲ್‌ದ ಸೆಕ್ರೆಟರಿ ಆಫ್ ಸ್ಟೇಟವು ತೆಗೆದು ಕೊಂಡಿದೆಯೋ ಅಂಥ ರೇಲ್ವೆ ಇಲ್ಲವೆ ಬೇರೆ ಕಂಪನಿಗಳೊಳಗಿನ ಸ್ಟಾಕ್, ಡಿಬೆಂಚರ್ಸ ಹಾಗೂ ಶೇರುಗಳು (೩) ಬ್ರಿಟಿಶ್ ಹಿಂದುಸ್ತಾನದೊಳಗಿನ ಪ್ರಸ್ಥಾಪಿತ ಕಾಯದೆ ಯಿಂದ ಕೊಟ್ಟ ಅಧಿಕಾರಕ್ಕನುಸರಿಸಿ ಸ್ಥಾನಿಕ ಸಂಸ್ಥೆಗಳು ತೆಗೆದ (ಹೊರಡಿಸಿದ) ಡಿಬೆಂಚರ್ಸ, ಇಲ್ಲವೆ ಬೇರೆ ಸೆಕ್ಯೂರಿಟಿಗಳು (೪) ಗವ್ಹರ್ನರರ ಹುಕುಮಿನಿಂದ ಹೊರಡಿಸಿದ (ತೆಗೆದ) ಸೆಕ್ಯೂರಿಟಿಗಳು

## ಬಾಬು ೫.

### ನೌಕರವರ್ಗ ಮತ್ತು ಲೆಖ್ಖಗಳು

### ೫೯. ಪಂಚಾಯತಿಯ ಸೆಕ್ರೆಟರಿಯು

(೧) ಪ್ರತಿಯೊಂದು ಪಂಚಾಯತವು ಒಬ್ಬ ಸೆಕ್ರೆಟರಿಯನ್ನು ನೇಮಿಸ ತಕ್ಕದ್ದು ಮತ್ತು ಇವನು ಸದರಿ ಪಂಚಾಯತದ ನೌಕರನಾಗಿರತಕ್ಕದ್ದು.

ಆದರೆ ಗೊತ್ತುಪಡಿಸುವದೇನಂದರೆ, ಯಾವದೇ ಎರಡು ಅಥವಾ ಹೆಚ್ಚು ಪಂಚಾಯತಗಳು ಯಾವ ಗ್ರಾಮಗಳ ಸಲುವಾಗಿ ಅವು ಸ್ಥಾಪಿಸ ಲ್ಪಟ್ಟಿವೆಯೋ ಅಂಥ ಗ್ರಾಮಗಳು, ಇಂಥ ಗ್ರಾಮಗಳ ಪೈಕಿ ಪ್ರತಿಯೊಂದ ರಿಂದ ಮೂರು ಮೈಲುಗಳ ಅಂತರದೊಳಗೆ ಇದ್ದರೆ ಮತ್ತು ಇಂಥ ಪ್ರತಿ ಯೊಂದು ಪಂಚಾಯತಕ್ಕೆ ೧೫೦೦ ರೂಪಾಯಿಗಳಿಗೆ ಮೀರಿದ ವಾರ್ಷಿಕ ಉತ್ಪನ್ನವಿದ್ದರೆ, ಅಂಥ ಯಾವತ್ತೂ ಪಂಚಾಯತಗಳ ಸೆಕ್ರೆಟರಿಯೆಂದು ಒಬ್ಬನೇ ಮನುಷ್ಯನನ್ನು ನೇಮಿಸಬಹುದು. ಇಂಥ ಪಂಚಾಯತಿಗಳು, ರಾಜ್ಯಸರಕಾರದವರು ಕಾಲಕಾಲಕ್ಕೆ ನಿರ್ಣಯಿಸಬಹುದಾದಂಥ ಪ್ರಮಾಣ ದಲ್ಲಿ ಸೆಕ್ರೆಟರಿಯ ಸಂಬಳವನ್ನು ಹಾಗೂ ಭತ್ತೆಗಳನ್ನು ಕೊಡತಕ್ಕದ್ದು

ಇನ್ನೂ ಗೊತ್ತುಪಡಿಸುವದೇನಂದರೆ, ಇಂಥ ಗ್ರಾಮಗಳ ಪೈಕಿ ಪ್ರತಿ ಯೊಂದರಿಂದ ಮೂರು ಮೈಲುಗಳ ಅಂತರದೊಳಗೆ ಇರುವ ಗ್ರಾಮಗಳ ಸಲುವಾಗಿ ಒಂದಕ್ಕಿಂತ ಹೆಚ್ಚು ಪಂಚಾಯತಗಳು ಸ್ಥಾಪಿಸಲ್ಪಟ್ಟಿದ್ದರೆ, ಸಂಖ್ಯೆಯಲ್ಲಿ ಮೂರಕ್ಕೆ ಮೀರಿದ ಇಂಥ ಪಂಚಾಯತಿಗಳು, ರಾಜ್ಯಸರಕಾರ ದವರ ಮಂಜೂರಿಯನ್ನು ಪಡೆದು, ಸದರೀ ಪಂಚಾಯತಿಗಳ ಪೈಕಿ ಯಾವ ದೊಂದು ಪಂಚಾಯತಕ್ಕೆ ೧೫೦೦ ರೂಪಾಯಿಗಳಿಗೆ ಮೀರುವ ವಾರ್ಷಿಕ ಉತ್ಪನ್ನವಿದ್ದಾಗ್ಯೂ, ಅಂಥ ಯಾವತ್ತೂ ಪಂಚಾಯತಗಳ ಸೆಕ್ರೆಟರಿಯೆಂದು ಒಬ್ಬನೇ ಮನುಷ್ಯನನ್ನು ನೇಮಿಸಬಹುದು.

(೧ ಅ) ಇಂಥ ಸೆಕ್ರೆಟರಿಯ ಲಾಯಿಖಿಗಳು, ಅಧಿಕಾರಿಗಳು, ಕರ್ತವ್ಯಗಳು ಪ್ರತಿಫಲವು ಹಾಗೂ (ಶಿಸ್ತಿನ ವಿಷಯಗಳನ್ನು ಹಿಡಿದು) ನೌಕರಿಯ ಶರ್ತುಗಳು ಠರಾಯಿಸಲ್ಪಡಬಹುದಾದಂಥಗಳಾಗಿರತಕ್ಕದ್ದು.

(೨) ಪ್ರಾಂತಿಕ ಸರಕಾರದವರು ಇಂಥ ಸೆಕ್ರೆಟರಿಯ ಸಂಬಳದ ಹಾಗೂ ಭತ್ತೆಗಳ ಮೂರುನಾಲ್ಕಾಂಶದಷ್ಟನ್ನು ಕೊಡತಕ್ಕದ್ದು.

(೩) ಸನ್ ೧೯೪೭ನೆಯ ಇಸ್ವಿಯ ಮುಂಬಯಿಯ ಗ್ರಾಮಪಂಚಾಯತಗಳ ವಿಷಯದ (ಸುಧಾರಣೆಯ) ಆಕ್ಟು ಅಮಲಿನಲ್ಲಿ ಬಂದ ತಾರೀಖಿನ ದಿವಸ ಹುದ್ದೆಯಲ್ಲಿದ್ದ ಪಂಚಾಯತದ ಪ್ರತಿಯೊಬ್ಬ ಸೆಕ್ರೆಟರಿಯು, (೧) ನೆಯ ಪೋಟ ಕಲಮಿನನ್ವಯ ನೇಮಿಸಲ್ಪಟ್ಟಿದ್ದಾನೆಂದು ತಿಳಿಯಲ್ಪಡತಕ್ಕದ್ದು.



### ಸನ್ ೧೯೪೮ ರ ಮುಂಬಯಿ ಗ್ರಾಮಪಂಚಾಯತಿಯ ಸೆಕ್ರೆಟರಿಯ (ನೌಕರಿಯ ಕರಾರುಗಳ ಬಗ್ಗೆ) ಕಾನೂನುಗಳ ಬಗ್ಗೆ ಜಾಹೀರನಾಮೆ

# ಮುಂಬಯಿ ಸರಕಾರ

## ಪೆಲ್ಲ ಆ್ಯಂಡ ಲೋಕಲ್ ಗವ್ಹರ್ನಮೆಂಟ ಡಿಪಾರ್ಟಮೆಂಟ

**ಮುಕ್ಕಾಂ ಮುಂಬಯಿ ನಂಬರ ಎಸ್, ೧೭೪ (೧೦)**
**ತಾ ೧೪ ಮಾಹೆ ನೊವ್ಹೆಂಬರ ೧೯೪೮**

(೧) ಈ ಕಾನೂನಿಗೆ ಸನ್ ೧೯೪೮ ರ ಮುಂಬಯಿಯ ಗ್ರಾಮಪಂಚಾಯತಿಯ ಸೆಕ್ರೆಟರಿಯ (ನೌಕರಿಯ ಕರಾರಿನ ಸಂಬಂಧದ) ಕಾನೂನು ಎಂದು ಅನ್ನಬೇಕು.

ಈ ಕಾನೂನುಗಳು ಅಂದರೆ ನಿಯಮಗಳು ಸುಧಾರಿಸಲ್ಪಡುತ್ತವೆ. ಈ ಪುಸ್ತಕದಲ್ಲಿ ಇಲ್ಲಿಯ ವರೆಗೆ (೧೫ನೆಯ ಅಗಷ್ಟ ೧೯೫೩) ಸುಧಾರಿಸಿದ ಕಾನೂನು (ನಿಯಮ)ಗಳನ್ನು ಕೊಡಲಾಗಿದೆ.

(೨) ಈ ಕಾನೂನಿನಲ್ಲಿ

(ಅ) 'ಆಕ್ಟ' ಅಂದರೆ ಸನ್ ೧೯೩೩ ರ ಮುಂಬಯಿಯ ಗ್ರಾಮಪಂಚಾಯತಿಯ ಆಕ್ಟ ಎಂದಾಗುತ್ತದೆ.

(ಬ) "ಮೊದಲನೆಯ ದರ್ಜೆಯ ಪಂಚಾಯತಿ" ಈ ಸಂಜ್ಞೆಯ ಅರ್ಥವು, ಯಾವುದರ ವಾರ್ಷಿಕ ಉತ್ಪನ್ನವು ೬೦೦೦ ರೂಪಾಯಿ ಇಲ್ಲವೆ ಅದಕ್ಕೂ ಹೆಚ್ಚು ಆದೆಯೋ ಅಂಥ ಪಂಚಾಯತಿ ಎಂದು ಆಗುತ್ತದೆ.

(ಕ) "ಎರಡನೇ ದರ್ಜೆಯ ಪಂಚಾಯತಿ" ಈ ಸಂಜ್ಞೆಯ ಅರ್ಥವು, ಯಾವುದರ ವಾರ್ಷಿಕ ಉತ್ಪನ್ನವು ೩೦೦೦ ರೂಪಾಯಿ ಇಲ್ಲವೆ ಅದಕ್ಕಿಂತ ಹೆಚ್ಚು ಆದರೆ ೬೦೦೦ ರೂಪಾಯಿಗಳಿಗಿಂತ ಕಡಿಮೆ ಅದೆಯೋ ಅಂಥ ಪಂಚಾಯತಿ ಎಂದಾಗುತ್ತದೆ.

(ಡ) "ಮೂರನೆಯ ದರ್ಜೆಯ ಪಂಚಾಯತಿ" ಈ ಸಂಜ್ಞೆಯ ಅರ್ಥವು, ಯಾವುದರ ವಾರ್ಷಿಕ ಉತ್ಪನ್ನವು ೩೦೦೦ ರೂಪಾಯಿಗಳಿಗಿಂತ ಕಡಿಮೆ ಆದೆಯೋ ಅಂಥ ಸಂಚಾಯತಿ ಎಂದು ಆಗುತ್ತದೆ

(ಇ) "ಸೆಕ್ರೆಟರಿ" ಅಂದರೆ, ಪಂಚಾಯತಿಯ ಸೆಕ್ರೆಟರಿ ಎಂದಾಗುತ್ತದೆ

**ಟೀಪು ೧:**— ಪಂಚಾಯತಿಯ ಉತ್ಪನ್ನವನ್ನು ಎಣಿಸುವಾಗ, ಆಕ್ಟಿನ ೩೩ನೇ ಕಲಮಿನ ಪ್ರಕಾರ ಸೆಕ್ರೆಟರಿಯ ಪಗಾರ ಮತ್ತು ಭತ್ತೆ ಈ ಬಗ್ಗೆ ಸರಕಾರವು ಕೊಟ್ಟ ಗ್ರ್ಯಾಂಟುಗಳನ್ನು ಬಿಟ್ಟುಬಿಡಬೇಕು.

**ಟೀಪು ೨** — ಹೊಸ ಪಂಚಾಯತಿಯ ಬಾಬತಿನಲ್ಲಿ ಜಿಲ್ಹಾ ಕಲೆಕ್ಟರರು ಪಂಚಾಯತಿಯ ದರ್ಜೆ (ತರಗತಿ)ಯನ್ನು ಗೊತ್ತುಪಡಿಸುವರು. ಮತ್ತೆ ತರುವಾಯ ಅವರಿಗೆ ಸಂಪೂರ್ಣ ರೋಖ, ವರ್ಷದೊಳಗಿನ ಪ್ರತ್ಯಕ್ಷ ಉತ್ಪನ್ನವು ತಿಳಿದ ಮೇಲೆ ಬದಲಿಸುವ ಅಧಿಕಾರವು ಇರುತ್ತದೆ. ಇತರ ಪಂಚಾಯತಿಗಳ ಬಾಬತಿನಲ್ಲಿ, ಅದರಲ್ಲಿ ಲಗತ ಮೊದಲಿನ ಸಂಪೂರ್ಣ ರೋಖ ಸಾಲಿನಲ್ಲಿ ದೊರೆತ ಉತ್ಪನ್ನವು ಅಧಿಕ ಸಾಧಾರಣ ಮಹಸೂಲಿನ ೧೦೦ ಕ್ಕೆ ೧೫ ರಷ್ಟು ಇರುವ ಗವ್ಹರ್ನಮೆಂಟ ಗ್ರ್ಯಾಂಟು ಮತ್ತು ಡಿಸ್ಟ್ರಿಕ್ಟ ಲೋಕಲ್ ಬೋರ್ಡಿನ ಕಡೆಯಿಂದ ಅದಕ್ಕೆ ಮೊದಲು ದೊರೆಯುತ್ತಿದ್ದ, ಊರೊಳಗಿನ ಸೀಮೆಯು ಈ ಪ್ರದೇಶದೊಳಗಿನ ಲೋಕಲ್ ಫಂಡಿನ ೩ ರಕಮು ಎಷ್ಟೇ ಇದ್ದರೂ, ಇವುಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಅವುಗಳ ದರ್ಜೆಯನ್ನು ಗೊತ್ತುಪಡಿಸಲಾಗುವದು.

## ಲಾಯಖಿಗಳು

(೩) ಯಾವದೇ ಇಸಮಿಗೆ (ಮನುಷ್ಯನಿಗೆ)—

(ಅ) ಅವನು ಹಾಯಸ್ಕೂಲಿನ ೬ನೇ ಇಯತ್ತೆ, ಇಲ್ಲವೆ ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಯ ಲಗತ ಮೊದಲಿನ ತತ್ಸಮ ಪರೀಕ್ಷೆ ಪಾಸಾದವನಿದ್ದರೆ, ಮೊದಲನೆಯ ದರ್ಜೆಯ ಪಂಚಾಯತಿಯ ಸೆಕ್ರೆಟರಿಯ ಸ್ಥಳದಲ್ಲಿ,

(ಬ) ಅವನು ಪ್ರಾಯಮರಿ ಸ್ಕೂಲ ಲಿವ್ವಿಂಗಸರ್ಟಿಫಿಕೇಟ ಪರೀಕ್ಷೆಯನ್ನು ಪಾಸಾದವನು ಇದ್ದ ಹೊರತು ಎರಡನೇ ಇಲ್ಲವೆ ಮೂರನೇ ದರ್ಜೆಯ ಪಂಚಾಯತಿಯ ಸೆಕ್ರೆಟರಿಯ ಸ್ಥಳದಲ್ಲಿ,

(ಕ) ಯಾವದೇ ದರ್ಜೆಯ ಪಂಚಾಯತಿಯ ಸೆಕ್ರೆಟರಿಯ ಸ್ಥಳದಲ್ಲಿ, ಅವನು ಪಂಚಾಯತಿಯು ಆ ಬಾಬತಿನಲ್ಲಿ ನಿಯುಕ್ತ ಮಾಡಿದ, ಸನ್ ೧೯೧೨ ರ ಮುಂಬಯಿಯ ವೈದ್ಯಕೀಯ ಉದ್ಯೋಗವನ್ನು ಮಾಡುವ ಆಕ್ಟಿನ ಅನ್ವಯ ನೋಂದಾಯಿಸಿದ ವೈದ್ಯಕೀಯ ಧಂದೆಯನ್ನು ಮಾಡುವ ಅಥವಾ ಸನ್ ೧೯೩೮ ರ ಮುಂಬಯಿಯ ವೈದ್ಯಕೀಯ ಉದ್ಯೋಗ ಮಾಡುವ ಆಕ್ಟಿನ ಅನ್ವಯ ನೋಂದಾಯಿಸಿದ ಇಲ್ಲವೆ ಯಾದಿಯಲ್ಲಿ ಹೆಸರು ದಾಖಲ ಮಾಡಿದ ವೈದ್ಯಕೀಯ ಉದ್ಯೋಗ ಮಾಡುವವನ ಕಡೆಯಿಂದ ಶಾರೀರಿಕ ಸಧೃಢತೆಯ ಬಗ್ಗೆ ದಾಖಲೆಯನ್ನು ಹಾಜರ ಮಾಡದ ಹೊರತು ನೇಮಿಸತಕ್ಕದ್ದಲ್ಲ

ಆದರೆ ಗೊತ್ತುಪಡಿಸುವದೇನಂದರೆ, ಈ (ಅಂದರೆ) (೩) ನಿಯಮದ ರಕಮು (ಬ) ಕ್ಕನುಸರಿಸಿ ಗೊತ್ತುಪಡಿಸಿದ ಸೆಕ್ರೆಟರಿಯ ಸ್ಥಳದ ಸಂಬಂಧದ ಕರಾರುಗಳನ್ನು ಅಪವಾದಾತ್ಮಕ ಬಾಬತುಗಳಲ್ಲಿ ಸಂಬಂಧಿಸಿದ ಗ್ರಾಮಪಂಚಾಯತಿ ಮತ್ತು ಜಿಲ್ಲಾ ಲೋಕಲ್ ಬೋರ್ಡುಗಳ ಶಿಫಾರಸಿನ ಮೇಲಿಂದ, ಸಡಿಲಿಸುವ ಅಧಿಕಾರವು ಕಲೆಕ್ಟರನಿಗೆ ಇರುತ್ತದೆ

(೪) ಯಾವನ ವಯಸ್ಸು ೨೧ ವರ್ಷ ಪೂರ್ಣವಾಗಿದೆಯೋ ಅಥವಾ ೧೮ ವರ್ಷಗಳು ಪೂರ್ಣ ಆಗಿಲ್ಲವೋ ಅಂಥ ಯಾವನೇ ಇಸಮು ಸೆಕ್ರೆಟರಿ ಎಂದು ನೇಮಿಸಿಕೊಳ್ಳಲು ಪಾತ್ರನಿರುವದಿಲ್ಲ

ಆದರೆ ಗೊತ್ತುಪಡಿಸುವದೇನಂದರೆ, ಪಂಚಾಯತಿಗೆ ಲೇಖಿ ನಮೂದ ಮಾಡಿ ಇಡುವ ಕಾರಣಗಳ ಸಲುವಾಗಿ, ಯಾವದೇ ಇಸಮಿಗೆ, ಅವನ ನೇಮಣೂಕಿಯ ಕಾಲಕ್ಕೆ ಅವನ ಸದರೀ ವಯಸ್ಸು ಪೂರ್ಣ ಆಗಿದ್ದರೂ ಕೂಡ, ಸೆಕ್ರೆಟರಿ ಎಂದು ನೇಮಿಸುವ ಅಧಿಕಾರವಿದೆ

(೫) ಗ್ರಾಮ ಸುಧಾರಣೆಯ ಕೆಲಸದ ಶಿಕ್ಷಣ ದೊರೆತ ಇಸಮು, ಹೀಗೆ ಶಿಕ್ಷಣವು ದೊರೆಯದೇ ಇದ್ದ ಇಸಮಿನಕಿಂತ ಸಕ್ರೆಟರಿ ಎಂದು ನೇಮಿಸಿಕೊಳ್ಳುವ ಬಗ್ಗೆ ಹೆಚ್ಚು ಯೋಗ್ಯನೆಂದು ತಿಳಿಯಲಾಗುವನು

## ಟ್ರೇನಿಂಗ

(೬) ಸೆಕ್ರೆಟರಿಯ ಸ್ಥಳದ ಸಲುವಾಗಿ ಉಮೇದವಾರನೆಂದು ಆಯ್ಕೆಯಾದ ಪ್ರತಿಯೊಬ್ಬ ಇಸಮು ಡಿಸ್ಟ್ರಿಕ್ಟ ಲೋಕಲ್ ಬೋರ್ಡಿನ ಆಫೀಸಿನಲ್ಲಿ ೨ ತಿಂಗಳು

ಇಲ್ಲವೆ ಪ್ರಾಂತಿಕ ಸರಕಾರವು ಫರ್ಮಾಯಿಸಬಹುದಾದ ಇತರ ಯಾವದೇ ಮುದ್ದತಿನ ವರೆಗೆ ಟ್ರೇನಿಂಗ ( ತರಬೇತಿ )ಯನ್ನು ಪಡೆಯಬೇಕು.

## ಪ್ರೊಬೇಶನ್

(೭) ಯಾವನು, ಡಿಸ್ಟ್ರಿಕ್ಟ ಲೋಕಲ್ ಬೋರ್ಡಿನ ಚೀಫ ಆಫೀಸರನ ಇಲ್ಲವೆ ಸೆಕ್ರೆಟರಿ ಇವರ ಸಮಾಧಾನವಾಗುವಂತೆ ತನ್ನ ಟ್ರೇನಿಂಗನ್ನು ಪೂರ್ಣ ಮಾಡಿರುವನೋ ಅಂಥ ಉಮೇದವಾರನಿಗೆ ಎರಡು ವರ್ಷಗಳ ಸಲುವಾಗಿ ಪ್ರೊಬೇಶನರ ( ಬದ್ಲಿ ) ಎಂದು ನೇಮಿಸಲಾಗುವದು

(೮) ಪ್ರತಿಯೊಬ್ಬ ಪ್ರೊಬೇಶನರನು, ತನ್ನ ಪ್ರೊಬೇಶನರಿ ಮುದ್ದತು ಮುಗಿಯುವ ಮೊದಲು, ಪ್ರಾಂತಿಕ ಸರಕಾರವು ಕಾಲ-ಕಾಲಕ್ಕೆ ಗೊತ್ತುಪಡಿಸುವಂಥ ಡಿಪಾರ್ಟಮೆಂಟಿನ ಪರೀಕ್ಷೆಯನ್ನು ಪಾಸಾಗುವದು ಅವಶ್ಯವಿರುವದು ಇಂಥ ಪರೀಕ್ಷೆಯನ್ನು ಪಾಸಾಗುವದರಲ್ಲಿ ತಪ್ಪು ಮಾಡಿದರೆ ಅವನಿಗೆ ಸಾಮಾನ್ಯವಾಗಿ ತನ್ನ ನೌಕರಿಯಿಂದ ಮುಕ್ತನಾಗಬೇಕಾಗುವದು , ಆದರೆ ಅಪವಾದಾತ್ಮಕ ಬಾಬತಿನಲ್ಲಿ ಪಂಚಾಯತಿಗೆ, ಲೇಖಿ ನಮೂದ ಮಾಡಿ ಇಡಬಹುದಾದಂಥ ಕಾರಣದ ಸಲುವಾಗಿ, ಪ್ರೊಬೇಶನರನಿಗೆ ಪರೀಕ್ಷೆ ಪಾಸ ಆಗುವ ಮತ್ತೊಂದು ಚಾನ್ಸ ( ಸಂಧಿ )ನ್ನು ಕೊಡುವ ಮತ್ತು ಆ ಕಾರಣದ ಸಲುವಾಗಿ ಅವನ ಪ್ರೊಬೇಶನದ ಮುದ್ದತನ್ನು ಒಂದು ವರ್ಷಕಿಂತ ಹೆಚ್ಚಲ್ಲದಷ್ಟು ಮುದ್ದತಿನ ವರೆಗೆ ಮತ್ತು ಬೆಳೆಸುವ ಅಧಿಕಾರವಿದೆ

(೯) ಡಿಪಾರ್ಟಮೆಂಟಿನ ಪರೀಕ್ಷಯ ಮುದ್ದತು ಪೂರ್ಣವಾದ ನಂತರ ಶಕ್ಯವಿದಷ್ಟು ಬೇಗನೆ ಕಲೆಕ್ಟರನು ಸರಕಾರೀ ಗ್ಯಾಝೇಟಿನಲ್ಲಿ ಯಶಸ್ವಿ ಉಮೇದವಾರರ ಹೆಸರುಗಳನ್ನು ಗುಣಾನುಕ್ರಮದಿಂದ ಬರೆದು ಪ್ರಸಿದ್ಧಿಸುವನು

## ಅಧಿಕಾರ ಮತ್ತು ಕೆಲಸಗಳು

(೧೦) ಸೆಕ್ರೆಟರಿಯು, ಪಂಚಾಯತಿಯು ಅವನ ಕಡೆಗೆ ಒಪ್ಪಿಸಬಹುದಾದಂಥ ಕಾರಭಾರವಿಷಯದ ಮತ್ತು ಇತರ ಎಲ್ಲ ಕೆಲಸಗಳನ್ನು ಮಾಡಬೇಕು ಅವನು, ಪ್ರಾಂತಿಕ ಸರಕಾರವು ಅವನಿಗೆ ಫರ್ಮಾಯಿಸುವ ಗ್ರಾಮಕಲ್ಯಾಣ ಸಂಬಂಧದ ಕೆಲಸಗಳನ್ನು ಕೂಡ ಮಾಡಬೇಕಾಗುವದು.

(೧೧) ಸೆಕ್ರೆಟರಿಯು ಗ್ರಾಮಪಂಚಾಯತಿಯ ಕಾರಭಾರ ವಿಷಯದ ಎಲ್ಲ ಹುಕುಮುಗಳ ಅಮಲಬಜಾವಣಿಯನ್ನು ಮಾಡಬೇಕು

(ಬ) ಪಂಚಾಯತಿಯ ನೌಕರರ ಮೇಲೆ ದೇಖರೇಖು ಇಡುವ, ಅವರ ಮಾರ್ಗದರ್ಶನ ಮಾಡುವ ಮತ್ತು ಅವರ ಮೇಲೆ ನಿಯಂತ್ರಣ ಇಡುವ ಜವಾಬದಾರಿಯು ಸೆಕ್ರೆಟರಿಯ ಮೇಲೆ ಇರುವದು

(೧೩) ಸೆಕ್ರೆಟರಿಯು, ಆಕ್ಟಿನ ಠರಾವಿಗೆ ಮತ್ತು ಅದರನ್ವಯ ಮಾಡಿದ ಕಾನೂನು ಹಾಗೂ ಪೋಟ ಕಾಯದೆಗಳಿಗೆ ಪಾತ್ರನಾಗಿದ್ದು ತನ್ನ ಸಹಿನಿಶಿ, ಮಾರ್ಕೆಟ ಹಾಗೂ ಸ್ಲಾಟರ ಹೌಸಿಸ್ ಇವುಗಳ ಲಾಯಸನ್ಸಿನ ಹೊರತು, ಈ ಆಕ್ಟಿನ ಅನ್ವಯ ಪಂಚಾಯತಿಯು ಕೊಡುವ ಎಲ್ಲ ಲಾಯಸನ್ಸು ಮತ್ತು ಪರವಾನಿಗೆಗಳನ್ನು ಕೊಡಬೇಕು.

(೧೪) ಪಂಚಾಯತಿಯ ಕರ ಮತ್ತು ಅದಕ್ಕೆ ಬರತಕ್ಕ ಇತರ ರಕಮುಗಳನ್ನು ನಿಯಮಗಳಿಗನುಸರಿಸಿ ವಸೂಲ ಮಾಡುವದಕ್ಕೆ ಸೆಕ್ರೆಟರಿಯು ಜವಾಬುದಾರನಿರುವನು.

(೧೫) ಪ್ರಸಂಗಕ್ಕನುಸರಿಸಿ ಆಡಿಟರ, ಡಿಸ್ಟ್ರಿಕ್ಟ ಲೋಕಲ್‌ಬೋರ್ಡ ಇಲ್ಲವೆ ಕಲೆಕ್ಟರ ಇವರು ನಿದರ್ಶನಕ್ಕೆ ತಂದುಕೊಟ್ಟ ಯಾವದೇ ದೋಷಗಳನ್ನು ಹೋಗಲಾಡಿಸಲು ಸೆಕ್ರೆಟರಿಯು ತೀವ್ರವಾಗಿ ಉಪಾಯ ಯೋಜನೆಗಳನ್ನು ಮಾಡಬೇಕು.

(೧೬) ಸೆಕ್ರೆಟರಿಯು ಸುಳ್ಳು, ಹಣದ ಅಫರಾತಫರ ಅಥವಾ ಪಂಚಾಯತಿಯ ಹಣದ ಅಥವಾ ಗಳಿಕೆಯ ಹಣದ ಕಳವು ಅಥವಾ ಹಾನಿ ಈ ಬಾಬತುಗಳ ಎಲ್ಲ ಸಂಗತಿಗಳ ರಿಪೋರ್ಟನ್ನು ಸರಪಂಚನ ಕಡೆಗೆ ತಾಬಡತೋಬ ಮಾಡಬೇಕು. ಹಾಗೂ ಅವನ್ನು ಇಂಥ ರಿಪೋರ್ಟಿನ ಪ್ರತಿಗಳನು ಜಿಲ್ಲಾ ಲೋಕಲ್‌ಬೋರ್ಡಿನ ಪ್ರೆಸಿಡೆಂಟ ಮತ್ತು ಕಲೆಕ್ಟರ ಇವರಿಗೂ ಕಳಿಸತಕ್ಕದ್ದು.

## ಮುಹಸತಾನಾ

(೧೭) (೧) ಮೊದಲನೆಯ ದರ್ಜೆಯ ಪಂಚಾಯತಿಯ ಸೆಕ್ರೆಟರಿಯ ಸ್ಥಳದ ಸಲುವಾಗಿ ಉಮೇದವಾರನೆಂದು ಆಯ್ಕೆ ಮಾಡಿದ ಪ್ರತಿಯೊಬ್ಬ ಇಸಮಿಗೆ, ಅವನ ಟ್ರೇನಿಂಗಿನ ಮುದ್ದತಿನಲ್ಲಿ ಮತ್ತು ಪ್ರತಿಯೊಬ್ಬ ಪ್ರೊಬೇಶನರನಿಗೆ, ಅವನ ಪ್ರೊಬೇಶನದ ಅವಧಿಯಲ್ಲಿ ೪೦ ರೂಪಾಯಿಗಳಂತೆ ಪಗಾರವು ದೊರೆಯುವದು. ಇಂಥ ಪಂಚಾಯತಿಯ ಸೆಕ್ರೆಟರಿ ಎಂದು ಕಾಯಮು ಆದ ಮೇಲೆ ಅವನಿಗೆ ೪೫-೨ ೮೦ ಈ ಪಗಾರದ ಸ್ಕೇಲಿನಂತೆ ಪಗಾರವು ದೊರೆಯುವದು. ೧೫,೦೦೦ ರೂಪಾಯಿಗಳಿಗಿಂತ ಹೆಚ್ಚು ವಾರ್ಷಿಕ ಉತ್ಪನ್ನವಿದ್ದ ಪಂಚಾಯತಿಗೆ, ಪ್ರಾಂತಿಕ ಸರಕಾರದ ಮುಂಗಡ ಮಂಜೂರಿಯಿಂದ, ತನ್ನ ಸೆಕ್ರೆಟರಿಯ ಸಲುವಾಗಿ ಇದಕ್ಕಿಂತಲೂ ಹೆಚ್ಚಿನ ಪಗಾರ ಸ್ಕೇಲನ್ನು ಮಂಜೂರ ಮಾಡುವ ಅಧಿಕಾರವಿದೆ.

(೨) ಎರಡನೇ ದರ್ಜೆಯ ಪಂಚಾಯತಿಯ ಸೆಕ್ರೆಟರಿಯ ಸ್ಥಳದ ಸಲುವಾಗಿ ಉಮೇದವಾರನೆಂದು ಆಯ್ಕೆ ಮಾಡಿದ ಪ್ರತಿಯೊಬ್ಬ ಮನುಷ್ಯನಿಗೆ, ಅವನ ಟ್ರೇನಿಂಗಿನ ಅವಧಿಯಲ್ಲಿ ಹಾಗೂ ಪ್ರತಿಯೊಬ್ಬ ಪ್ರೊಬೇಶನರನಿಗೆ, ಅವನ ಪ್ರೊಬೇಶನದ ಅವಧಿಯಲ್ಲಿ ಇಂಥ ಪಂಚಾಯತಿಯ ಸೆಕ್ರೆಟರಿ ಎಂದು ಪ್ರತಿ ತಿಂಗಳು ೨೦

ರೂಪಾಯಿಗಳಂತೆ ಪಗಾರ ದೊರೆಯುವದು. ಕಾಯಂ ಆದ ಮೇಲೆ ಅವನಿಗೆ ೩೧-೧-೫೦ ಈ ಪಗಾರ ಸ್ಕೇಲಿನಂತೆ ಪಗಾರ ದೊರೆಯುವದು

(೩) ಮೂರನೇ ದರ್ಜೆಯ ಪಂಚಾಯತಿಯ ಸೆಕ್ರೆಟರಿಯ ಸ್ಥಳದ ಸಲುವಾಗಿ ಉಮೇದವಾರನೆಂದು ಆಯ್ಕೆ ಮಾಡಿದ ಪ್ರತಿಯೊಬ್ಬ ಇಸಮಿಗೆ ಅವನ ಟ್ರೇನಿಂಗ ಅವಧಿಯಲ್ಲಿ ಹಾಗೂ ಪ್ರತಿಯೊಬ್ಬ ಪ್ರೊಬೇಶನರನಿಗೆ ಅವನ ಪ್ರೊಬೇಶನದ ಅವಧಿಯಲ್ಲಿ ಪ್ರತಿತಿಂಗಳು ೨೦ ಇಲ್ಲವೆ ೩೦ ರೂಪಾಯಿಗಳಂತೆ ಪಗಾರವು ದೊರೆಯುವದು ಇಂಥ ಪಂಚಾಯತಿಯ ಸೆಕ್ರೆಟರಿ ಎಂದು ಕಾಯಂ ಆದ ಮೇಲೆ ಅವನಿಗೆ ಪ್ರಸಂಗದಂತೆ ೨೧-೧-೪೦ ಇಲ್ಲವೆ ೩೧-೧-೫೦ ರೂಪಾಯಿಗಳ ಪಗಾರ ಸ್ಕೇಲಿನಂತೆ ಪಗಾರ ದೊರೆಯುವದು

(೪) ಈ ಕಾನೂನುಗಳಲ್ಲಿ ಠರಾಯಿಸಿದನ್ನು ಹೊರ್ತುಪಡಿಸಿ ಪ್ರತಿಯೊಂದು ಬಾಬತಿನಲ್ಲಿ, ಆರಿಸಿದ ಉಮೇದವಾರನಿಗೆ ಅವನ ಟ್ರೇನಿಂಗಿನ ಮುದ್ದತಿನಲ್ಲಿ, ಪ್ರೊಬೇಶನರನಿಗೆ ಅವನ ಪ್ರೊಬೇಶನದ ಅವಧಿಯಲ್ಲಿ ಮತ್ತು ಸೆಕ್ರೆಟರಿಗೆ ಅವನು ಕಾಯಂ ಆದ ಮೇಲೆ. ಡಿಸ್ಟ್ರಿಕ್ಟ ಲೋಕಲ್‌ಬೋರ್ಡು ತನ್ನ ನೌಕರರ ಸಲುವಾಗಿ ತಯಾರಿಸಿದ ಕಾನೂನುಗಳಿಂದ ಗೊತ್ತುಪಡಿಸಿದ ದರದಂತೆ ಭತ್ತೆ ದೊರೆಯುವ ಹಕ್ಕು ಇರುತ್ತದೆ.

(೧೭) (ಅ) ಯಾವಾಗ ಇಂಥ ಉಮೇದವಾರನಿಗೆ, ಅವನು ಪ್ರೊಬೇಶನರಿರಲಿ ಇಲ್ಲವೆ ಸೆಕ್ರೆಟರಿ ಇರಲಿ, ಅವನ ಹುಕುಮತಿಯ ಹದ್ದಿನ ಹೊರಗೆ ಪ್ರವಾಸ ಮಾಡಬೇಕಾಗುವದೋ ಆಗ ಅವನಿಗೆ ಮುಂದೆ ಕಾಣಿಸಿದ ದರದಂತೆ ಪ್ರವಾಸ ಭತ್ತೆ ಮತ್ತು ದಿನದ ಭತ್ತೆ ದೊರೆಯುವ ಹಕ್ಕು ಇರುತ್ತದೆ.

(೧) ಪ್ರವಾಸ ಭತ್ತೆಯನ್ನು, ಮುಂಬಯಿಯ ಸರಕಾರೀ ನೌಕರರ ಬಾಬತಿನ ನಿಯಮುಗಳಿಗನುಸರಿಸಿ ೩ನೇ ವರ್ಗದ ಸರಕಾರೀ ನೌಕರರಿಗೆ ಮಂಜೂರಿ ಮಾಡಲು ಯೋಗ್ಯವಿದ್ದ ದರದಂತೆ,

(೨) ದಿನದ ಭತ್ತೆಯನ್ನು, ಇಂಥ ಇಸಮಿನ ಪಗಾರವು ೫೦ ರೂಪಾಯಿ ಇಲ್ಲವೆ ಅದಕ್ಕೂ ಕಡಿಮೆ ಇದ್ದರೆ, ಮುಂಬಯಿ ಸರಕಾರೀ ನೌಕರನ ಬಾಬತಿನ ನಿಯಮುಗಳಿಗನುಸರಿಸಿ ೩ನೇ ವರ್ಗದ ಸರಕಾರೀ ನೌಕರರಿಗೆ ವರ್ಗ (೪)ರ ಕೆಳಗೆ ಮಂಜೂರ ಮಾಡಿದ ದರದಿಂದ,

ಮತ್ತು, ಇಂಥ ಇಸಮಿಗೆ ಪಗಾರವು ೫೦ ರೂಪಾಯಿ ಇಲ್ಲವೆ ಅದಕ್ಕೂ ಹೆಚ್ಚು ಇದ್ದರೆ, ಮುಂಬಯಿಯ ಸರಕಾರೀ ನೌಕರರ ಬಾಬತಿನ ನಿಯಮುಗಳಿಗನುಸರಿಸಿ ೩ನೆಯ ದರ್ಜೆಯ ಸರಕಾರೀ ನೌಕರರಿಗೆ ವರ್ಗ (೩) ರ ಕೆಳಗೆ ಮಂಜೂರ ಮಾಡಲು ಯೋಗ್ಯವಿದ್ದ ದರದಿಂದ,

(೧೮) ಸೆಕ್ರೆಟರಿಯು ತನ್ನ ಎಲ್ಲ ವೇಳೆ ಹಾಗೂ ಲಕ್ಷ್ಯವನ್ನು ತನ್ನ ಆಫೀಸಿನ ಕೆಲಸದ ಕಡೆಗೆ ಕೊಡಬೇಕು. ಮತ್ತು ಅವನಿಗೆ ಪಂಚಾಯತಿಯ ಮುಂಗಡ ಮಂಜೂರಿಯ ಹೊರತಾಗಿ ಕೆಲಸದ ಮೇಲೆ ಇಲ್ಲವೆ ರಜೆಯ ಮೇಲೆ ಇರುವಾಗ ತನ್ನ ಆಫೀಸಿನ ಕೆಲಸಗಳನ್ನು ಹೊರ್ತುಪಡಿಸಿ ಇತರ ಯಾವದೇ ಉದ್ಯೋಗ ಇಲ್ಲವೆ ನೌಕರಿಯನ್ನು ಮಾಡುವ ಅಧಿಕಾರವು ಇರುವದಿಲ್ಲ

ಆದರೆ ಗೊತ್ತುಪಡಿಸುವದೇನಂದರೆ—ಸೆಕ್ರೆಟರಿಗೆ, ಪಂಚಾಯತಿಯ ಮುಂಗಡ ಮಂಜೂರಿಯಿಂದ. ಅವನಿಗೆ ದೊರೆತ ವೇಳೆಯಲ್ಲಿ ಗ್ರಾಮ ಮಾರ್ಗದರ್ಶಕ (ವ್ಹಿಲೇಜ ಗಾಯಿಡ) ಕೆಲಸಗಳಂಥಹ ಇತರ ಕೆಲಸಗಳನ್ನು ನಡಿಸಿಕೊಳ್ಳುವ ಹಾಗೂ ಆ ಬಗ್ಗೆ ಪಗಾರ ಪಡೆಯುವ ಅಧಿಕಾರ ಇರುತ್ತದೆ

(೧೯) ಸೆಕ್ರೆಟರಿಯು ಅವನ ನೇಮಣೂಕಿಯ ಸ್ಥಳದಲ್ಲಿ ಇರಬೇಕು ಗ್ರುಫ್ ಸೆಕ್ರೆಟರಿಯು ಅವನ ಗುಂಪಿನೊಳಗಿನ ಊರುಗಳ ಪೈಕಿ ಒಂದು ಊರಲ್ಲಿ ಇರಬೇಕು

(೨೦) ಪ್ರತಿಯೊಬ್ಬ ಸೆಕ್ರೆಟರಿಯು ಮೊದಲನೆಯ ದರ್ಜೆಯ ಪಂಚಾಯತಿಯ ಬಾಬತಿನಲ್ಲಿ, ೩೦೦ ರೂಪಾಯಿಗಳ, ಎರಡನೇ ದರ್ಜೆಯ ಇಲ್ಲವೆ ಮೂರನೇ ದರ್ಜೆಯ ಪಂಚಾಯತಿಯ ಬಾಬತಿನಲ್ಲಿ ೨೦೦ ರೂಪಾಯಿಗಳ ಜಾಮೀನು ಕತಬಿಯನ್ನು ಬರೆದು ಕೊಡಬೇಕು ಇದರ ಹೊರತಾಗಿ ಅವನು ಪ್ರತಿಯೊಂದು ಬಾಬತಿನಲ್ಲಿ ಅಷ್ಟೇ ರಕಮಿನ ಒಂದು ಜಾಮೀನು ಕೊಡಬೇಕು ಸದರೀ ಜಾಮೀನ ಕತಬಿಯನ್ನು ಪಂಚಾಯತದ ಹೆಸರಿನಲ್ಲಿ, ಅಧಿಕಾರ ಒಪ್ಪಿಸುವ ಬಾಬತಿನ ಕಾನೂನಿನ ಪೈಕಿ ಕಾನೂನು ೩೭ ರ (೩) ರಕಮಿನ ಅನ್ವಯ ತಯಾರ ಮಾಡಿದ ಫಾಯನಾನ್ಸ ಸಂಬಂಧದ ಕಾನೂನಿನಲ್ಲಿ ಸರಕಾರೀ ನೌಕರರ ಸಲುವಾಗಿ ಗೊತ್ತುಪಡಿಸಿದ ನಮೂನೆ ಪೈಕಿ ಒಂದು ನಮೂನೆಯಲ್ಲಿ ಇರಬೇಕು

(೨೧) ಸೆಕ್ರೆಟರಿಗೆ, ಮುಂಬಯಿಯ ಸರಕಾರೀ ನೌಕರರ ನಿಯಮಗಳ ಪುಸ್ತಕದ ೨ ನೇ ಭಾಗದೊಳಗಿನ ರಜೆಯ ಸಂಬಂಧವ ಸುಧಾರಿಸಿದ ಕಾನೂನುಗಳಿಗೆ ಅನುಸರಿಸಿ ರಜೆ ಸಿಗುವದು ಮತ್ತು ಈ ಕಾರಣಗಳಿಗಾಗಿ ಅವನಿಗೆ ಮೇಲಿನ ದರ್ಜೆಯ ನೌಕರರ ದರ್ಜೆಯು ಅದೆ ಎಂದು ತಿಳಿಯಲ್ಪಡಬೇಕು ಹಾಗೆಯೇ ಡಿಸ್ಟ್ರಿಕ್ಟ ಲೋಕಲ್‌ಬೋರ್ಡಿನ ನೌಕರರಿಗೆ ಯಾವ ಶರ್ತುಗಳ ಮೇಲೆ ಮತ್ತು ಯಾವ ಮರ್ಯಾದೆಯ ವರೆಗೆ ಕಿರುಕುಳ ರಜೆಯು ದೊರೆಯುತ್ತದೆಯೋ ಅದೇ ಪದ್ಧತಿಯಂತೆ ಮತ್ತು ಅದೇ ಮರ್ಯಾದೆಯ ವರೆಗೆ ಅವನಿಗೆ ಕಿರುಕಳ ರಜೆ ದೊರೆಯುವ ಅಧಿಕಾರವಿದೆ ಸರಪಂಚನಿಗೆ ಕಿರುಕುಳ ರಜೆಯನ್ನು ಕೊಡುವ ಅಧಿಕಾರವಿದೆ ಇತರ ಎಲ್ಲ ಬಾಬತುಗಳಲ್ಲಿ ಪಂಚಾಯತಿಯ ರಜೆಯನ್ನು ಕೊಡ

ಬೇಕು. ಮತ್ತು ಆ ರಜೆಯು ಪಂಚಾಯತಿಯು ಇಟ್ಟ ಸರ್ವ್ಹೀಸ ಬುಕ್ಕಿನಲ್ಲಿ ನಮೂದಿಸಬೇಕು.

(೨೨) ಸೆಕ್ರೆಟರಿಗೆ ಯಾವ ತಾರೀಖಿಗೆ ಅವನ ವಯಸ್ಸಿನ ೫೫ನೇ ವರ್ಷವು ಪೂರ್ಣವಾಗುವದೋ ಆ ತಾರೀಖಿಗೆ ಸೇವಾನಿವೃತ್ತವಾಗಬೇಕಾಗಿ ಬರಬೇಕು ಅವನಿಗೆ ಜಿಲ್ಹೆಯ ಕಲೆಕ್ಟರನ ಮುಂಗಡ ಮಂಜೂರಿಯಿಂದಲೇ ಕೇವಲ, ಲೇಖೀ ನಮೂದಿಸಿ ಇಡಬೇಕಾದಂಥ ಸಾರ್ವಜನಿಕ ಕಾರಣಗಳ ಸಲುವಾಗಿ, ಒತ್ತಾಯದಿಂದ ಸೇವಾನಿವೃತ್ತನಾಗುವ ತಾರೀಖಿನ ತರುವಾಯ ನೌಕರಿಯಲ್ಲಿ ಇಡುವ ಅಧಿಕಾರವಿದೆ ಪ್ರತಿಯೊಬ್ಬ ಸೆಕ್ರೆಟರಿಯ ಪ್ರಕರಣವು ಅವನು ಇಳಿವಯಸ್ಸಿನವನು ಆಗುತ್ತ ಬಂದಿರುವಾಗ ಮತ್ತು ಅವನ ನೌಕರಿಯ ಮುದತು ಮುಗಿಯುವ ಪೂರ್ವದಲ್ಲಿ ವಿಚಾರದಲ್ಲಿ ತಕ್ಕೊಳ್ಳಬೇಕು ಒಂದೇ ವೇಳೆಗೆ ಒಂದು ವರ್ಷಕ್ಕಿಂತ ಹೆಚ್ಚು ಮುದತಿನಷ್ಟು ಮುದತು ಬೆಳಿಸುವ ಅಧಿಕಾರವಿಲ್ಲ ಮೊದಲನೆಯ ಬೆಳಿಸುವ ಮುದತು ಸಾಮಾನ್ಯವಾಗಿ ಚಾಲೂ ವರ್ಷದ ಕೊನೆಯ ವರೆಗೆ ಕೊಡಲು ಬರುತ್ತದೆ ನೌಕರಿಯ ಮುದತ್ತನ್ನು ಬೆಳಿಸಬೇಕೆಂದು ಯೋಜಿಸಿದಾಗ, ಮಂಜೂರಿಯ ಇಲ್ಲವೆ ಹೊಸ ಮಂಜೂರಿಯ ಅವಶ್ಯಕತೆಯು ಉತ್ಪನ್ನವಾಗುವ ಕನಿಷ್ಠ ೨ ತಿಂಗಳ ಪೂರ್ವ ದಲ್ಲಿ, ಗ್ರಾಮಪಂಚಾಯತಿಯು ಜಿಲ್ಹಾ ಕಲೆಕ್ಟರನಿಗೆ ಬರೆದು ತಿಳಿಸಬೇಕು

(೨೩) ಪಂಚಾಯತಿಯ ಸೆಕ್ರೆಟರಿಯ ನೌಕರಿಯನ್ನು ಅವನ ಸಮ್ಮತಿ ಯಿಂದ ಮತ್ತು ಅದೇ ಇಲ್ಲವೆ ಮೇಲಿನ ದರ್ಜೆಯ ಪಂಚಾಯತಿಯ ಸಮ್ಮತಿಯಿಂದ ಉಪರೋಕ್ತ ಪಂಚಾಯತಿಯ ಕಡೆಗೆ ತಬದೀಲ ಮಾಡುವ ಅಧಿಕಾರವಿದೆ

(೨೪) ಆಯಾ ಕಾಲಕ್ಕೆ ಅಮಲಿನಲ್ಲಿರುವ ಯಾವದೇ ಕಾಯದೆಯ ಠರಾವು ಗಳಿಗೆ ಬಾಧೆ ಬರದಂತೆ, ಒಳ್ಳೆಯ ಮತ್ತು ಸಾಕಷ್ಟು ಕಾರಣಗಳಿಗಾಗಿ, ಸೆಕ್ರೆಟರಿಗೆ ಮುಂದಿನ ಶಿಕ್ಷೆಗಳನ್ನು ಕೊಡುವ ಅಧಿಕಾರವು ಪಂಚಾಯತಿಗೆ ಇರುತ್ತದೆ

(೧) ನಿಂದಾತ್ಮಕ ಠರಾವು ಮಾಡುವದು

(೨) ಪಗಾರ ಬಡತಿಯನ್ನು ನಿಲ್ಲಿಸುವದು.

(೩) ಕಾನೂನು ೧೭ರ ಪ್ರಕಾರ ಗೊತ್ತುಪಡಿಸಿದ ಟಾಯಿಮು ಸ್ಕೇಲಿನೊಳ ಗಿನ ಕೆಳಗಿನ ದರ್ಜೆಗೆ ಹಾಕುವದು

(೪) ನಿಷ್ಕಾಳಜಿತನ ಇಲ್ಲವೆ ಹುಕುಮಿನ ಭಂಗಗಳ ಮೂಲಕ ಪಂಚಾಯ ತಿಗೆ ಆದ ಎಲ್ಲ ಆರ್ಥಿಕ ಹಾನಿ ಇಲ್ಲವೆ ಯಾವದೇ ಭಾಗವನ್ನು ಅವನ ಪಗಾರದೊಳ ಗಿಂದ ವಸೂಲ ಮಾಡುವದು

(೫) ದಂಡ

(೬) ತಾತ್ಪೂರ್ತಿಕವಾಗಿ ಕೆಲಸದಿಂದ ದೂರಮಾಡುವದು.

(೭) ಮುಂದೆ ನೌಕರಿಯ ಮೇಲೆ ಇಡಲಿಕ್ಕೆ ನಾಲಾಯಕನೆಂದು ಠರಾಯಿಸದಂತೆ ಕೆಲಸದಿಂದ ದೂರ ಮಾಡುವದು.

(೮) ಮುಂದೆ ಪುನಃ ನೌಕರಿಯ ಮೇಲೆ ತೆಗೆದುಕೊಳ್ಳಲು ಸಾಮಾನ್ಯವಾಗಿ ನಾಲಾಯಖನೆಂದು ಠರಾಯಿಸಬಹುದಾದ ರೀತಿಯಲ್ಲಿ ಬಡತರ್ಫ ಮಾಡುವದು

ಆದರೆ ಗೊತ್ತುಪಡಿಸುವದೇನಂದರೆ, ಯಾವದೇ ಸೆಕ್ರೆಟರಿಗೆ, ಪಂಚಾಯತಿಯ ಸಭಾಸದರ ಒಟ್ಟು ಸಂಖ್ಯೆಯ ಕನಿಷ್ಠ ⅔ ಸಭಾಸದರ ಮತಗಳ ಹೊರತು ಮತ್ತು ಜಿಲ್ಲಾ ಕಲೆಕ್ಟರನ ಮುಂಗಡ ಮಂಜೂರಿಯ ಹೊರತಾಗಿ ನೌಕರಿಯಿಂದ ದೂರ ಮಾಡಲು ಇಲ್ಲವೆ ಬಡತರ್ಫ ಮಾಡಲು ಬರಲಾರದು.

**ಖುಲಾಸೆ.**— ಪ್ರೊಬೇಶನದ ಮೇಲೆ ನೇಮಿಸಿದ ಮನುಷ್ಯನಿಗೆ ಪ್ರೊಬೇಶನದ ಮುದ್ದತಿನಲ್ಲಿ ಇಲ್ಲವೆ ಅದರ ಕೊನೆಗೆ ಡಿಶ್ಚಾರ್ಜ ಮಾಡುವದು ಈ ಕಾನೂನಿನ ಅರ್ಥಕ್ಕನುಸರಿಸಿ ಕೆಲಸದಿಂದ ತೆಗೆದು ಹಾಕುವದುಯೆಂದು ಆಗುವದಿಲ್ಲ

(೨೫) ಯಾವದೇ ಸೆಕ್ರೆಟರಿಗೆ,—

(೧) ಅವನಿಗೆ—

(ಅ) ಅವನ ವಿರುದ್ಧ ಇದ್ದ ಆರೋಪ ಅಥವಾ ಆರೋಪಗಳು,

(ಬ) ಪ್ರತಿಯೊಂದು ಆರೋಪವು ಯಾವುದರ ಮೇಲೆ ಅವಲಂಬಿಸಿದೆಯೋ ಅಂಥ ಅವನು ಮಾಡಿರುವನೆಂದು ಅನ್ನಲ್ಪಡುತ್ತಿರುವ ಸಂಗತಿಗಳು.

(ಕ) ಸದರೀ ಪ್ರಕರಣದ ಸಂಬಂಧದಿಂದ ಹುಕುಮು ಮಾಡುವಾಗ ವಿಚಾರ ಮಾಡುವ ಬಗ್ಗೆ ಯೋಜಿಸಿರುವ ಇಂಥ ಇತರ ಯಾವದೇ ಪರಿಸ್ಥಿತಿಯಲ್ಲಿ,

ಈ ಸಂಬಂಧದ ಮಾಹಿತಿ ಕೊಡಲ್ಪಡದ ಹೊರತು, ಮತ್ತು

(೨) ಅವನಿಗೆ —

(ಅ) ಅವನ ವಿರುದ್ಧ ಸಾಕ್ಷಿದಾರನ ಉಲಟ ತಪಾಸಣಿ ಮಾಡುವ,

(ಬ) ತನ್ನ ಅಂಬೋಣವನ್ನು ಸ್ವತಃ ಹೇಳುವ

ಸಂಧಿಯನ್ನು ಕೊಡದ ಹೊರತು, ಕೆಲಸದಿಂದ ದೂರಮಾಡಲು ಇಲ್ಲವೆ ಬಡತರ್ಫ ಮಾಡಲು ಬರಲಾರದು

ಆದರೆ ಗೊತ್ತುಪಡಿಸುವದೇನಂದರೆ, ಅವನ ಮೇಲೆ ಯಾವ ಕಾರಣದಿಂದ ಅಪರಾಧದ ಸಾಬೀತಿಯ ( ಪ್ರತ್ಯಕ್ಷ ಪ್ರಮಾಣ ) ರೂವು ಫೌಜದಾರೀ ಕೋರ್ಟಿನಲ್ಲಿ ಮಾಡುವದರಲ್ಲಿ ಬಂದಿರಬಹುದಾದಂಥ ಕಾರಣದಿಂದ ಉಪಾಯ ಯೋಜನೆ ಮಾಡುವದಿದ್ದ ಪ್ರಸಂಗದಲ್ಲಿ, ಈ ಕಾನೂನಿನ ಠರಾವುಗಳು ಲಾಗೂ ಆಗಲಾರವು

(೨೬) ಫೌಜದಾರೀ ಅಪರಾಧದ ಸಂಬಂಧದಲ್ಲಿ ಯಾವನ ವಿರುದ್ಧ ಖಟ್ಲೆ ದಾಖಲಮಾಡುವದರಲ್ಲಿ ಬಂದಿದೆಯೋ ಅಂಥ ಸೆಕ್ರೆಟರಿಗೆ, ಯಾವ ಅಪರಾಧದ

ಆರೋಪವು ಅವನ ಮೇಲೆ ಹೇರಲಾಗಿದೆಯೋ ಅಂಥ ಅಪರಾಧವು, ಪಂಚಾಯತಿಯ ನೌಕರನ ನಾತೆಯಿಂದ ಅವನು ಮಾಡಿರುವನು ಎಂದು ಅಭಿಪ್ರಾಯವಿದ್ದರೆ ಇಲ್ಲವೆ ಸದರೀ ಖಟ್ಲೆಯ ಕಾರಣದಿಂದ ಇಂಥ ನೌಕರನೆಂದು ತನ್ನ ಕೆಲಸಗಳನ್ನು ಪಾರುಗಾಣಿಸುವಲ್ಲಿ ಅವನಿಗೆ ತೊಂದರೆಬರುವ ಸಂಭವವಿದ್ದರೆ, ಇಲ್ಲವೆ ಸದರೀ ಅಪರಾಧವು ನೈತಿಕ ಕ್ಷುಲ್ಲಕತನವನ್ನು ತೋರಿಸುವಂಥದು ಅಪರಾಧವಾಗಿದ್ದರೆ, ಪಂಚಾಯತಿಯು ಇಂಥ ಖಟ್ಲೆಯ ನಿರ್ಣಯವು ಆಗುವವರೆಗೆ ಸಸ್ಪೆಂಡ ಇಡಬೇಕು

(೨೭) ನಿಯಮ ೨೪ ಇಲ್ಲವೆ ೨೬ ರ ಅನ್ವಯ ಸೆಕ್ರೆಟರಿಗೆ ಸಸ್ಪೆಂಡ ಮಾಡಿದ್ದಾಗ ಸಸ್ಪೆಂಡ ಮಾಡಿದ ಮುದ್ದತಿನಲ್ಲಿ ಅವನಿಗೆ ಪೂರ್ಣಪಗಾರ ದೊರೆಯುವ ಹಕ್ಕು ಇರಲಾರದು ಆದರೆ ಜಿಲ್ಹಾ ಲೋಕಲ್‌ಬೋರ್ಡು ತನ್ನ ನೌಕರರ ಸಲುವಾಗಿ ಮಾಡಿದ ನಿಯಮಗಳಿಗನುಸರಿಸಿ, ಗೊತ್ತುಪಡಿಸಬಹುದಾದದರಿಂದ ಇಲ್ಲವೆ ಇಂಥ ನಿಯಮಗಳು ಇರದಿದ್ದರೆ, ಕಲೆಕ್ಟರರ ಕಡೆಯಿಂದ ಮಂಜೂರಮಾಡಲ್ಪಡಬಹುದಾದ ದರರಿಂದ ತಿಂಗಳು ನಿರ್ವಾಹ ಭತ್ತೆ ಮತ್ತು ತುಟ್ಟೀಭತ್ತೆ ಇದ್ದರೆ ಕೊಡಲ್ಪಡಬೇಕು

(೨೮) ನಿಯಮ ೨೬ ರ ಅನ್ವಯ ಸಸ್ಪೆಂಡ ಮಾಡಲಾದ ಸೆಕ್ರೆಟರಿಯು ಇಂಥ ಖಟ್ಲೆಯಲ್ಲಿ ನಿರ್ದೋಷಿ ಎಂದು ನಿರ್ಣಯಿಸಲ್ಪಟ್ಟರೆ, ಅವನಿಗೆ ಅವನ ಸ್ಥಳದಲ್ಲಿ ಮರಳಿ ಹಾಜರಪಡಿಸಿಕೊಳ್ಳಬೇಕು ಮತ್ತು ಅವನಿಗೆ ಮೊದಲೇ ಕೊಡಲಾಗಿದ್ದ ನಿರ್ವಾಹಭತ್ತೆ ಮತ್ತು ತುಟ್ಟಿಭತ್ತೆಗಳ ರಕಮನ್ನೂ ಕಳೆದು ಸಸ್ಪೆಂಡ ಮಾಡಿದ ಮುದ್ದತಿನ ಬಗ್ಗೆಯ ಪಗಾರ ಮತ್ತು ಇತರ ಭತ್ತೆಗಳನ್ನು ಇದ್ದರೆ ಕೊಡಬೇಕು

## ಅರೆವೇಳೆ ಕೆಲಸಮಾಡುವ (ಪಾರಟಾಯಿಮ) ಸೆಕ್ರೆಟರಿಗಳ (ನೌಕರಿಯ ಕರಾರುಗಳ) ಸಂಬಂಧದ ನಿಯಮಗಳು

ನಂ. ೪೦೪೪/೩೩. ತಾ. ೨೮ ನೆಯ ಮೇ ೧೯೫೩

೧ (1) ಈ ನಿಯಮಗಳನ್ನು ಮುಂಬಯಿಯ ಗ್ರಾಮಪಂಚಾಯತಿಗಳ ಅರೆವೇಳೆ ಕೆಲಸಮಾಡುವ ಸೆಕ್ರೆಟರಿಗಳ (ನೌಕರಿಯ ಕರಾರುಗಳ) ಸಂಬಂಧದ ನಿಯಮಗಳೆಂದು ಕರೆಯಬಹುದು

(11) ಇವು ಅರೆವೇಳೆ (Part time) ಕೆಲಸಮಾಡುವ ಸೆಕ್ರೆಟರಿಗಳಿಗೆ ಅನ್ವಯಿಸುತ್ತವೆ

೨ ಈ ನಿಯಮಗಳ ವಿಷಯಕ್ಕ ಅಥವಾ ಸಂದರ್ಭಕ್ಕೆ ಯಾವದೇ ಬಾಧೆ ಬಾರದಿದ್ದರೆ—

(ಅ) "ಆಕ್ಟ" ಅಂದರೆ ಸನ್ ೧೯೩೩ನೇ ಇಸ್ವಿಯ ಮುಂಬಯಿಯ ಗ್ರಾಮಪಂಚಾಯತಗಳ ವಿಷಯದ ಆಕ್ಟು ಎಂದು ಅರ್ಥವಾಗುತ್ತದೆ.

(ಬ) "ಮೊದಲನೇ ವರ್ಗದ ಪಂಚಾಯತವು" ಅಂದರೆ ಯಾವುದರ ವಾರ್ಷಿಕ ಉತ್ಪನ್ನವು ವರ್ಷಕ್ಕೆ ೬,೦೦೦ ರೂಪಾಯಿ ಅಥವಾ ಅದಕ್ಕೂ ಹೆಚ್ಚು ಇರುತ್ತದೆಯೋ ಅಂಥ ಪಂಚಾಯತಿ ಎಂದು ಅರ್ಥವಾಗುತ್ತದೆ

(ಕ) "ಎರಡನೇ ವರ್ಗದ ಪಂಚಾಯತವು" ಅಂದರೆ ಯಾವುದರ ವಾರ್ಷಿಕ ಉತ್ಪನ್ನವು ೩,೦೦೦ ರೂಪಾಯಿಗಳಿಗಿಂತ ಹೆಚ್ಚು ಆದರೆ ೬,೦೦೦ ರೂ. ಗಳಿಗಿಂತ ಕಡಮೆ ಇರುವದೋ ಅಂಥ ಪಂಚಾಯತಿಯು ಎಂದು ಅರ್ಥವಾಗುತ್ತದೆ.

(ಡ) "ಮೂರನೇ ವರ್ಗದ ಪಂಚಾಯತಿಯು" ಅಂದರೆ ಯಾವುದರ ವಾರ್ಷಿಕ ಉತ್ಪನ್ನವು ೩ ೦೦೦ ರೂಪಾಯಿಗಳಿಗಿಂತ ಕಡಿಮೆ ಇರುವದೋ ಅಂಥ ಪಂಚಾಯತಿಯು ಎಂದು ಅರ್ಥವಾಗುತ್ತದೆ.

ಸೆಕ್ರೆಟರಿಯು ಅಂದರೆ ಗ್ರಾಮಪಂಚಾಯತಿಯ ಸೆಕ್ರೆಟರಿಯು.

೩, ಪಂಚಾಯತಿಯ ಉತ್ಪನ್ನವನ್ನು ಎಣಿಸುವಾಗ ಕ, ನಂ ೯೨ (ಅ) ದಂತೆ ಸರಕಾರದವರಿಂದ ದೊರೆಯುವ ಗ್ರ್ಯಾಂಟನ್ನು ಹಿಡಿಯಬೇಕು ಆದರೆ ಪಂಚಾಯತದ ಸೆಕ್ರೆಟರಿಯ ಪಗಾರ ಮತ್ತು ಭತ್ತೆಗಳ ಸಲುವಾಗಿ ೩೩ನೇ ಕಲಮಿನ ಪ್ರಕಾರ ದೊರೆಯುವ ಗ್ರ್ಯಾಂಟನ್ನು ಲೆಕ್ಕದಲ್ಲಿ ಹಿಡಿಯಬಾರದು

೪. (೧) ಪಂಚಾಯತಗಳ ವಾರ್ಷಿಕ ಉತ್ಪನ್ನವನ್ನು ನೋಡಿ ಕಲೆಕ್ಟರನು ಅದರ ವರ್ಗವನ್ನು ಗೊತ್ತುಪಡಿಸುವನು.

ಆದರೆ ಗೊತ್ತುಪಡಿಸುವದೇನಂದರೆ— ಈ ನಿಯಮಗಳು ಪ್ರಸಿದ್ಧವಾಗುವ ಪೂರ್ವದಲ್ಲಿ ಯಾವದೊಂದು ಪಂಚಾಯತಿಯ ವರ್ಗವು ಠರಾಯಿಸಲ್ಪಟ್ಟಿದ್ದರೆ, ಪೋಟ-ಕಲಮು ೨ನೇದ್ದರ ಪ್ರಕಾರ ಬದಲು ಆಗುವ ವರೆಗೆ ಅದೇ ವರ್ಗವು ಚಾಲೂ ಇರತಕ್ಕದ್ದು

ಮತ್ತು ಗೊತ್ತುಪಡಿಸುವದೇನಂದರೆ - ಈ ನಿಯಮಗಳು ಪ್ರಸಿದ್ಧಿಸಲ್ಪಟ್ಟ ನಂತರ ಸ್ಥಾಪಿಸಲ್ಪಡುವ ಪಂಚಾಯತಿಗಳ ಬಾಬತಿನಲ್ಲಿ, ಕಲೆಕ್ಟರನು ಸಾರಾಸಾರ ವಿಚಾರಮಾಡಿ ಅವುಗಳ ವರ್ಗವನ್ನು ಗೊತ್ತುಪಡಿಸುವನು.

(೨) ಪಂಚಾಯತಿಗಳ ವರ್ಗಗಳು ನಿಶ್ಚಯಿಸಲ್ಪಟ್ಟ ೨ ವರ್ಷಗಳ ನಂತರ, ಮತ್ತು ಆ ಮೇಲೆ ಪ್ರತಿ ಮೂರು ವರ್ಷಗಳ ನಂತರ ಕಲೆಕ್ಟರನು ಅವುಗಳ ೩ ವರ್ಷಗಳ ವಾರ್ಷಿಕ ಉತ್ಪನ್ನದ ಸರಾಸರಿಯನ್ನು ನೋಡಿ ಅವುಗಳ ವರ್ಗಗಳನ್ನು ಅವಶ್ಯವಿದ್ದರೆ ಬದಲಾಯಿಸಬೇಕು

## ಪ್ರಾಥಮಿಕ

೫ ಯಾವನು, ಪ್ರಾಥಮಿಕ ಶಾಲೆಯ ಶಿಕ್ಷಕ, ಸ್ಥಾನಿಕ ಸಹಕಾರಿ ಸಂಘದ ಸೆಕ್ರೆಟರಿ, ಅಥವಾ ಯಾವದೇ ಸಾರ್ವಜನಿಕ ಸಂಸ್ಥೆಯ ಕೆಳಗೆ ಕೆಲಸ ಮಾಡುತ್ತಿರುವ

ಯೋಗ್ಯ ಇಸಮಿಗೆ, ಅವರ ಅಪ್ಪಣೆಯಿಂದ ಪಂಚಾಯತಿಯು ಸೆಕ್ರೆಟರಿ ಎಂದು ನೇಮಿಸಿಕೊಳ್ಳಬಹುದು.

### ಅರ್ಹತೆಗಳು

೬ ಯಾವನೊಬ್ಬನು—

(ಅ) ಕನಿಷ್ಠಪಕ್ಷ ಹಾಯಸ್ಕೂಲಿನ ೬ನೇ ಇಯತ್ತೆ ಅಥವಾ ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಯ ಹಿಂದಿನ ಪರೀಕ್ಷೆಗೆ ಸರಿಸಮಾನವಾದ ಪರೀಕ್ಷೆಯನ್ನು ಅಥವಾ ಎಸ್ ಎಸ್. ಸಿ. ಪರೀಕ್ಷೆಯನ್ನು ಪಾಸಾಗದ ಹೊರತು, ಮೊದಲನೇ ವರ್ಗದ ಪಂಚಾಯತಿಯ ' ಸೆಕ್ರೆಟರಿ ಎಂದು ನಿಯಮಿಸಲ್ಪಡಬಾರದು

(ಬ) ಕನಿಷ್ಠಪಕ್ಷ ಪ್ರಾಥಮಿಕ ಶಾಲಾ ಪ್ರಮಾಣಪತ್ರ ಪರೀಕ್ಷೆಯನ್ನು ಅಥವಾ ಸರಕಾರದಿಂದ ಮಾನ್ಯವಾದ ಪ್ರಾ. ಶಾ ಪ್ರ ಪ ಪರೀಕ್ಷೆಗೆ ಸರಿಸಮಾನವಾದ ಯಾವದೇ ಇತರ ಪರೀಕ್ಷೆಯನ್ನು ಪಾಸಾಗದ ಹೊರತು “ ಎರಡನೇ ಅಥವಾ ಮೂರನೇ ವರ್ಗದ ಪಂಚಾಯತಿಯ ” ಸೆಕ್ರೆಟರಿ ಎಂದು ನಿಯಮಿಸಲ್ಪಡಬಾರದು.

ಆದರೆ ಗೊತ್ತುಪಡಿಸುವದೇನಂದರೆ,— ಈ ನಿಯಮದ (ಬ) ಪೋಟ ನಿಯಮದಲ್ಲಿ ಗ್ರಾಮಪಂಚಾಯತಿಯ ಸೆಕ್ರೆಟರಿಯ ಸ್ಥಳದ ಸಲುವಾಗಿ ಗೊತ್ತುಪಡಿಸಿದ ಅರ್ಹತೆಯನ್ನು ಕಲೆಕ್ಟರನು ಕೆಲವು ಅನಿವಾರ್ಯ ಸಂದರ್ಭಗಳಲ್ಲಿ, ಗ್ರಾಮಪಂಚಾಯತಿ ಹಾಗೂ ಜಿಲ್ಹಾ ಲೋಕಲ್‌ಬೋರ್ಡುಗಳ ಶಿಫಾರಸಿನೊಂದಿಗೆ ಸಡಿಲಿಸಬಹುದು

೭ ಸೆಕ್ರೆಟರಿಯ ಸ್ಥಳದ ನೇಮಣೂಕು ಮಾಡುವಾಗ್ಗೆ, ಯಾವನು ಗ್ರಾಮಸುಧಾರಣೆಯ ತರಬೇತಿಯನ್ನು ಪಡೆದಿರುವನೋ ಅಂಥವನಿಗೆ ಇಂಥ ತರಬೇತಿಯನ್ನು ಪಡೆಯದವನಿಗಿಂತ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡಬೇಕು

### ತರಬೇತಿ

೮. ಇಂಥ ಪಂಚಾಯತಿಗಳ ಸೆಕ್ರೆಟರಿ ಎಂದು ಆರಿಸಲ್ಪಟ್ಟ ಪ್ರತಿಯೊಬ್ಬ ವ್ಯಕ್ತಿಯು, ಜಿಲ್ಹಾ ಲೋಕಲ್‌ಬೋರ್ಡು ಗೊತ್ತುಪಡಿಸುವ ಅವಧಿಯ ವರೆಗೆ, ಜಿಲ್ಹಾ ಲೋಕಲ್‌ಬೋರ್ಡಿನ ಆಫೀಸಿಗೆ ತರಬೇತಿ ಪಡೆಯುವದಕ್ಕಾಗಿ ಹೋಗಬೇಕು.

### ಪ್ರೊಬೇಶನ್ ( ಉಮೇದವಾರಿಕೆ )

೯ ಯಾವ ಉಮೇದವಾರನು, ಜಿಲ್ಹಾ ಲೋಕಲ್‌ಬೋರ್ಡಿನ ಚೀಫ್ ಆಫೀಸರನಿಗೆ ತೃಪ್ತಿಕರವಾಗುವಂತೆ ತನ್ನ ತರಬೇತಿಯನ್ನು ಮುಗಿಸಿರುವನೋ, ಅಂಥವನನ್ನು ೨ ವರ್ಷಗಳ ವರೆಗೆ ಪ್ರೊಬೇಶನರ ( ಉಮೇದವಾರ )ನೆಂದು ನೇಮಿಸಿಕೊಳ್ಳಬೇಕು

೧೦. ಪ್ರತಿಯೊಬ್ಬ ಪ್ರೊಬೇಶನರ್ ಉಮೇದವಾರನು, ತನ್ನ ಉಮೇದವಾರಿಕೆಯ ಅವಧಿಯನ್ನು ಮುಗಿಸುವ ಪೂರ್ವದಲ್ಲಿ, ಪೂರ್ಣ ಅವಧಿಯ ಪಂಚಾಯತದ ಸಕ್ರೆಟರಿಗಳ ಸಲುವಾಗಿ ಶಿಫಾರಸು ಮಾಡಲ್ಪಟ್ಟ ಖಾತೆಯ ( ಡಿಪಾರ್ಟಮೆಂಟದ ) ಪರೀಕ್ಷೆಯಲ್ಲಿ ಪಾಸಾಗಬೇಕು ಇಂಥ ಪರೀಕ್ಷೆಯನ್ನು ಪಾಸಾಗುವಲ್ಲಿ ಅಯಶಸ್ವಿಯಾದ ಉಮೇದವಾರನು ತನ್ನ ನೇಮಣೂಕಿಯನ್ನು ಕಳೆದುಕೊಳ್ಳುವನು. ಆದರೆ ಕೆಲವು ಅಪವಾದಾತ್ಮಕ ಪ್ರಸಂಗಗಳಲ್ಲಿ, ಪಂಚಾಯತವು, ಬರೆದಿಡುವಂಥ ಕಾರಣಗಳಿಗಾಗಿ, ಆ ಉಮೇದವಾರನಿಗೆ ಪಾಸಾಗಲು ಮತ್ತೊಂದು ಚಾನ್ಸನ್ನು ( ಅವಕಾಶವನ್ನು ) ಕೊಡಬೇಕು ಮತ್ತು ಆ ಸದರೀ ಕಾರಣಕ್ಕಾಗಿ ಅವನ ಉಮೇದವಾರಿಕೆಯ ಅವಧಿಯನ್ನು ಒಂದು ವರ್ಷಕ್ಕಿಂತ ಹೆಚ್ಚಲ್ಲದಷ್ಟು ಮುದ್ದತ್ತಿನ ವರೆಗೆ ಬೆಳೆಯಿಸಬೇಕು

೧೧ ಇಂಥ ಖಾತೆಯ ( ಡಿಪಾರ್ಟಮೆಂಟಲ್ ) ಪರೀಕ್ಷೆಯ ಪರಿಣಾಮವನ್ನು, ಪರೀಕ್ಷೆಯು ಮುಗಿದ ನಂತರ ಶಕ್ಯವಿದ್ದಷ್ಟು ತೀವ್ರವಾಗಿ, ಕಲೆಕ್ಟರನು ಸರಕಾರೀ ಗ್ಯಾಝೆಟನಲ್ಲಿ, ತೇರ್ಗಡೆ ಹೊಂದಿದ ಉಮೇದವಾರರ ಹೆಸರುಗಳನ್ನು ಗುಣಾನುಕ್ರಮದಿಂದ ಪ್ರಸಿದ್ಧಿಸಬೇಕು.

## ಅಧಿಕಾರಗಳು ಮತ್ತು ಕರ್ತವ್ಯಗಳು

೧೨. ಸೆಕ್ರೆಟರಿಯು, ಪಂಚಾಯತವು ಅವನಿಗೆ ಒಪ್ಪಿಸಿಕೊಡಬಹುದಾದಂಥ ಎಲ್ಲ ಆಡಳಿತೆಯ ಮತ್ತು ಇತರ ಕೆಲಸಗಳನ್ನು ಮಾಡಬೇಕು. ಮತ್ತೂ ರಾಜ್ಯ ಸರಕಾರವು ಒಪ್ಪಿಸಿಕೊಡಬಹುದಾದಂಥ ಗ್ರಾಮ ಸುಧಾರಣೆಯ ಇತರ ಕೆಲಸಗಳನ್ನೂ ಅವನು ಮಾಡಬೇಕು.

೧೩. ಸೆಕ್ರೆಟರಿಯು ಪಂಚಾಯತದ ಎಲ್ಲ ಕಾರ್ಯಕಾರೀ ಆಜ್ಞೆಗಳನ್ನು ಅಮಲಿನಲ್ಲಿ ತರಬೇಕು.

೧೪. ಸೆಕ್ರೆಟರಿಯು, ಗ್ರಾಮಪಂಚಾಯತಿಯ ನೌಕರರ ಮೇಲ್ವಿಚಾರಣೆ, ಮಾರ್ಗದರ್ಶನ ಮತ್ತು ನಿಯಂತ್ರಣಗಳಿಗೂ ಹೊಣೆಗಾರನಿರುವನು;

೧೫. ಸೆಕ್ರೆಟರಿಯು, ಈ ಕಾನೂನಿನ ಕಲಮುಗಳು, ನಿಯಮಗಳು ಮತ್ತು ಪೋಟ ನಿಯಮಗಳಿಗೆ ಒಳಪಟ್ಟು, ಪೇಟೆ ( ಮಾರ್ಕೆಟ್ ) ಪ್ರಾಣಿವಧಾಲಯಗಳಿಗೆ ಸಂಬಂಧಿಸಿದ ಲಾಯಸನ್ಸುಗಳನ್ನು ಹೊರ್ತುಪಡಿಸಿ, ಪಂಚಾಯತವು ಕೊಡಬಹುದಾದಂಥ ಇಲ್ಲವೆ ಪೂರೈಸಬಹುದಾದಂಥ ಎಲ್ಲ ಲಾಯಸನ್ಸ ಮತ್ತು ಪರಮಿಟ್ಟುಗಳನ್ನು ತನ್ನ ಸಹಿನಿಸಿ ಕೊಡಬೇಕು.

೧೬. ಸೆಕ್ರೆಟರಿಯು, ಟ್ಯಾಕ್ಸ ಮತ್ತು ಇತರ ಕರಗಳನ್ನು ತೀವ್ರವಾಗಿ ವಸೂಲ ಮಾಡುವ ಬಗ್ಗೆ ಹೊಣಗಾರನಿರುವನು.

೧೭. ಸೆಕ್ರೆಟರಿಯು, ಆಡಿಟರ (ಲೆಕ್ಕತಪಾಸಿಗ), ಅಥವಾ ಜಿಲ್ಲಾ ಲೋಕಲ್ ಬೋರ್ಡು ಇಲ್ಲವೆ ಕಲೆಕ್ಟರನು ತೋರಿಸಿಕೊಟ್ಟ ಯಾವದೇ ಅವ್ಯವಸ್ಥೆಯನ್ನು ತಡೆಯಲು ಕೂಡಲೇ ಕ್ರಮಗಳನ್ನು ಕೈಕೊಳ್ಳಬೇಕು

೧೮. ಸೆಕ್ರೆಟರಿಯು, ಪಂಚಾಯತಿಯ ಹಣದ ಅಥವಾ ಆಸ್ತಿಯ ಕಳವು ಅಥವಾ ಹಾನಿ ಇಲ್ಲವೆ ದುರುಪಯೋಗ ಅಥವಾ ದೋಷಗಳ ಸಂಬಂಧದ ಎಲ್ಲ ವಿಷಯಗಳನ್ನು ಕೂಡಲೇ ಸರಪಂಚನಿಗೆ ರಿಪೋರ್ಟಿನ ಮೂಲಕ ತಿಳಿಸಬೇಕು ಮತ್ತು ಇಂಥ ರಿಪೋರ್ಟುಗಳ ಒಂದು ನಕಲನ್ನು ಜಿಲ್ಲಾ ಲೋಕಲ್ ಬೋರ್ಡಿನ ಅಧ್ಯಕ್ಷ ಮತ್ತು ಕಲೆಕ್ಟರರಿಗೂ ಕಳಿಸಿಕೊಡಬೇಕು

## ಪಗಾರ

೧೯. (೧) ಯಾವನೊಬ್ಬನು "ಮೊದಲನೇ ವರ್ಗದ ಪಂಚಾಯತಿಯ ಸೆಕ್ರೆಟರಿಯ ಸ್ಥಳಕ್ಕೆ ಉಮೇದವಾರನೆಂದು ಆರಿಸಲ್ಪಟ್ಟಾಗ ಅವನ ತರಬೇತಿಯ ಅವಧಿಯಲ್ಲಿ ಮತ್ತು ಪ್ರತಿಯೊಬ್ಬ ಪ್ರೊಬೇಶನರನು ಉಮೇದವಾರನನ್ನು ಪ್ರೊಬೇಶನರನೆಂದು ಆರಿಸಲ್ಪಟ್ಟಾಗ ಅವನ ಆ ಪ್ರೊಬೇಶನ್‌ದ ಅವಧಿಯಲ್ಲಿ ತಿಂಗಳಿಗೆ ೨೦ ರೂಪಾಯಿಗಳಂತೆ ಪಗಾರ ಪಡೆಯುವನು ಇಂಥ ಪಂಚಾಯತಿಯ ಸೆಕ್ರೆಟರಿಯು ಕಾಯಂ ಮಾಡಲ್ಪಟ್ಟ ಮೇಲೆ ಅವನಿಗೆ ೨೦-೨-೮೦ ರ ಸ್ಕೇಲಿನಂತೆ ಪಗಾರ ದೊರೆಯುವದು ಯಾವ ಪಂಚಾಯತಿಯ ವಾರ್ಷಿಕ ಉತ್ಪನ್ನವು ೧೫೦೦೦ ರೂಪಾಯಿಗಳಿಗೆ ಮೀರಿರುವದೋ ಅಂಥ ಪಂಚಾಯತಿಯು ತನ್ನ ಸೆಕ್ರೆಟರಿಗಾಗಿ, ರಾಜ್ಯ ಸರಕಾರದ ಪೂರ್ವ ಸಮ್ಮತಿಯನ್ನು ಪಡೆದು ಹೆಚ್ಚಿನ ದರದ ಪಗಾರದ ಪ್ರಮಾಣವನ್ನು ಮಂಜೂರ ಮಾಡಬಹುದು

(೨) ಯಾವನೊಬ್ಬನು "ಎರಡನೇ ವರ್ಗದ ಪಂಚಾಯತಿಯ" ಸೆಕ್ರೆಟರಿಯ ಸ್ಥಳಕ್ಕೆ ಉಮೇದವಾರನೆಂದು ಆರಿಸಲ್ಪಟ್ಟಾಗ, ಅವನ ತರಬೇತಿಯ ಅವಧಿಯಲ್ಲಿ ಅವನಿಗೆ, ಹಾಗೂ ಪ್ರೊಬೇಶನರ (ಬದ್ಧಿ)ನೆಂದು ನಿಯಮಿಸಲ್ಪಟ್ಟ ಪ್ರೊಬೇಶನರ (ಉಮೇದವಾರ)ನಿಗೆ ಅವನ ಪ್ರೊಬೇಶನದ ಅವಧಿಯಲ್ಲಿ ಪ್ರತಿ ತಿಂಗಳ ೧೫ ರೂಪಾಯಿಗಳಂತೆ ಪಗಾರ ಸಿಗುವದು ಮತ್ತು ಅವನು ಇಂಥ ಪಂಚಾಯತಿಯ ಸೆಕ್ರೆಟರಿ ಎಂದು ಕಾಯಂ ಮಾಡಲ್ಪಟ್ಟ ಮೇಲೆ ಅವನಿಗೆ ೧೬-೧-೨೬ ಈ ಸ್ಕೇಲಿನಂತೆ ಪಗಾರ ದೊರೆಯುವದು.

(೩) ಯಾವನೊಬ್ಬನು ಮೂರನೇ ವರ್ಗದ ಪಂಚಾಯತಿಯ ಸೆಕ್ರೆಟರಿಯ ಸ್ಥಳಕ್ಕೆ ಉಮೇದವಾರನೆಂದು ಆರಿಸಲ್ಪಟ್ಟಾಗ ಅವನ ತರಬೇತಿಯ ಅವಧಿಯಲ್ಲಿ ಮತ್ತು ಅವನ ಸ್ಥಳದಲ್ಲಿ ಪ್ರೊಬೇಶನರ (ಬದ್ಲಿ)ನೆಂದು ನಿಯಮಿಸಲ್ಪಟ್ಟ ಪ್ರತಿಯೊಬ್ಬ ಪ್ರೊಬೇಶನರನಿಗೆ ಅವನ ಪ್ರೊಬೇಶನದ ಅವಧಿಯಲ್ಲಿ ತಿಂಗಳಿಗೆ, ೧೦ ರೂಪಾಯಿ

ಇಲ್ಲವೆ ೧೫ ರೂಪಾಯಿ— ಗ್ರಾಮಪಂಚಾಯತಿಯು ಠರಾಯಿಸಬಹುದಾದಂಥ ರೀತಿಯಲ್ಲಿ— ಅವನಿಗೆ ಪಗಾರ ದೊರೆಯುವದು ಮತ್ತು ಆತನು ಇಂಥ ಪಂಚಾಯತಿಯ ಸೆಕ್ರೆಟರಿ ಎಂದು ಕಾಯಂ ಮಾಡಲ್ಪಟ್ಟ ಮೇಲೆ ೧೮-೧-೨೦ ಅಥವಾ ೧೬-೧-೨೬ ರೂಪಾಯಿಗಳ ಸ್ಕೇಲಿನಂತೆ— ಪ್ರಸಂಗಾನುಸಾರವಾಗಿ — ಪಗಾರ ದೊರೆಯುವದು.

೨೦ ಇಂಥ ಉಮೇದವಾರನು ಇಲ್ಲವೆ ಸೆಕ್ರೆಟರಿಯು, ತನ್ನ ಆಫೀಸಿನ ಕೆಲಸಕ್ಕಾಗಿ ತನ್ನ ಹದ್ದನ್ನು ಬಿಟ್ಟು ಹೊರಗೆ ಪ್ರವಾಸಮಾಡುವ ಪ್ರಸಂಗವು ಬಂದಲ್ಲಿ, ಆಗ ಅವನಿಗೆ ಕೆಳಗೆ ಕಾಣಿಸಿದ ದರದಂತೆ ದಿನದ ಭತ್ತೆ ಮತ್ತು ಪ್ರವಾಸದ ಭತ್ತೆ (ಅಲೌನ್ಸ)ಗಳು ದೊರೆಯುವವು ಅವು—

(೧) ಪ್ರವಾಸದ ಭತ್ತೆ . ಮುಂಬಯಿ ಸಿವ್ಹಿಲ್ ಸರ್ವ್ಹಿಸಿನ ರೂಲಿನ ಪ್ರಕಾರ ೩ನೇ ವರ್ಗದ ಸರಕಾರೀ ನೌಕರರಿಗೆ ದೊರೆಯುವ ಭತ್ತೆ

(೨) ದಿನದ ಭತ್ತೆ ... (ಅ) ಇಂಥ ಮನುಷ್ಯನ ಪಗಾರವು ೫೦ ರೂಪಾಯಿ ಇಲ್ಲವೆ ಅದಕೂ ಕಡಿಮೆ ಇದ್ದರೆ, ಮುಂಬಯಿ ಸಿವ್ಹಿಲ್ ಸರ್ವ್ಹೀಸಸ ರೂಲ್ಸಗಳ ಪ್ರಕಾರ ೩ನೇ ವರ್ಗದ ಸರಕಾರೀ ನೌಕರರಿಗೆ ದೊರೆಯುವ (೪) ನೇ ವಿಭಾಗದ ದರದಂತೆ.

(ಬ) ಇಂಥ ಮನುಷ್ಯನ ಪಗಾರವು ೫೦ ರೂಪಾಯಿಗಳಿಗಿಂತ ಹೆಚ್ಚಿಗೆ ಇದ್ದರೆ, ಮುಂಬಯಿ ಸಿವ್ಹಿಲ್ ಸರ್ವ್ಹೀಸಸ ರೂಲ್ಸಗಳ ಪ್ರಕಾರ ೩ನೇ ವರ್ಗದ ಸರಕಾರೀ ನೌಕರರಿಗೆ ಸಿಗುವ (೩ನೇ) ವಿಭಾಗದ ದರದಂತೆ

**ಸೂಚನೆ** — ಸೆಕ್ರೆಟರಿಯ ಪ್ರವಾಸಭತ್ತೆ ಮತ್ತು ದೈನಂದಿನ ಭತ್ತೆಗಳನ್ನು ಎಣಿಸುವಾಗ, ಅವನ ಪೂರ್ಣಪಗಾರ ಅಂದರೆ—(ಅವನ ಅರೆವೇಳೆ ಕೆಲಸದ ಪಗಾರ ಹಾಗೂ ಅವನ ಮೂಲ ನೌಕರಿಯ ಪಗಾರ)ಗಳನ್ನು ಲಕ್ಷ್ಯಕ್ಕೆ ತಕ್ಕೊಳ್ಳಬೇಕು.

## ನೌಕರಿಯ ಇತರ ಕರಾರುಗಳು

೨೧ ಪ್ರತಿಯೊಬ್ಬ ಸೆಕ್ರೆಟರಿಯು ಮೊದಲನೇ ವರ್ಗದ ಪಂಚಾಯತಿಯ ಸಂಬಂಧದಲ್ಲಿ ೩೦೦ ರೂಪಾಯಿಗಳ, ಮತ್ತು ಎರಡನೇ ವರ್ಗದ ಇಲ್ಲವೇ ಮೂರನೇ ವರ್ಗದ ಪಂಚಾಯತಿಯ ಸಂಬಂಧದಲ್ಲಿ ೨೦೦ ರೂಪಾಯಿಗಳ ಒಂದು ಜಾಮೀನ ಪತ್ರವನ್ನು ಬರೆದುಕೊಡಬೇಕು ಆ ಜಾಮೀನಪತ್ರವನ್ನು, ಡಿವೊಲ್ಯುಶನ್ ನಿಯಮಗಳ ೩೭ನೇ ನಿಯಮದ (ಈ) ರಕಮಿನ ಅನ್ವಯ ತಯಾರಿಸಲ್ಪಟ್ಟ, ಹಾಲಿಕಾಲಿನ ನಿಯಮಗಳಲ್ಲಿ ಸರಕಾರೀ ನೌಕರರಿಗಾಗಿ ಗೊತ್ತುಪಡಿಸಿದ ನಮೂನೆಯಲ್ಲಿ, ಪಂಚಾಯತಿಯ ಹೆಸರಿನಿಂದ ಬರೆದುಕೊಡಬೇಕು

೨೨. (೧) ಯಾವ ಸೆಕ್ರೆಟರಿಯು, ರಜೆಯ ನಿಯಮಗಳ ಅಧಿಕಾರದ ಮೇರೆಗೆ ಕಿರುಕಳ ರಜೆಯನ್ನು ಪಡೆಯಲು ತನ್ನ ಮೂಲ ನೌಕರಿಯಲ್ಲಿ ಅರ್ಹನಾಗುವನೋ ಅಂಥವನಿಗೆ ಯಾವದೇ ಕಿರುಕಳ ರಜೆಯ ಬಗ್ಗೆ ಇಲ್ಲಿ ಅಧಿಕಾರವಿರಲಾರದು.

ವಿವರಣೆ – ಯಾವನೊಬ್ಬ ಇಂಥ ಸೆಕ್ರೆಟರಿಯು ಪೂರ್ಣಾವಧಿ ನೌಕರನಂತೆ, ರಜೆಯ ನಿಯಮಗಳ ಮೇರೆಗೆ ಕಿರುಕಳ ರಜೆಯನ್ನು ಪಡೆದಿರುವನೋ ಅಂಥವನು, ತನ್ನ ಕಿರುಕಳ ರಜೆಯ ಅವಧಿಯಲ್ಲಿ ಗ್ರಾಮಪಂಚಾಯತಿಗೆ ಅಗಾವು ಸೂಚನೆಯನ್ನು ಕೊಟ್ಟು, ತನ ಕೆಲಸದಿಂದ ಗೈರಹಾಜರ ಉಳಿಯಬಾರದು

(೨) ಡಾಕ್ಟರ ಸರ್ಟಿಫಿಕೇಟನ್ನು ಪಡೆದು ಅರ್ಧಪಗಾರೀ ರಜೆಯ ಹೊರತಾಗಿ ಉಳಿದ ಯಾವದೇ ರಜೆಯು ಸೆಕ್ರೆಟರಿಗೆ ಸಿಗಲಾರದು.

(೩) ಮೇಲೆ (೧) ರಲ್ಲಿ ಹೇಳಿದಂಥ ರಜೆಯು, ಒಂದು ವರ್ಷ ನೌಕರಿ ಮಾಡಿದ ಮೇಲೆ ೧ ತಿಂಗಳಂತೆ ದೊರೆಯುವದು

(೪) ಮೇಲೆ ನಂ (೨) ರಲ್ಲಿ ಹೇಳಿದಂಥ ರಜೆಯನ್ನು, ಅತಿ ಹೆಚ್ಚೆಂದರೆ ಒಂದೇ ಕಾಲಕ್ಕೆ ಅವನು ಗಳಿಸಿದರೆ, ೪ ತಿಂಗಳಿಗಿಂತ ಹೆಚ್ಚಿಗೆ ಪಡೆಯಲಾರನು.

೨೩ ಸೆಕ್ರೆಟರಿಯು ತನ ವಯಸ್ಸಿನ ೫೫ನೇ ವರ್ಷದ ವಯಸ್ಸು ಆಗುವ ತಾರೀಖಿನ ದಿವಸ ಸೇವಾನಿವೃತ್ತನಾಗಬೇಕಾಗುವದು ಅವನು ಸೇವಾನಿವೃತ್ತನಾದ ನಂತರ, ಕಲೆಕ್ಟರನ ಪೂರ್ವಸಮ್ಮತಿ ಸಮ್ಮತಿಯನ್ನು ಪಡೆದು, ಬರೆದಿಡುವಂಥ ಸಾರ್ವಜನಿಕ ಕಾರಣಗಳಿಗಾಗಿ, ತನ್ನ ಪೂರ್ವದ ಸರ್ವೀಸಿನ ನೆಜವಾದ ಸ್ಥಳದಲ್ಲಿ ಉಳಿದಿದರೆ ಪುನಃ ನೌಕರಿಯಮೇಲೆ ಇಡಲ್ಪಡಬಹುದು ಪ್ರತಿಯೊಬ ಸೆಕ್ರೆಟರಿಯು ಸೇವಾನಿವೃತ್ತನಾಗುವ ವಯಸ್ಸನ್ನು ಸಮೀಪಿಸಿದಾಗ ಪುನಃ ನೌಕರಿಯ ಬೆಳೆಯಿಸಲ್ಪಟ್ಟ ಅವಧಿಯು ಮುಗಿಯುವ ಪೂರ್ವದಲ್ಲಿ ಅವನ ಪ್ರಕರಣವನು ಪರಿಶೀಲಿಸಬೇಕು ಮತ್ತು ಇಂಥ ಬೆಳೆಯಿಸಿ ದೊರೆಯುವಂಥ ಅವಧಿಯು ಒಂದು ಸಲಕ್ಕೆ ೧ ವರ್ಷಕಿಂತ ಹೆಚ್ಚಿಗೆ ಆಗಕೂಡದು ಮೊದಲನೇ ಬೆಳೆಯಿಸಿದ ಅವಧಿಯು ಸರ್ವಸಾಧಾರಣವಾಗಿ ಹಣಕಾಸಿನ ಚಾಲೂ ವರ್ಷದ ಕೊನೆಯ ವರೆಗೆ ಇರಬೇಕು ಗ್ರಾಮಪಂಚಾಯತಿಯು ಅವಧಿಯನ್ನು ಬೆಳೆಯಿಸಬೇಕೆಂದು ಗೊತ್ತುಮಾಡಿಕೊಂಡ ಪ್ರಸಂಗದಲ್ಲಿ ತನ್ನ ವರದಿ (ರಿಪೋರ್ಟು)ಗಳನ್ನು ಹೊಸ ಇಲ್ಲವೆ ಮುಂಜೂರಾಗಿ ಜಿಲ್ಲಾ ಲೋಕಲ್‌ಬೋರ್ಡುಗಳ ಮುಖಾಂತರ ಜಿಲ್ಲಾ ಕಲೆಕ್ಟರನಿಗೆ ಕನಿಷ್ಠಪಕ್ಷ ೨ ತಿಂಗಳು ಪೂರ್ವದಲ್ಲಿ ಮಾಡಬೇಕು.

೨೪ ಸೆಕ್ರೆಟರಿಗೆ ಗ್ರಾಮಪಂಚಾಯತಗಳಿಂದ ಯಾವದೇ ತರದ ಪೆನ್‌ಶನ್ ದೊರೆಯಲಾರದು.

೨೫. ಪಂಚಾಯತದ ಸೆಕ್ರೆಟರಿಯನ್ನು ಅವನ ಮತ್ತು ಅದೇ ಅಥವಾ ಅದಕ್ಕಿಂತ ಹೆಚ್ಚಿನ ದರ್ಜೆಯ ಎರಡನೇ ಪಂಚಾಯತಿಯ ಸಮ್ಮತಿಯಿಂದ ಆ ಎರಡನೇ ಪಂಚಾಯತಿಗೆ ವರ್ಗಾಯಿಸಬಹುದು.

೨೬. ಕಾಲಕಾಲಕ್ಕೆ ಜಾರಿಯಲ್ಲಿದ್ದ (ಅಮಲಿನಲ್ಲಿದ್ದ) ಕಾನೂನುಗಳ ಠರಾವುಗಳಿಗೆ ಬಾಧೆಬಾರದಂತೆ, ಸಾಕಷ್ಟು ಮತ್ತು ಯೋಗ್ಯ ಕಾರಣಗಳಿಗಾಗಿ ಪಂಚಾಯತವು ತನ್ನ ಸೆಕ್ರೆಟರಿಗೆ ಈ ಕೆಳಗಿನಂತೆ ಶಿಕ್ಷೆಗಳನ್ನು ವಿಧಿಸಬಹುದು.

(೧) ದೂಷಣೆ

(೨) ಪಗಾರದ ಬಡತಿಯನ್ನು ತಡೆಹಿಡಿಯುವದು.

(೩) ೧೯ನೇ ನಿಯಮದ ಅನ್ವಯ ಗೊತ್ತುಪಡಿಸಿದ ಟಾಯಿಂಸ್ಕೇಲಿನಲ್ಲಿ (ವೇಳೆಯ ಪ್ರಮಾಣದಲ್ಲಿ) ಕೆಳವರ್ಜೆಗೆ ಇಳಿಸುವದು.

(೪) ಅಲಕ್ಷ್ಯದಿಂದ ಇಲ್ಲವೆ ಆಜ್ಞೆಗಳ ಉಲ್ಲಂಘನೆಯಿಂದ ಪಂಚಾಯತಿಗೆ ಒದಗಿದ ಎಲ್ಲ ಹಾನಿಯನ್ನು ಇಲ್ಲವೆ ಅದರ ಕೆಲವೊಂದು ಅಂಶವನ್ನು ಅವನ ಪಗಾರದಿಂದ ವಸೂಲಮಾಡಿಕೊಳ್ಳುವದು.

(೫) ದಂಡ.

(೬) ಸಸ್ಪೆಂಡ

(೭) ಪುನಃ ನಿಯಮಿಸಲ್ಪಡಲಿಕ್ಕೆ ಅರ್ಹನಾಗದಂತೆ, ಕೆಲಸದಿಂದ ತೆಗೆದು ಹಾಕುವದು

(೮) ಪುನಃ ನಿಯಮಿಸಲ್ಪಡಲಿಕ್ಕೆ ಅನರ್ಹನಾಗುವಂತೆ ಕೆಲಸದಿಂದ ತೆಗೆದು ಹಾಕುವದು

ಆದರೆ ಗೊತ್ತುಪಡಿಸುವದೇನಂದರೆ, ಒಟ್ಟು ಪಂಚಾಯತದ ಸಭಾಸದರ ಬಹುಮತ್ತಕ್ಕೆ ಮತಗಳಿಲ್ಲದೆ ಮತ್ತು ಜಿಲ್ಲಾ ಕಲೆಕ್ಟರನ ಪೂರ್ವ ಸಮ್ಮತಿ ಇಲ್ಲದೆ ಸೆಕ್ರೆಟರಿಯನ್ನು ಕೆಲಸದಿಂದ ದೂರಮಾಡಬಾರದು ಅಥವಾ ಕಿತ್ತೊಗೆಯಬಾರದು

**ವಿವರಣೆ** — ಪ್ರೊಬೇಶನ್‌ದ ಮೇಲೆ ನಿಯಮಿಸಲ್ಪಟ್ಟ ಮನುಷ್ಯನನ್ನು ಅವನ ಪ್ರೊಬೇಶನ್‌ದ ಅವಧಿಯಲ್ಲಿ ಅಥವಾ ಆ ಅವಧಿಯ ಕೊನೆಗೆ ಕೆಲಸದಿಂದ ಬಿಡುಗಡೆ ಮಾಡುವದು, ಈ ನಿಯಮದ ಪ್ರಕಾರ 'ಕೆಲಸದಿಂದ ದೂರಮಾಡುವದು' ಎಂದಾಗುವದಿಲ್ಲ

೨೭. ಯಾವನೊಬ್ಬ ಸೆಕ್ರೆಟರಿಯನ್ನು —

(೧) ಅವನ ಮೇಲೆ ಕೆಳಗಿನವುಗಳಿಗಾಗಿ ಲೇಖಿ ತಕರಾರು (ಆರೋಪಗಳು) ಗಳನ್ನು ಕೊಡದೆ--

(ಅ) ಅವನ ವಿರುದ್ಧವಾಗಿ ಇದ್ದ ಆರೋಪ ಅಥವಾ ಆರೋಪಣೆಗಳ ಬಗ್ಗೆ,

(ಬ) ಪ್ರತಿಯೊಂದು ಆರೋಪದ ಬಗ್ಗೆ ಇದ್ದ ಕಾರಣಗಳ ಬಗ್ಗೆ,

(ಕ) ಯಾವ ಪ್ರಕರಣದ ಪರಿಸ್ಥಿತಿಗಳನ್ನು ವಿಚಾರ ಮಾಡಬೇಕೆಂದು ಸಮ್ಮತಿಸಲ್ಪಟ್ಟಿದೆಯೋ ಅಂಥ ಪರಿಸ್ಥಿತಿಗಳ ಬಗ್ಗೆ ಮತ್ತು

(೨) ಕೆಳಗಿನವುಗಳಿಗಾಗಿ ಅವನಿಗೆ ಆಸ್ಪದ ಕೊಡದ ವಿನಃ

(ಅ) ಅವನ ವಿರುದ್ಧ ಸಾಕ್ಷಿದಾರನನ್ನು ಉಲಟ ಸವಾಲ ಮಾಡಲು

(ಬ) ವ್ಯಕ್ತಿಶಃ ಅವನ ಹೇಳಿಕೆಯನ್ನು ಕೇಳಲು

ಅವನನ್ನು ಕೆಲಸದಿಂದ ದೂರ ಮಾಡಬಾರದು ಇಲ್ಲವೆ ತೆಗೆದು ಹಾಕಬಾರದು.

ಆದರೆ ಗೊತ್ತುಪಡಿಸುವದೇನಂದರೆ,—ಫೌಜದಾರೀ ಕೋರ್ಟಿನಲ್ಲಿ ಅವನ ಮೇಲಿನ ಆರೋಪವನ್ನು ಸಿದ್ಧಪಡಿಸಲು ಕಾರಣೀಭೂತವಾಗುವ ಕಾರಣಗಳ ಸಲುವಾಗಿ ಕ್ರಮ ತೆಗೆದುಕೊಳ್ಳುವದಿದ್ದ ಸಮಯದಲ್ಲಿ ಈ ನಿಯಮದ ಕಲಮುಗಳು ಅನ್ವಯಿಸುವದಿಲ್ಲ

೨೭. ಫೌಜದಾರೀ ಅಪರಾಧದ ಸಂಬಂಧದಲ್ಲಿ ಯಾವನ ಮೇಲೆ ಖಟ್ಲೆಯು ದಾಖಲ ಮಾಡಲ್ಪಟ್ಟಿದೆಯೋ ಅಂಥ ಸೆಕ್ರೆಟರಿಗೆ, ಯಾವ ಅಪರಾಧದ ಆರೋಪವನ್ನು ಅವನ ಮೇಲೆ ಇಡಲಾಗಿದೆಯೋ ಅಂಥ ಅಪರಾಧವನ್ನು ತಾನು ಪಂಚಾಯತಿಯ ನೌಕರನೆಂಬ ಸಂಬಂಧದಿಂದ ಮಾಡಿದನೆಂದು ಅಂಬೋಣವಿದ್ದರೆ, ಇಲ್ಲವೆ ಸದರಿ ಖಟ್ಲೆಯ ಮೂಲಕ ಇಂಥ ನೌಕರನೆಂದು ತನ್ನ ಕೆಲಸಗಳನ್ನು ಕೊನೆಗಾಣಿಸುವಲ್ಲಿ ತೊಂದರೆಯಾಗುವ ಸಂಭವವಿದ್ದರೆ ಇಲ್ಲವೆ ಸದರೀ ಅಪವಾದವು ನೈತಿಕ ಕ್ಷುದ್ರತೆಯನ್ನು ತೋರಿಸುವಂಥದು ಇದ್ದರೆ. ಪಂಚಾಯತಿಯು ಇಂಥ ಖಟ್ಲೆಯು ನಿರ್ಣಯವಾಗುವ ವರೆಗೆ ಅವನನ್ನು ಸಸ್ಪೆಂಡ ಇಡಬೇಕು.

೨೮ ಯಾವ ಸೆಕ್ರೆಟರಿಯು ೨೭ ಇಲ್ಲವೆ ೨೮ ನೇ ನಿಯಮದ ಪ್ರಕಾರ ಸಸ್ಪೆಂಡ ಮಾಡಲ್ಪಟ್ಟಿರುವನೋ ಆಗ, ಸಸ್ಪೆಂಡ ಮಾಡಲಾದ ಅವಧಿಯ ಪಗಾರವು ದೊರೆಯುವ ಹಕ್ಕು ಅವನಿಗೆ ಇರಲಾರದು.

ಆದರೆ ಜಿಲ್ಲಾ ಲೋಕಲ್ ಬೋರ್ಡು ತನ್ನ ನೌಕರರಿಗಾಗಿ ಮಾಡಿದ ನಿಯಮಗಳ ಪ್ರಕಾರ ಗೊತ್ತುಪಡಿಸಲಾದ ನಿಯಮಗಳ ಪ್ರಕಾರ ಇಲ್ಲವೆ ಇಂಥ ನಿಯಮಗಳು ಇರದಿದ್ದರೆ, ಕಲೆಕ್ಟರನ ಕಡೆಯಿಂದ ಗೊತ್ತುಪಡಿಸಲ್ಪಡಬಹುದಾದಂಥ ದರದಿಂದ, ಮಾಸಿಕ ನಿರ್ವಹಣೆಯ ಭತ್ತೆ, ಕೊಡಲ್ಪಡಬೇಕು

೩೦. ಸೆಕ್ರೆಟರಿಯು ೨೮ ನೇ ನಿಯಮದ ಪ್ರಕಾರ ಸಸ್ಪೆಂಡ ಮಾಡಲ್ಪಟ್ಟಿದ್ದು ಇಂಥ ಖಟ್ಲೆಯಲ್ಲಿ ನಿರ್ದೋಷಿಯೆಂದು ತೀರ್ಮಾನಿಸಲ್ಪಟ್ಟರೆ, ಅವನನ್ನು ಅವನ ಜಾಗೆಯ ಮೇಲೆ ತಿರುಗಿ ಹಾಜರಪಡಿಸಿಕೊಳ್ಳಬೇಕು. ಮತ್ತು ಅವನಿಗೆ ಮೊದಲು

ಕೊಡಲ್ಪಟ್ಟ ನಿರ್ವಹಣೆಯ ಭತ್ತೆಯ ರಕಮನ್ನು ಕಳೆದು, ಸಸ್ಪೆಂಡ ಮಾಡಲಾದ ಅವಧಿಯ ಎಲ್ಲ ಪಗಾರವನ್ನು ಕೊಡಬೇಕು.

## ಗ್ರಾಮಪಂಚಾಯತಿಯ ಸೆಕ್ರೆಟರಿಗಳ ಪರೀಕ್ಷೆಯ ನಿಯಮಗಳು

೧. ಗ್ರಾಮಪಂಚಾಯತಿಯ ಸೆಕ್ರೆಟರಿಯ ಖಾತೆಯ (ಡಿಪಾರ್ಟಮೆಂಟ್) ಪರೀಕ್ಷೆಯ ತಾರೀಖು ಪ್ರತಿ ವರ್ಷ ಸಪ್ಟೆಂಬರದ ೩ನೇ ವಾರದಲ್ಲಿ ಸರ್ವಸಾಧಾರಣ ವಾಗಿ ಬರುವದು ಪರೀಕ್ಷೆಗೆ ಕೂಡ್ರಬಯಸುವ ಸೆಕ್ರೆಟರಿಯ ಅರ್ಜಿಗಳನ್ನು ಸ್ವೀಕರಿಸಬೇಕು ಮತ್ತು ಅವುಗಳನ್ನು ಪ್ರತಿವರ್ಷ ಅಗಸ್ಟ ತಿಂಗಳ ೨೧ನೇ ತಾರೀಖಿನ ಒಳಗಾಗಿ ಯೋಗ್ಯ ಶಿಫಾರಸಿನೊಂದಿಗೆ ಪ್ರಾಂತ ಆಫೀಸರರ ಮುಖಾಂತರ ಕಲೆಕ್ಟರರ ಕಡೆಗೆ ಕಳಿಸಬೇಕು.

೨ ಕೆಳಗೆ ಕಾಣಿಸಿದಂತೆ ಪರೀಕ್ಷೆಯಲ್ಲಿ ೨ ಲೇಖೀ ಪೇಪರ ಹಾಗೂ ಬಾಯಿಪರೀಕ್ಷೆಗಳು ಇರುವವು. ಮೊದಲನೆಯ ಪೇಪರವು ಮುಂದೆ ಕಾಣಿಸಿದ ಕಾಯದೆಗಳ ಸಲುವಾಗಿ ಇರುವದು

**ಗ್ರಾಮಪಂಚಾಯತ ಆಕ್ಟ, ದನಗಳ ಅತಿಕ್ರಮಣಗಳ ವಿಷಯದ ಆಕ್ಟ, ಮುಂಬಯಿಯ ಗ್ರಾಮ ಪೋಲೀಸ ಆಕ್ಟ, ಪಿನಲ್‌ಕೋಡಿನ ಕಲಮುಗಳು.** ೨೧, ೨೩, ೨೪, ೨೫ ೨೯, ೩೩, ೩೬, ೩೮, ೩೯, ೪೦, ೪೨, ೪೪, ೫೧, ೫೨, ೨೬೮, ೨೬೯, ೨೭೭, ೨೮೩, ೩೧೯ ರಿಂದ ೩೨೩, ೩೪೯ ರಿಂದ ೩೫೨, ೩೫೮, ೩೭೮, ೩೭೯, ೪೨೫, ೪೨೬, ೪೪೧, ೪೪೭, ೪೪೮, ೪೬೧ ಮತ್ತು ೫೦೪ **ಹಾಗೂ ಫೌಜದಾರೀ ಕೆಲಸ ನಡೆಯಿಸುವ ಕಾಯದೆ (ಕ್ರಿಮಿನಲ್ ಪ್ರೊಸೀಜರ ಕೋಡ)** 'ಇದರ **ಬಾಬು ೬ ಕಲಮುಗಳು** ೬೮–೭೪, **ಬಾಬುಗಳು** ೨೦, ೪೨, ೪೩, **ಕಲಮುಗಳು** ೫೧೬–ಅ, ೫೧೭, ೫೨೦, ೫೨೪, ೫೨೫,

**ಸನ್ ೧೮೯೦ ಜನಾವರ (ದನ)ಗಳನ್ನು ಕಾಡಿಸುವದಕ್ಕೆ ಮನಾಯಿ ಮಾಡುವ ಬಗ್ಗೆಯ ಆಕ್ಟ ಕಲಮುಗಳು.** ೪, ೫, ೫–ಅ, ೬, ೬–ಕ, ಮತ್ತು ೭; **ಜಿಲ್ಹಾ ಪೋಲೀಸ ಆಕ್ಟಿನ ಕಲಮು** ೬೧ (೧) (ಪ) **ಡಿಸ್ಟ್ರಿಕ್ಟ ವ್ಯಾಕ್ಸಿನೇಶನ್ ಆಕ್ಟದ ಕಲಮು** ೨೨ ರಿಂದ ೨೫. **ಮುಂಬಯಿ ಪ್ರಾಥಮಿಕ ಶಿಕ್ಷಣದ ಆಕ್ಟದ ಕಲಮುಗಳು** ೨೧, ೨೨ ಮತ್ತು **ಮುಂಬಯಿಯ** ಬೆರಸುವದನ್ನು **ಮನಾಯಿ**

**ಮಾಡುವ ಬಾಬತ್ತಿನ ಆಕ್ಟಿನ ಕಲಮು** ೪-ಅ ಈ ಪೇಪರಿನ ಪ್ರಶ್ನೆಗಳ ಉತ್ತರವನ್ನು ಪುಸ್ತಕದ ಸಹಾಯವನ್ನು ಪಡೆಯದೆ ಬರೆಯಬೇಕು. (ವೇಳೆ ೩ ತಾಸು, ಗುಣಗಳು ೧೦೦ )

**ಎರಡನೆಯ ಪೇಪರವು ಕೆಳಗಿನ ಕಾಯದೆಗಳ ಸಂಬಂಧವಾಗಿ ಇರುವದು**

ಗ್ರಾಮಪಂಚಾಯತಿಯ ಕಾನೂನು ಮತ್ತು ಪೋಟಕಾಯದೆ, ಗ್ರಾಮಪಂಚಾಯತಿಯ ಪುಸ್ತಕ ೨ ನೇ ಭಾಗ ಮತ್ತು ಸನ್ ೧೯೨೩ ರ ಮುಂಬಯಿಯ ಲೋಕಲ್ ಬೋರ್ಡ ಆಕ್ಟ. ಈ ಪೇಪರಿನಲ್ಲಿ ಮುಂಬಯಿಯ ಗ್ರಾಮದ ಪೋಲೀಸ ಆಕ್ಟದಲ್ಲಿಯ ಒಂದು ಟಿಪ್ಪಕೇಸಿನ ಸಮಾವೇಶ ಮಾಡಲಾಗುವದು ಈ ಪೇಪರಿನ ಪ್ರಶ್ನೆಯ ಉತ್ತರಗಳನ್ನು ಪುಸ್ತಕದ ಸಹಾಯದಿಂದ ಬರೆಯಬಹುದು ( ವೇಳೆ ೩ ತಾಸು. ಗುಣ ೧೦೦ )

**ಮೂರನೆಯ ಪೇಪರವು—** ಮುಂದೆ ಕಾಣಿಸಿದ ಸಂಗತಿಗಳ ಸಲುವಾಗಿ ಬಾಯಿಂದ ಪ್ರಶ್ನೆಗಳನ್ನು ಕೇಳಲಾಗುವದು ೧ ಕಚೇರಿಯ ಕೆಲಸಗಳು. ೨. ಗ್ರಾಮಪಂಚಾಯತಿಯ ಕರ ಮತ್ತು ಲೆಕ್ಕ ೩. ಪಂಚಾಯತಗಳ ಸಂಬಂಧದಿಂದ ಲೋಕಲ್‌ಬೋರ್ಡಿನ ಕೂಡ ಪತ್ರವ್ಯವಹಾರ. ೪ ಸರ್ವಸಾಧಾರಣ ಗ್ರಾಮಪಂಚಾಯತಿಯ ಬಾಬುಗಳು (ಗುಣಗಳು ೧೦೦ )

**ಟೀಪು**· ಈ ಪರೀಕ್ಷೆಯಲ್ಲಿ ಗ್ರಾಮಪಂಚಾಯತಿಯ ಚಾಲೂ ಕಾರಭಾರದಲ್ಲಿ ಉದ್ಭವಿಸಬಹುದಾದ ವ್ಯಾವಹಾರಿಕ ಸ್ವರೂಪದ ಪ್ರಶ್ನೆಗಳನ್ನು ಕೇಳಲಾಗುವದು ಪರೀಕ್ಷೆಯಲ್ಲಿ ಉತ್ತೀರ್ಣರಾಗಲು ಪ್ರತಿಯೊಂದು ಪೇಪರಿನಲ್ಲಿ ೩೩ ಮತ್ತು ಒಟ್ಟು ಗುಣಗಳ ಪೈಕಿ ೧೦೦ ಕ್ಕೆ ೪೦ ರಂತೆ ಗುಣಗಳನ್ನು ದೊರಕಿಸಬೇಕು

೩. ಕಲೆಕ್ಟರನು ಪರೀಕ್ಷೆಯ ಪರಿಣಾಮವನ್ನು ಸರಕಾರೀ ಗ್ಯಾಝೀಟಿನಲ್ಲಿ ಬೇಗನೇ ಪ್ರಸಿದ್ಧಿಸುವನು.

## ೩೪. ನೌಕರರ ಯಾದಿಯು

**೯೪ ನೇ ಕಲಮಿನ ಠರಾವುಗಳಿಗೊಳಪಟ್ಟು, ಈ ಆಕ್ಟಿನ ಮೇಲಿಂದ ಅಥವಾ ಈ ಆಕ್ಟಿನನ್ವಯ ಪಂಚಾಯತದ ಕಡೆಗೆ ನೇಮಿಸಿಕೊಟ್ಟ ಕೆಲಸಗಳನ್ನು ಕೊನೆಗಾಣಿಸುವ ಬಗ್ಗೆ ಜರೂರಿಬ್ಬ ತನ್ನ ನೌಕರರ ಸಂಖ್ಯೆಯನ್ನೂ ಅವರ ಸಂಬಳಗಳನ್ನೂ ಠರಾಯಿಸಿ, ಅವುಗಳ ಒಂದು ಯಾದಿಯನ್ನು, ಪಂಚಾಯತವು ಜಿಲ್ಹಾ ಲೋಕಲ ಬೋರ್ಡಿನ ಕಡೆಗೆ, ಅದರ ಮಾಹಿತಿಗಾಗಿ ಕಳುಹಿಸಬೇಕು.**

## ೩೫. ನೌಕರರ ನೇಮಣೂಕ

(೧) ಪಂಚಾಯತದ ನೌಕರರನ್ನು ಸರಪಂಚನು ನೇಮಿಸಿ, ತನ್ನ ತಾಬೆಯಲ್ಲಿದ್ದ ಗ್ರಾಮದ ಫಂಡಿನೊಳಗಿಂದ ಅವರ ಸಂಬಳಗಳನ್ನು ಕೊಡಬೇಕು. ಇದಲ್ಲದೆ, ಅವಸರದ ಪ್ರಸಂಗಗಳಲ್ಲಿ ಅವನು ತನಗೆ ಜರೂರು ತೋರಿದಂತೆ ಹಂಗಾಮಿ ನೌಕರರನ್ನಿಡಬಹುದು. ಸರಪಂಚನಿಗೆ, ತಾನು ನೇಮಿಸಿದ ಯಾವನೇ ನೌಕರನಿಗೆ ಆಗಾಗ್ಗೆ ಲೇಖೀ ಹುಕುಮಿನಿಂದ ದಂಡ ಮಾಡುವ, ಅವನನ್ನು ಸಸ್ಪೆಂಡ ಮಾಡುವ ಅಥವಾ ಬಡತರ್ಫ ಮಾಡುವ ಅಧಿಕಾರವದೆ.

(೨) (೧) ನೇ ಪೋಟ-ಕಲಮಿನನ್ವಯ ಮಾಡಿದ ಹುಕುಮಿನ ಮೇಲೆ ಪಂಚಾಯತದ ಕಡೆಗೆ ಅಪೀಲು ನಡೆಯುವದು.

## ೩೬. ಬಜೇಟು ಮತ್ತು ಲೆಖ್ಖಗಳು

ಪಂಚಾಯತವು ಗ್ರಾಮದ ರಹಿವಾಸಿಗಳ ಸಭೆಯನ್ನು ಕರೆಯಬೇಕು. (೧) ಪಂಚಾಯತವು, ೧ [ ಪ್ರಾಂತಿಕ ಸರಕಾರದವರು ] ೧ ಠರಾಯಿಸಬಹುದಾದ ತಾರೀಖಿಗೆ ಅಥವಾ ತಾರೀಖಿನ ಮುಂಚೆ ಮತ್ತು ಅಂಥ ನಮೂನೆಯ ಪ್ರಕಾರ—

(ಅ) ಮುಂದಿನ ವರ್ಷದ ಬಗ್ಗೆ ಪಂಚಾಯತದ ಪ್ರಾರಂಭದ ಶಿಲುಕು ಮತ್ತು ಅಂದಾಜು ಮಾಡಿದ ಉತ್ಪನ್ನ ;

(ಬ) ನೌಕರ ವರ್ಗದ ಸಲುವಾಗಿ ಮತ್ತು ೨೬ ನೇ ಕಲಮಿನ (೧)ನೇ ಪೋಟ-ಕಲಮಿನಲ್ಲಿ ನಿರ್ದಿಷ್ಟ ಮಾಡಿದ ಕೆಲಸಗಳನ್ನು ನೆರವೇರಿಸುವದಕ್ಕಾಗಿ ಯೋಚಿಸಿದ ಖರ್ಚು ;

(ಕ) ೨೬ ಅ ಕಲಮಿನನ್ವಯ ಮತ್ತು ೨೮ ನೆಯ ಕಲಮಿನ (೧)ನೆಯ ಪೋಟ-ಕಲಮಿನನ್ವಯ ಯೋಚಿಸಿದ ವೆಚ್ಚ.

ಇವುಗಳ ಒಂದು ಪತ್ರಕವನ್ನು ಪ್ರತಿವರ್ಷ ತಯಾರಿಸಿ ಜಿಲ್ಲಾ ಲೋಕಲ ಬೋರ್ಡಿಗೆ ಸಾದರ ಮಾಡಬೇಕು

(೨) ಇಂಥ ಪತ್ರಕವು ಮುಟ್ಟಿದ ತಾರೀಖಿನಿಂದ ಮೂರು ತಿಂಗಳೊಳಗೆ ಜಿಲ್ಲಾ ಲೋಕಲ ಬೋರ್ಡು ಅದನ್ನು ಪಸಂತಮಾಡಬೇಕು, ಅಥವಾ ೨೬ ನೇ ಮತ್ತು ೨೮ ನೇ ಕಲಮುಗಳಲ್ಲಿ ನಿರ್ದಿಷ್ಟ ಮಾಡಿದ ಕೆಲಸಗಳ ಪೈಕಿ ಯಾವದಾದರೊಂದು ಕೆಲಸದ ಯೋಚಿಸಿದ ಖರ್ಚನ್ನು ಹೆಚ್ಚು ಅಥವಾ ಕಡಿಮೆ ಮಾಡಬೇಕೆಂದು ಫರ್ಮಾಯಿಸಬೇಕು ;

ಆದರೆ ಗೊತ್ತುಪಡಿಸುವದೇನಂದರೆ, ಮುಂದಿನ ವರ್ಷದ ಬಗ್ಗೆ ಅಂದಾಜು ಮಾಡಿದ ಗ್ರಾಮದ ಫಂಡಿನ ಉತ್ಪನ್ನಕ್ಕಿಂತ ಮತ್ತು ಪ್ರಾರಂಭದ ಶಿಲುಕಿಗಿಂತ ಯೋಚಿಸಿದ ಒಟ್ಟು ಖರ್ಚು ಹೆಚ್ಚಾಗಬೇಕೆಂದು ಫರ್ಮಾಯಿಸುವ ಅಧಿಕಾರವು ಜಿಲ್ಹಾ ಲೋಕಲ ಬೋರ್ಡಿಗೆ ಇರತಕ್ಕದ್ದಲ್ಲ.

(೩) ೩೩ ನೇ ಕಲಮಿನನ್ವಯ ನೇಮಣೂಕು ಮಾಡಲ್ಪಟ್ಟ ಸೆಕ್ರೆಟರಿಯು ಪಂಚಾಯತದ ಲೆಕ್ಕಪತ್ರಗಳನ್ನು ಠರಾಯಿಸಲ್ಪಡಬಹುದಾದ ನಮೂನೆಯಲ್ಲಿ ಇಡಬೇಕು. ಅವನು ಪಂಚಾಯತದ ವಾರ್ಷಿಕ ವರದಿಯನ್ನು ತಯಾರಿಸಬೇಕು ಮತ್ತು ಲೆಕ್ಕಗಳನ್ನು ಹಾಗೂ ವರದಿಯನ್ನು ಪಂಚಾಯತದ ಮುಂದೆ ಮಂಜೂರಿಗಾಗಿಡಬೇಕು. ಮಂಜೂರಾದ ವಾರ್ಷಿಕ ವರದಿಯ ಸಹಿತವಾಗಿ, ಇಂಥ ಲೆಕ್ಕಗಳ ವಾರ್ಷಿಕ ಪತ್ರಕಗಳು, ಠರಾಯಿಸಲ್ಪಡಬಹುದಾದ ತಾರೀಖಿನ ದಿವಸ ಅಥವಾ ಅದಕ್ಕಿಂತ ಮುಂಚೆ ಹಾಗೂ ಠರಾಯಿಸಲ್ಪಡಬಹುದಾದ ನಮೂನೆಯಲ್ಲಿ ತಯಾರಿಸಲ್ಪಟ್ಟು ಜಿಲ್ಹಾ ಲೋಕಲ ಬೋರ್ಡಿಗೆ ಕಳುಹಿಸಲ್ಪಡಬೇಕು.

(೪) ಪಂಚಾಯತವು ಗ್ರಾಮದ ಯಾವತ್ತು ಪ್ರಾಯಸ್ಥ ರಹಿವಾಸಿಗಳ ಸಭೆಯನ್ನು, ಠರಾಯಿಸಿದ ರೀತಿಯಿಂದ ಮತ್ತು ವೇಳೆಯಲ್ಲಿ ಕರೆಯಬೇಕು. ಮತ್ತು ಹಿಂದಿನ ವರ್ಷದ ಲೆಕ್ಕದ ಪತ್ರಕಗಳನ್ನು, ಹಿಂದಿನ ವರ್ಷದ ಕಾರಭಾರವಿಷಯಕ ರಿಪೋರ್ಟನ್ನು ಮತ್ತು ಮುಂದಿನ ವರ್ಷದ ಬಗ್ಗೆ ಯೋಚಿಸಿದ ಕಾರ್ಯಕ್ರಮವನ್ನು ಇಂಥ ಸಭೆಯ ಮುಂದೆ ಓದಿ ವಿವರಿಸಿ ಹೇಳಬೇಕು.

ಪ್ರತಿಯೊಂದು ಗ್ರಾಮಪಂಚಾಯತಿಯು ಮುಂದಿನ ವರುಷದ ಅಂದಾಜ (ಮುಂಗಡ) ಪತ್ರಿಕೆಯನ್ನು ಪೋಟಕಲಮು (೧) ರಂತೆ ಸಿದ್ಧಗೊಳಿಸಲಿಕ್ಕೆಬೇಕು, ಮತ್ತು ಅದನ್ನು ಜಿಲ್ಹಾ ಲೋಕಲಬೋರ್ಡಿನ ಕಡೆಗೆ ಕಳಿಸಲಿಕ್ಕೆಬೇಕು. ಈ ಅಂದಾಜ ಪತ್ರಿಕೆಯು ಠರಾಯಿಸಿದ ನಮೂನೆಯಂತೆ ಮತ್ತು ಠರಾಯಿಸಿದ ಅವಧಿಯಲ್ಲಿ ಆಗಲಿಕ್ಕೆಬೇಕು.

ಸೆಕ್ರೆಟರಿಯು ಪೋಟ-ಕಲಮು (೩) ರರಂತೆ ಪಂಚಾಯತಿಯ ಲೆಕ್ಕ ಠರಾಯಿಸಿದ ನಮೂನೆಯಂತೆ ಇಡಲಿಕ್ಕೆಬೇಕು; ಹಾಗೂ ಗೊತ್ತುಪಡಿಸಿದ ಅವಧಿಯಲ್ಲಿ ಜಿಲ್ಹಾ ಲೋಕಲ ಬೋರ್ಡಿಗೆ ಕಳಿಸಲಿಕ್ಕೆಬೇಕು.

## ಈ ಸಂಬಂಧದ ಸರಕಾರಿ ನಿಯಮ

[ ಜನರಲ್ ಡಿಪಾರ್ಟಮೆಂಟ ]

[ ನಂಬರ ಎಸ್. ೧೭೪/೬ ತಾ. ೨-೧-೧೯೩೫ ]

ಪಂಚಾಯತಿಯ ಕಾಯದೆಯಲ್ಲಿ ೧೯೩೯—೪೦ ರ ಸುಧಾರಣೆ ಆಗಿದ್ದರೂ ಬಜೇಟ ಹಾಗೂ ಅಕೌಂಟ್ಸ (ಅಂದಾಜ ಪತ್ರಿಕೆ ಮತ್ತು ಲೆಕ್ಕ) ಈ ವಿಷಯಗಳ ಮೇಲೆ ಎಪ್ರಿಲ

೧೯೪೧ ಕೊನೆಯ ವರೆಗಂತೂ ಹೊಸ ನಿಯಮಗಳೂ ಆಗಿಲ್ಲ---ಆಗುವ ಕಾರಣವೂ ಇಲ್ಲ. ಯಾಕಂದರೆ ಅಂದಾಜ ಪತ್ರಿಕೆ ಮತ್ತು ಲೆಕ್ಕ ಈ ವಿಷಯವಲ್ಲಿ ಕಾಯಿದೆಯೊಳಗೆ ಯಾವ ಸುಧಾರಣೆಗಳೂ ಆಗಿರುವದಿಲ್ಲ.

ಸನ್ ೧೯೩೩ ನೇ ಇಸವಿಯ ಮುಂಬಯಿಯ ಗ್ರಾಮಪಂಚಾಯತಗಳ (ಸನ್ ೧೯೩೩ ನೇ ಇಸವಿಯ ಮುಂಬಯಿಯ ೬ನೇ) ಆಕ್ಟಿನ ೧೦೮ನೇ ಕಲಮಿನ (೧)ನೇ ಪೋಟ ಕಲಮಿನ (ಫ) ರಕಮಿನಿಂದ ಕೊಡಲ್ಪಟ್ಟ ಅಧಿಕಾರಗಳನ್ನು ನಡಿಸಿ, ಮುಂಬಯಿ ಸರಕಾರದವರು ಈ ಕೆಳಗಿನ ಕಾನೂನುಗಳನ್ನು ಮಾಡಿದ್ದಾರೆ ಅಂದರೆ —

೧ ಈ ಕಾನೂನುಗಳಿಗೆ ಸನ್ ೧೯೩೪ನೇ ಇಸವಿಯ ಗ್ರಾಮಪಂಚಾಯತಗಳ ಬಜೆಟಿನ ಮತ್ತು ಲೆಖ್ಖಗಳ ಕಾನೂನುಗಳೆಂದು ಕರೆಯಬೇಕು.

೨ ಈ ಕಾನೂನುಗಳಲ್ಲಿ ವಿಷಯಕ್ಕೆ ಅಥವಾ ಸಂದರ್ಭಕ್ಕೆ ಯಾವದೇ ಬಾಧೆ ಬಾರದಿದ್ದರೆ –

(೧) "ಆಕ್ಟು" ಎಂದರೆ, ಸನ್ ೧೯೩೩ ನೇ ಇಸವಿಯ ಮುಂಬಯಿಯ ಗ್ರಾಮಪಂಚಾಯತಗಳ ಆಕ್ಟು

(೨) "ಸರಕಾರೀ ವರ್ಷ" ಎಂದರೆ, ಎಪ್ರಿಲ್ ತಿಂಗಳ ಮೊದಲನೆಯ ತಾರೀಖಿನ ದಿನ ಪ್ರಾರಂಭವಾಗುವ ವರ್ಷ

(೩) ನಮೂನೆ' ಎಂದರೆ, ಈ ಕಾನೂನುಗಳಿಗೆ ಜೋಡಿಸಲ್ಪಟ್ಟ ನಮೂನೆ

(೪) 'ಕಲಮು'' ಎಂದರೆ, ಸದರಿ ಆಕ್ಟಿನ ಕಲಮು

(೫) 'ಗ್ರಾಮದ ಚಾವಡಿ' ಎಂಬ ಸಂಜ್ಞೆಯಲ್ಲಿ. ಸನ್ ೧೮೭೯ನೆಯ ಇಸವಿಯ ಮುಂಬಯಿಯ ಭೂಮಿಯ ಮಹಸೂಲಿನ ಕಾಯಿದೆಯನ್ವಯ ಚಾವಡಿಯೆಂದು ತಿಳಿಯಲ್ಪಡುವ ಸ್ಥಳವು ಸೇರುತ್ತದೆ

(೬) ಈ ಕಾನೂನುಗಳಲ್ಲಿ ವ್ಯಾಖ್ಯಾಯಿಸಲ್ಪಡದಿದ್ದು ಆಕ್ಟಿನಲ್ಲಿ ವ್ಯಾಖ್ಯಾಯಿಸಲ್ಪಟ್ಟ ಶಬ್ದ ಮತ್ತು ಸಂಜ್ಞೆಗಳಿಗೆ ಸದರಿ ಆಕ್ಟಿನಲ್ಲಿರುವ ಅರ್ಥವೇ ಇರುವದು

೩ ೩೬ನೇ ಕಲಮಿನ (೧) ನೇ ಪೋಟ-ಕಲಮಿನ ಪ್ರಕಾರ ಪ್ರತಿ ವರ್ಷದಲ್ಲಿ **ಅಕ್ಟೋಬರ ೧೦ನೇ ತಾರೀಖಿನೊಳಗೆ** ಅಥವಾ ಆ ದಿವಸ ಪಂಚಾಯತವು ಅಂದಾಜುಪತ್ರಿಕೆಯನ್ನು ಸಾದರಮಾಡತಕ್ಕದ್ದು ಮತ್ತು ಅದು ನಮೂನೆ ೧ ರಲ್ಲಿ ಇರತಕ್ಕದ್ದು

೩ (ಅ) ಅಂದಾಜುಪತ್ರಿಕೆಯಿಂದ ಆಗುವ ಹೆಚ್ಚು ಕಡಿಮೆಯನ್ನು ನಮೂನೆ ೨೩ ರಂತೆ ಫೇರಫಾರ ಪತ್ರಕ (ಹೆಚ್ಚು ಕಡಿಮೆ ಆದ ಬಗ್ಗೆಯ ಪತ್ರಕ) ವನ್ನು ಜಿಲ್ಲಾ ಲೋಕಲ್‌ಬೋರ್ಡಿಗೆ ಕಳಿಸಬೇಕು

೪ ಪಂಚಾಯತವು ೪ ರಿಂದ ೨೨ ರ ವರೆಗಿನ ನಮೂನೆಗಳಲ್ಲಿ ತನ್ನ ಲೆಖ್ಖಗಳನ್ನು ಇಡತಕ್ಕದ್ದು, ಮತ್ತು ಜಿಲ್ಲಾ ಲೋಕಲ್‌ಬೋರ್ಡಿಗೆ ಪ್ರತಿ ವರ್ಷ ಜೂನ ತಿಂಗಳ ೧ನೇ ತಾರೀಖಿನೊಳಗೆ ಅಥವಾ ಆ ದಿವಸ ೨ನೇ ಮತ್ತು ೩ನೇ ನಮೂನೆಗಳಲ್ಲಿ ಉತ್ಪನ್ನದ ಮತ್ತು ಖರ್ಚಿನ ಪತ್ರಕಗಳನ್ನು ಸಾದರಮಾಡತಕ್ಕದ್ದು.

೫ ಜಿಲ್ಲಾ ಲೋಕಲ್‌ಬೋರ್ಡಿನ ಅಭಿಪ್ರಾಯದ ಮೇರೆಗೆ ಯಾವದೇ ಪಂಚಾಯತದ ಸ್ಥಾನಿಕ ಪರಿಸ್ಥಿತಿಗಳ ಕಡೆಗೆ ಲಕ್ಷ್ಯಗೊಟ್ಟು ೪ರಿಂದ ೨೨ ರ ವರೆಗಿನ ನಮೂನೆಗಳ ಪೈಕಿ ಯಾವದೊಂದು ನಮೂನೆಯಲ್ಲಿ ಪಂಚಾಯತವು ಲೆಖ್ಖಗಳನ್ನು ಇಡಬೇಕೆಂದು ಫರ್ಮಾಯಿಸುವದು ಅವಶ್ಯವಿಲ್ಲದಿದ್ದರೆ, ಜಿಲ್ಲಾ ಲೋಕಲ್ ಬೋರ್ಡು, ಕಲೆಕ್ಟರನ ಅನುಮತಿಯನ್ನು ಮುಂಚಿತವಾಗಿ ತೆಗೆದುಕೊಂಡು, ೪ನೇ ಕಾನೂನಿನಲ್ಲಿ ಏನೇ ಇದ್ದಾಗ್ಯೂ, ಅಂಥ ಪಂಚಾಯತಕ್ಕೆ ಸದರಿ ನಮೂನೆಗಳ ಪೈಕಿ ಯಾವದಾದರೂ ನಮೂನೆಯಲ್ಲಿ ಲೆಖ್ಖಗಳನ್ನು ಇಡುವದರಿಂದ ಮಾಫು ಮಾಡಬಹುದು.

೬. (೧) ಸರಕಾರೀ ವರ್ಷವು ಮುಗಿದ ನಂತರ ಎರಡು ತಿಂಗಳೊಳಗೆ ಗ್ರಾಮದ ಚಾವಡಿಯಲ್ಲಿ ಗ್ರಾಮದ ಪ್ರಾಯಸ್ಥ ನಿವಾಸಿಗಳ ಸಭೆಯು ೩೬ನೆ ಕಲಮಿನ (೪) ನೇ ಪೋಟ-ಕಲಮಿನನ್ವಯ ನೆರೆಯಿಸಲ್ಪಡಬೇಕು ಮತ್ತು ಸದರಿ ಗ್ರಾಮದಲ್ಲಿ ಚಾವಡಿಯು ಇಲ್ಲದಿದ್ದರೆ, ಸರಪಂಚನಿಂದ ನಿಶ್ಚಯಿಸಲಟ್ಟ ತಾರೀಖಿನ ದಿವಸ. ಸರಪಂಚನ ಅಭಿಪ್ರಾಯದ ಮೇರೆಗೆ ಗ್ರಾಮಸ್ಥರಿಗೆ ಅನುಕೂಲವಾದ ಗ್ರಾಮದೊಳಗಿನ ಇತರ ಯಾವದೇ ಸ್ಥಳದಲ್ಲಿ ನೆರೆಯಿಸಲ್ಪಡಬೇಕು

(೨) ಸಭೆಯ ತಾರೀಖಿನ ಮೂರು ಪೂರ್ಣ ದಿವಸಗಳ ಮೊದಲು, ಸಭೆ ಗೂಡುವ ವೇಳೆಯನ್ನು ಮತ್ತು ಸ್ಥಳವನ್ನು ಮತ್ತು ಅಲ್ಲಿ ಜರಗುವ ಕಾರ್ಯಕ್ರಮವನ್ನು ನಮೂದಿಸಿದ ಲೇಖೀ ನೋಟೀಸು ಸಭೆಯ ಸ್ಥಳದಲ್ಲಿ ಹಚ್ಚಲ್ಪಡತಕ್ಕದ್ದು ಮತ್ತು ಅದನ್ನು ಗ್ರಾಮದಲ್ಲಿ ಡಂಗುರಸಾರಿಸಿಯೂ ತಿಳಿಸತಕ್ಕದ್ದು

(೩) ಸರಪಂಚನು ಮತ್ತು ಸರಪಂಚನು ಹಾಜರು ಇಲ್ಲದಿದ್ದಲ್ಲಿ, ಡೆಪ್ಯುಟಿ ಸರಪಂಚನು ಸಭೆಯ ಅಧ್ಯಕ್ಷನಾಗುವನು ಸರಪಂಚನು ಮತ್ತು ಡೆಪ್ಯುಟಿ ಸರಪಂಚನು ಇಬ್ಬರೂ ಗೈರಹಾಜರಿದ್ದಲ್ಲಿ, ಹಾಜರಿದ್ದ ಸಭಾಸದರು ತಮ್ಮ ಪೈಕಿ ಒಬ್ಬನನ್ನು ಸದರಿ ಸಭೆಯ ಅಧ್ಯಕ್ಷನಾಗಿ ಚುನಾಯಿಸತಕ್ಕದ್ದು

ಅಂದಾಜಪತ್ರಿಕೆ ಮತ್ತು ಜಮಾಖರ್ಚಿನ ಯಾವತ್ತು ನಮೂನೆಗಳೂ ಆ ವಿಷಯದ ಎಲ್ಲ ಮಾಹಿತಿಯೂ ಈ ಪುಸ್ತಕದ ಕೊನೆಯಲ್ಲಿರುವ ಪರಿಶಿಷ್ಟ "ಆ"ದಲ್ಲಿ.

# ಬಾಬು ೬.

## ನ್ಯಾಯಪಂಚಾಯತಗಳ ರಚನೆ ಮತ್ತು ಅಧಿಕಾರಗಳು

ಪ್ರಸ್ತಾವನೆ (ಮುನ್ನುಡಿ)— ಗ್ರಾಮಪಂಚಾಯತಿ ಕಾಯದೆಯ ಎರಡು ಉದ್ದೇಶಗಳು ಹೇಳಿವೆ.

(೧) ಹಳ್ಳಿಯೊಳಗಿನ ಜನರಿಗೆ, ತಮ್ಮ ಊರಿನ ಆರೋಗ್ಯದಂಥ ಕೆಲವು ಗೊತ್ತುಪಡಿಸಿದ ಸಂಗತಿಗಳ ಕಾರಭಾರದ ಮಟ್ಟಿಗೆ ಸ್ಥಾನಿಕ ಸ್ವರಾಜ್ಯದ ಅಧಿಕಾರಕೊಡುವದು ; ಮತ್ತು

(೨) ಹಳ್ಳಿಯೊಳಗಿನ ಚಿಕ್ಕ-ಪುಟ್ಟ ಸ್ವರೂಪದ ದಿವಾಣಿದಾವೆ ಮತ್ತು ಫೌಜದಾರಿಖಟ್ಲೆ ನಡಿಸುವ— ಊರಲ್ಲಿಯೇ ಊರ ಪಂಚಾಯತಿಯ ಮಾರ್ಫತ (ಮುಖಾಂತರ)ವಾಗಿಯೇ ನ್ಯಾಯದಾನ ಮಂಡಲಗ (ಬೆಂಚಿನ) ಸ್ಥಾಪನೆಮಾಡಿ, ಅವರಿಗೆ ನ್ಯಾಯದಾನದ ಅಧಿಕಾರಗಳನ್ನು ಕೊಡುವದು.

ಇವೆರಡು ಉದ್ದೇಶಗಳಿಗನುಸಾರವಾಗಿ ಈ ಕಾಯದೆಯಲ್ಲಿ ಎರಡು ಭಾಗಗಳಾಗಿರುತ್ತವೆ. ಮೊದಲನೆಯದು ಕಾರಭಾರ ( ವ್ಯವಸ್ಥೆ ) ವಿಭಾಗ ಹಾಗೂ ಎರಡನೆಯದು ನ್ಯಾಯದಾನ ವಿಭಾಗ

ನ್ಯಾಯದಾನ ವಿಭಾಗಕ್ಕೆ ೬ನೇ ಬಾಬಿನಿಂದ ಆರಂಭವಾಗುತ್ತದೆ ಈ ಪ್ರಕರಣದಲ್ಲಿ ನ್ಯಾಯದಾನ ಮಂಡಲದ ಸ್ಥಾಪನೆಯು ಮತ್ತು ಅಧಿಕಾರದ ರೂಪರೇಖೆ ಕೊಡಲಾಗಿದೆ.

೭ನೆಯ ಬಾಬಿನಲ್ಲಿ ನ್ಯಾಯದಾನ ಮಂಡಲವು ದಿವಾಣಿ ಮತ್ತು ಫೌಜದಾರಿ ಕೆಲಸಗಳನ್ನು ಹೇಗೆ ನಡಿಸಬೇಕೆಂಬುದರ ತಪಶೀಲು ಇರುವದು

ಮತ್ತು ೮ ನೇ ಬಾಬಿನಲ್ಲಿ ನ್ಯಾಯದಾನ ಮಂಡಲವು ( ಬೆಂಚು ) ಕೊಟ್ಟ ನಿಕಾಲೆಯ ( ತೀರ್ಪಿನ ) ಅಮಲ ಬಜಾವಣೆಯು ಹೇಗೆ ಮಾಡಬೇಕು ಎಂಬ ಸಂಗತಿ ಹೇಳಲಾಗಿದೆ. ಈ ೮ನೆಯ ಬಾಬು ನ್ಯಾಯದಾನ ವಿಭಾಗದ ಕೊನೆಯ ಬಾಬೇ ( ಪ್ರಕರಣವೇ ) ಸರಿ.

ಮೊದಲು ನ್ಯಾಯಮಂಡಲದ ಸ್ಥಾಪನೆಯ ಬಗ್ಗೆ (೬ನೇ ಬಾಬು), ಆಮೇಲೆ ಮಂಡಲದ ಪ್ರತ್ಯಕ್ಷನ್ಯಾಯದಾನ ವಿಷಯವಾಗಿ, ಮತ್ತು ಕೊನೆಗೆ ನ್ಯಾಯದಾನದ ಆದರೆ ಕೊಟ್ಟ ನಿಕಾಲೆಯ ಅಮಲಬಜಾವಣೆ ವಿಷಯವಾಗಿ ( ೮ನೇ ಬಾಬು ) ಹೀಗೆ ಈ ನ್ಯಾಯದಾನ ವಿಷಯದ ರಚನೆಯಿರುವದು.

ಬಾಬು ೬,೭ ಮತ್ತು ೮ ಇವುಗಳನ್ನು ಬಿಟ್ಟು, ಉಳಿದ ಎಲ್ಲ ಬಾಬುಗಳು ಕಾರಭಾರ ವಿಭಾಗ ಸಂಬಂಧವಾಗಿ ಇರುವವೆಂದು ಸ್ಥೂಲಮಾನದಿಂದ ಹೇಳಬಹುದು.

ಈ ಬಾಬಿನೊಳಗಿನ ಪ್ರಮುಖ ವಿಷಯವು— (೧) ನ್ಯಾಯದಾನ ಮಂಡಲದ ಸ್ಥಾಪನೆ ಹೇಗೆ ಆಗಬೇಕು —ಅದರ ಸಭಾಸದರು ಯಾರ್‍ಯಾರಿಗೆ ಹಾಗೂ ಹೇಗೆ ಆಗಲಿಕ್ಕೆ ಬರುವದು, (೨) ಮಂಡಲದ ರಚನೆ-ಸಭಾಸದರೆಷ್ಟು, ಚೇಅರಮನರು ಯಾರು, ನ್ಯಾಯದಾನ-ಮಂಡಲದ ಎದುರಿನಲ್ಲಿ ಬರುವ ಕಾರ್ಯದ ಸ್ವರೂಪದ ಕೆಲಸಗಳು ಬರಬಹುದು, ದಿವಾಣಿ ಕೆಲಸಗಳು ಯಾವವು ಮತ್ತು ಫೌಜದಾರಿ ಕೆಲಸಗಳು ಯಾವವು ಬರಬಹುದು (೩) ಯಾವ ಯಾವವು ಬರಲಾರವು (೪) ಶಿಕ್ಷೆ ವಿಧಿಸುವ ಅಧಿಕಾರ ಹಾಗೂ ಮರ್ಯಾದೆ.

## ೩೭. ನ್ಯಾಯ ಪಂಚಾಯತಗಳ ಚುನಾವಣೆ

**(೧) ಪ್ರತಿಯೊಂದು ಪಂಚಾಯತವು, ತನ್ನ ಮೊದಲನೇ ಸಭೆಯಲ್ಲಿ, ಒಂದು ಗ್ರಾಮದ ಬೆಂಚನ್ನು ರಚಿಸುವ ಕಾರಣದ ಸಲುವಾಗಿ, ತನ್ನ ಸಭಾಸದರೊಳಗಿಂದ ಐದು ಜನರನ್ನು ಠರಾಯಿಸಲ್ಪಟ್ಟ ರೀತಿಯಿಂದ ಚುನಾಯಿಸಬೇಕು**

**(೧ ಅ) ನ್ಯಾಯಪಂಚಾಯತಿಯ ಸಭಾಸದರ ೧ ನೆಯ ಪೋಟ ಕಲಮಿನನ್ವಯ ಚುನಾವಣೆಯ ಕಾಯದೇಶೀರತನದ ಬಗ್ಗೆ ಯಾವದೇ ಪ್ರಶ್ನೆ ಅಥವಾ ಸಂಶಯದ ಬಗ್ಗೆ ವಾದ ಉದ್ಭವಿಸಿದಲ್ಲಿ ಆ ಪ್ರಶ್ನೆಯ ಸಂಶಯದ ಅಥವಾ ವಾದದ ಕುರಿತು ಕಲೆಕ್ಟರನ ಕಡೆಗೆ ನಿರ್ಣಯದ ಸಲುವಾಗಿ ಬರೆದು ಕಳಿಸತಕ್ಕದ್ದು ; ಕಲೆಕ್ಟರ ನಿರ್ಣಯವು ಕೊನೆಯದಾಗತಕ್ಕದ್ದು. ಇಂಥ ಪ್ರಶ್ನೆಯ ಸಂಶಯದ ಅಥವಾ ವಾದದ ಸಂಬಂಧವಾಗಿ ಯಾವದೇ ಕೋರ್ಟಿನಲ್ಲಿ ಯಾವದೇ ದಾವೆಯು ಅಥವಾ ಇತರ ಕೆಲಸವು ನಡೆಯತಕ್ಕದ್ದಲ್ಲ.**

ನ್ಯಾಯದಾನ-ಮಂಡಳದ ಸಂಬಂಧವಾಗಿ ಮಾಡಿದ ಯಾವತ್ತು ನಿಯಮಗಳು ಈ ಕಲಮಿನ ಕೊನೆಯಲ್ಲಿ ಕೊಡಲಾಗಿದೆ. ಅವುಗಳಲ್ಲಿ ಚುನಾವಣೆ ವಿಷಯದ "ಬ" ಭಾಗವನ್ನು ಈ ಸ್ಥಳದಲ್ಲಿ ನೋಡಬೇಕು.

**(೨) ಹೀಗೆ ಚುನಾಯಿಸಲ್ಪಟ್ಟ ಐದು ಜನರು, ನ್ಯಾಯ ಪಂಚಾಯತವು ಆಗಿರಬೇಕು, ಮತ್ತು ಪ್ರಾಂತಿಕ ಸರಕಾರದವರು, ಇಂಥ ಪಂಚಾಯತವು ಈ ಆಕ್ಟಿನನ್ವಯ ಸದರಿ ನ್ಯಾಯ ಪಂಚಾಯತಕ್ಕೆ ಒಪ್ಪಿಸಿಕೊಡಬಹುದಾದ ಯಾವತ್ತು ನ್ಯಾಯ ವಿಷಯಕ ಅಧಿಕಾರಗಳನ್ನು ಅಥವಾ ಅವುಗಳ ಪೈಕಿ ಯಾವವನ್ನಾದರೂ ನಡಿಸಬಹುದೆಂದು ಫರ್ಮಾಯಿಸತಕ್ಕದ್ದು.**

**ಆದರೆ ಗೊತ್ತುಪಡಿಸುವದೇನಂದರೆ, ಯಾವದೊಂದು ಗ್ರಾಮದ ನ್ಯಾಯ ಪಂಚಾಯತವು ತನಗೆ ಒಪ್ಪಿಸಿಕೊಡಲಪಟ್ಟ ಯಾವತ್ತು ಅಧಿಕಾರಗಳನ್ನು ನಡಿಸಲಿಕ್ಕೆ ನಾಲಾಯಖವಾಗಿದೆಂದು ಅಥವಾ ಸದರಿ ಅಧಿಕಾರಿಗಳ ದುರುಪಯೋಗ ಮಾಡಿರುತ್ತದೆಂದು ಪ್ರಾಂತಿಕ ಸರಕಾರದವರು ಅಭಿಪ್ರಾಯಪಟ್ಟರೆ, ಅವರು ಯಾವದೇ ಕಾಲಕ್ಕೆ, ಸರಕಾರಿ ಗ್ಯಾಝೇಟಿನಲ್ಲಿ ಜಾಹೀರನಾಮೆ ಕೊಟ್ಟು, ಸದರಿ ನ್ಯಾಯ ಪಂಚಾಯತಕ್ಕೆ ಕೊಟ್ಟ ಸದರೀ ಯಾವತ್ತು ನ್ಯಾಯವಿಷಯಕ ಅಧಿಕಾರಗಳನ್ನು ಅಥವಾ ಅವುಗಳ ಪೈಕಿ ಯಾವದೇ ಅಧಿಕಾರವನ್ನು ಹಿಂದಕ್ಕೆ ತಕ್ಕೊಳ್ಳಬಹುದು.**

(೩) ಇದರಲ್ಲಿ ಠರಾಯಿಸಿದ್ದನ್ನು ಹೊರ್ತುಪಡಿಸಿ ಇಂಥ ನ್ಯಾಯ ಪಂಚಾಯತಿಯ ಸಭಾಸದರ ಹುದ್ದೆಯ ಮುದತು, ಪಂಚಾಯತದ ಸಭಾಸದರೆಂದು ಅವರ ಹುದ್ದೆಯ ಮುದ್ದತು ಇರುವ ವರೆಗೆ, ನಡೆಯುವದು.

(೪) ಇಂಥ ನ್ಯಾಯ ಪಂಚಾಯತಿಯ ಸಭಾಸದರ ಪೈಕಿ ಯಾವನೇ ಸಭಾಸದನ ಹುದ್ದೆಯ ಜಾಗೆಯು ಖಾಲಿ ಆದರೆ, ಠರಾಯಿಸಲ್ಪಟ್ಟ ರೀತಿಯಿಂದ ಚುನಾವಣೆ ಮಾಡಿ ಅವನ್ನು ತುಂಬಬೇಕು. ಹೀಗೆ ಚುನಾಯಿಸಲ್ಪಟ್ಟ ಸಭಾಸದನು, ಅವನು ಯಾವನ ಜಾಗೆಯಲ್ಲಿ ಚುನಾಯಿಸಲ್ಪಟ್ಟರುವನೋ ಅಂಥ ಸಭಾಸದನ ಜಾಗೆಯು ಖಾಲಿಯಾಗದಿದ್ದರೆ ಹುದ್ದೆಯನ್ನು ಧಾರಣ ಮಾಡಬಹುದಾಗಿದ್ದಂಥ ಮುದತಿನ ವರೆಗೆ ಮಾತ್ರ ಹುದ್ದೆಯನ್ನು ಧಾರಣ ಮಾಡತಕ್ಕದ್ದು.

(೫) ಹೀಗೆ ಚುನಾಯಿಸಲ್ಪಟ್ಟ ಸಭಾಸದರ ಪೈಕಿ ಮೂವರು ಸಭಾಸದರು ಹಾಜರಿದ್ದರೆ ಕೋರಮವಾಗುವದು.

(೬) ಈ ಆಕ್ಟಿನಲ್ಲಿ ಠರಾಯಿಸಿದಂತೆ ಹೊರ್ತಾಗಿ, ಪ್ರಾಂತಿಕ ಸರಕಾರದವರು ಈ ಕೆಳಗಿನ ವಿಷಯಗಳನ್ನು ನಿಯಮಗೊಳಿಸುವ ಬಗ್ಗೆ ಕಾನೂನುಗಳನ್ನು ಮಾಡಬಹುದು.—

(ಅ) ನ್ಯಾಯ ಪಂಚಾಯತದ ವ್ಯವಹಾರವನ್ನು ನಡಿಸುವದು ಮತ್ತು ಹಂಚಿಕೊಡುವದು ಮತ್ತು ಅದರ ಮುಂದೆ ನಡಿಸುವ ಕೆಲಸದ ರೀತಿ,

(ಬ) ನ್ಯಾಯ ಪಂಚಾಯತವು ಕೂಡಬಹುದಾದ ವೇಳೆ ಮತ್ತು ಸ್ಥಳಗಳು,

(ಕ) ನ್ಯಾಯ ಪಂಚಾಯದ ಮುಂದೆ ನಡೆಯುವ ಕೆಲಸಗಳನ್ನು ನಡಿಸುವ ಬಗ್ಗೆ ಅವಶ್ಯವೆಂದು ಪ್ರಾಂತಿಕ ಸರಕಾರದವರು ಅಭಿಪ್ರಾಯಪಡುವ ಇತರ ಯಾವದೇ ಬಾಬತು.

ಈ ಸ್ಥಳದಲ್ಲಿ ನ್ಯಾಯದಾನ ಮಂಡಲದ ಸಂಬಂಧವಾದ ಮುಂದೆ ಕೊಟ್ಟ ಸರಕಾರಿ ನಿಯಮಗಳಲ್ಲಿ " ಕ " ಭಾಗವನ್ನು ನೋಡು.

## ಸನ್ ೧೯೪೦ ರ ಮುಂಬಯಿಯ, ನ್ಯಾಯಪಂಚಾಯತದ ಮಂಡಲದ ಬಗ್ಗೆ ನಿಯಮಗಳು

[ ನಂ. ಎಸ್. ೧೭೪/೧೧ ತಾ. ೧೪-೮-೪೦ ]

[ ಪಂಚಾಯತಿ ಆಕ್ಟ ಕಲಮು ೧೦೮ (೧) (ಗ), (ಹ), (ಆಯ್), (ಜೆ) ಮತ್ತು (ಲ) ಇವುಗಳ ಆಧಾರದಿಂದ ಮಾಡುವದರಲ್ಲಿ ಬಂದವುಗಳು. ]

## ಅ – ಪ್ರಸ್ತಾವನೆ

೧. ಸಂಕ್ಷಿಪ್ತ ಹೆಸರು— ಈ ಕಾನೂನುಗಳಿಗೆ ಸನ್ನ ೧೯೪೦ ನೇ ಇಸವಿಯ ಮುಂಬಯಿಯ ಗ್ರಾಮದ ಬೆಂಚುಗಳ ವಿಷಯದ ಕಾನೂನುಗಳೆಂದೆನ್ನಬಹುದು.

೨. ವ್ಯಾಖ್ಯೆಗಳು:— ಈ ಕಾನೂನುಗಳಲ್ಲಿ, ವಿಷಯದ ಇಲ್ಲವೆ ಸಂದರ್ಭದ ಮೇಲಿಂದ ಯಾವದೇ ಬಾಧೆ ಬಾರದಿದ್ದರೆ—

(೧) "ಆಕ್ಟ್" ಅಂದರೆ, ಸನ್ ೧೯೩೩ನೇ ಇಸವಿಯ ಮುಂಬಯಿಯ ಗ್ರಾಮಪಂಚಾಯತಗಳ ವಿಷಯದ ಆಕ್ಟ್ ಎಂದರ್ಥವಾಗುತ್ತದೆ :

(೨) "ನಮೂನೆಯು" ಅಂದರೆ, ಈ ಕಾನೂನುಗಳಿಗೆ ಜೋಡಿಸಿದ ಯಾವದೊಂದು ನಮೂನೆಯು ಎಂದರ್ಥವಾಗುತ್ತದೆ ;

(೩) "ಸಭಾಸದನು" ಅಂಪರೆ, ಯಾವದೊಂದು ನ್ಯಾಯಪಂಚಾಯತದ ಯಾವನೊಬ್ಬ ಸಭಾಸದನು ಎಂದರ್ಥವಾಗುತ್ತದೆ ;

(೪) "ಕಲಮು" ಅಂದರೆ, ಸದರಿ ಆಕ್ಟಿನ ಯಾವದೊಂದು ಕಲಮು ಎಂದರ್ಥವಾಗುತ್ತದೆ ;

(೫) "ಗ್ರಾಮದ ಚಾವಡಿ" ಎಂಬ ಸಂಜ್ಞೆಯಲ್ಲಿ, ಸನ್ ೧೮೭೯ನೇ ಇಸವಿಯ ಮುಂಬಯಿಯ ಭೂಮಿಯ ಮುಹಸೂಲಿನ ಕಾಯದೆಯನ್ವಯ ಚಾವಡಿ ಎಂದು ತಿಳಿಯಲ್ಪಡುವ ಯಾವದೊಂದು ಸ್ಥಳದ ಸಮಾವೇಶವಾಗುತ್ತದೆ ;

(೬) ಈ ಕಾನೂನುಗಳಲ್ಲಿ ವ್ಯಾಖ್ಯಾಯಿಸಲ್ಪಡದಿದ್ದು ಆಕ್ಟಿನಲ್ಲಿ ಉಪಯೋಗಿಸಲ್ಪಟ್ಟ ಶಬ್ದ ಹಾಗೂ ಸಂಜ್ಞೆಗಳಿಗೆ, ಅವುಗಳಿಗೆ ಆಕ್ಟಿನಲ್ಲಿ ಕೊಡಲ್ಪಟ್ಟ ಅರ್ಥಗಳೇ ಇರತಕ್ಕದ್ದು.

## ಬ—ಯಾವದೊಂದು ನ್ಯಾಯಪಂಚಾಯತದ ಸಭಾಸದರನ್ನು ಚುನಾಯಿಸುವ ರೀತಿ

೩. ಯಾವದೊಂದು ಗ್ರಾಮದ ಬೆಂಚಿನ ಸಭಾಸದರನ್ನು ಚುನಾಯಿಸುವ ವಿಧಾನವು - ೧೭ನೇ ಕಲಮಿನನ್ವಯ ಕರೆಯಲ್ಪಟ್ಟ ಯಾವದೊಂದು ಪಂಚಾಯತದ ಮೊದಲನೇ ಸಭೆಯಲ್ಲಿ ಸರಪಂಚನು ಚುನಾಯಿಸಲ್ಪಟ್ಟ ಬಳಿಕ, ಸದರಿ ಪಂಚಾಯತವು ನ್ಯಾಯಪಂಚಾಯತವನ್ನು ರಚಿಸುವದಕ್ಕಾಗಿ ತನ್ನ ಸಭಾಸದರೊಳಗಿಂದ ೫ ಜನರನ್ನು ಚುನಾಯಿಸುವದಕ್ಕೆ ತೊಡಗಬೇಕು. ಇಂಥ ಚುನಾವಣೆ

ಯನ್ನು ಕೈಗಳನ್ನು ಎತ್ತಿ ಹಿಡಿದಾಗಲಿ ಬ್ಯಾಲೆಟದಿಂದಾಗಲಿ ನಡಿಸಬಹುದು. ಪ್ರತಿಯೊಂದು ಚುನಾವಣೆಯ ಪ್ರಸಂಗದಲ್ಲಿ ಸರಪಂಚನು, ಇಂಥ ಚುನಾವಣೆಯು ಜರುಗತಕ್ಕದ್ದಿದ್ದ ಸಭೆಯ ಇಚ್ಛೆಯನ್ನು ತಿಳಿದುಕೊಂಡು, ಸದರಿ ಚುನಾವಣೆಯನ್ನು ಕೈಗಳನ್ನು ಎತ್ತಿ ಹಿಡಿಯುವ ಪದ್ಧತಿಯಿಂದ ಜರುಗಿಸಬೇಕೋ ಬ್ಯಾಲೆಟದಿಂದ ಜರುಗಿಸಬೇಕೋ ಎಂಬದನ್ನು ಠರಾಯಿಸಬೇಕು

೪. ಕೈಗಳನ್ನು ಎತ್ತಿಹಿಡಿಯುವ ಪದ್ಧತಿಯಿಂದ ಜರುಗಿಸಲ್ಪಡುವ ಚುನಾವಣೆಗಳಲ್ಲಿ ಕೆಲಸದ ರೀತಿ — (೧) ಕೈಗಳನ್ನು ಎತ್ತಿಹಿಡಿಯುವ ಪದ್ಧತಿಯಿಂದ ಚುನಾವಣೆಯನ್ನು ಜರುಗಿಸುವದಿದ್ದಾಗ, ಈ ಕಾನೂನಿನಲ್ಲಿ ಹೇಳಿದ ಕೆಲಸದ ರೀತಿಯು ಅನುಸರಿಸಲ್ಪಡತಕ್ಕದ್ದು

(೨) ಸರಪಂಚನು, ಚುನಾಯಿಸಲ್ಪಡಲಿಚ್ಛಿಸುವ ಯಾವತ್ತು ಉಮೇದವಾರರಿಗೆ ತಮ್ಮ ಹೆಸರುಗಳನ್ನು ತನಗೆ ಹೇಳಲಿಕ್ಕೆ ಕೇಳಿಕೊಳ್ಳತಕ್ಕದ್ದು

(೩) ಆವನು ಪ್ರತಿಯೊಬ್ಬ ಉಮೇದವಾರನ ಹೆಸರನ್ನು ಬೇರೆ ಬೇರೆಯಾಗಿ ಮತಕ್ಕೆ ಹಾಕಬೇಕು, ಮತ್ತು ಎಲ್ಲಕ್ಕೂ ಹೆಚ್ಚು ಮತಗಳು ಬಿದ್ದ ಉಮೇದವಾರರು ಚುನಾಯಿಸಲ್ಪಟ್ಟಿದ್ದಾರೆಂದು ಜಾಹೀರಮಾಡಬೇಕು

(೪) ಇಬ್ಬರು ಅಥವಾ ಹೆಚ್ಚು ಜನ ಉಮೇದವಾರರಿಗೆ ಸಮಾನ ಸಂಖ್ಯೆಯ ಮತಗಳು ಬಿದ್ದ ಪ್ರಸಂಗದಲ್ಲಿ, ಯಾವ ಉಮೇದವಾರನು ಚುನಾಯಿಸಲ್ಪಟ್ಟಿದ್ದಾನ ಎಂದು ಜಾಹೀರ ಮಾಡಬೇಕೆಂಬದನ್ನು, ಸರಪಂಚನ ಸಮಕ್ಷ ಹಾಗೂ ಅವನು ಗೊತ್ತುಪಡಿಸುವ ರೀತಿಯಿಂದ ಚೀಟಿಹಾಕಿ ನಿರ್ಣಯಿಸತಕ್ಕದ್ದು

೫ ಬ್ಯಾಲೆಟದಿಂದ ಜರುಗಿಸಲ್ಪಡುವ ಚುನಾವಣೆಗಳಲ್ಲಿ ಕೆಲಸದ ರೀತಿ —

(೧) ಚುನಾವಣೆಯನ್ನು ಬ್ಯಾಲೆಟದಿಂದ ಜರುಗಿಸುವದಿದ್ದಾಗ, ಈ ಕಾನೂನಿನಲ್ಲಿ ಹೇಳಿದ ಕೆಲಸದ ರೀತಿಯು ಅನುಸರಿಸಲ್ಪಡತಕ್ಕದ್ದು

(೨) ಸರಪಂಚನು, ಚುನಾಯಿಸಲ್ಪಡಲಿಚ್ಛಿಸುವ ಯಾವತ್ತು ಉಮೇದವಾರರಿಗೆ ತಮ್ಮ ಹೆಸರುಗಳನ್ನು ತನಗೆ ಹೇಳಲಿಕ್ಕೆ ಕೇಳಿಕೊಳ್ಳಬೇಕು.

(೩) ಸರಪಂಚನು, ಸಭೆಯಲ್ಲಿ ಹಾಜರಿದ್ದ ಪಂಚಾಯತದ ಪ್ರತಿಯೊಬ್ಬ ಸಭಾಸದನಿಗೆ ೫ ಮತಕೊಡುವ ಕಾಗದಗಳನ್ನು ಕೊಟ್ಟು, ಅವನಿಗೆ, ಗ್ರಾಮದ ಪಂಚಿಗೆ ಯಾವನು ಚುನಾಯಿಸಲ್ಪಡುವದು ತನಗೆ ಬೇಕಾಗಿದೆಯೋ ಅಂಥ ಉಮೇದವಾರನ ಹೆಸರನ್ನು ಇಂಥ ಪ್ರತಿಯೊಂದು ಕಾಗದದ ಮೇಲೆ ಬರೆಯಲಿಕ್ಕೆ ಹೇಳಬೇಕು

(೪) ಮತಕೊಡುವ ಕಾಗದಗಳಲ್ಲಿ ಯೋಗ್ಯರೀತಿಯಿಂದ ಹೆಸರುಗಳನ್ನು ಬರೆದ ಬಳಿಕ, ಅವುಗಳನ್ನು ಮಡಿಚಿ ಸರಪಂಚನಿಗೆ ಕೊಡತಕ್ಕದ್ದು. ಅವನು ಮತಗಳನ್ನು ಎಣಿಸುವದಕ್ಕಾಗಿ, ಇಬ್ಬರು ತಪಾಸಿಗರನ್ನು ನೇಮಿಸಬೇಕು, ಮತ್ತು ಅವರ ನೇಮಣೂಕಿಯನ್ನು ಸಭೆಯಲ್ಲಿ ಹಾಜರಿದ್ದ ಪಂಚಾಯತದ ಸಭಾಸದರು ಮಂಜೂರುಮಾಡಿರತಕ್ಕದ್ದು.

(೫) ತಪಾಸಿಗರು ಮತಗಳನ್ನು ಎಣಿಸಿ, ಮತದಾನದ ಪರಿಣಾಮವನ್ನು ಸರಪಂಚನಿಗೆ ಕೂಡಲೆ ತಿಳಿಸತಕ್ಕದ್ದು

(೬) ಸರಪಂಚನು, ಎಲ್ಲಕ್ಕೂ ಹೆಚ್ಚು ಮತಗಳು ಬಿದ್ದ ಉಮೇದವಾರರು ಚುನಾಯಿಸಲ್ಪಟ್ಟಿದ್ದಾರೆ ಎಂದು ಜಾಹೀರಮಾಡಬೇಕು

(೭) ಇಬ್ಬರು ಅಥವಾ ಹೆಚ್ಚು ಜನ ಉಮೇದವಾರರಿಗೆ ಸಮಾನಸಂಖ್ಯೆಯ ಮತಗಳು ಬಿದ್ದ ಬಾಬತಿನಲ್ಲಿ, ಯಾವ ಉಮೇದವಾರನು ಚುನಾಯಿಸಲ್ಪಟ್ಟಿದಾನೆ ಎಂದು ಜಾಹೀರ ಮಾಡಬೇಕೆಂಬದನ್ನು, ಸರಪಂಚನ ಸಮಕ್ಷ ಮತ್ತು ಅವನು ಗೊತ್ತುಪಡಿಸುವ ರೀತಿಯಿಂದ ಚೀಟಿಹಾಕಿ ನಿರ್ಣಯಿಸತಕ್ಕದ್ದು

೬ ಚುನಾವಣೆಯ ಪರಿಣಾಮವನ್ನು ಪ್ರಸಿದ್ಧಪಡಿಸುವ ರೀತಿ: — ಪ್ರತಿಯೊಂದು ಚುನಾವಣೆಯ ಪರಿಣಾಮವನ್ನು, ಪಂಚಾಯತದ ಕಚೇರಿಯಲ್ಲಿ ನೋಟೀಸ ಬೋರ್ಡಿನ ಮೇಲೆ ಹಚ್ಚತಕ್ಕದ್ದು.

## ಕ — ನ್ಯಾಯಪಂಚಾಯತದ ಚೇಅರಮನ್ನನ ಚುನಾವಣೆ, ನ್ಯಾಯ ಪಂಚಾಯದ ಮುಂದೆ ಕೆಲಸವನ್ನು ನಡಿಸುವ ಕ್ರಮ, ಅದರ ಸಭೆಗಳ ವೇಳೆ ಮತ್ತು ಸ್ಥಳಗಳು ಮುಂತಾಗಿ

೭. **ಚೇಅರಮನ್ನನ ಚುನಾವಣೆ:—** ಪಂಚಾಯತವು ನ್ಯಾಯ ಪಂಚಾಯತದ ಸಭಾಸದರನ್ನು ಚುನಾಯಿಸಿದ ಬಳಿಕ, ಸರಪಂಚನು ನ್ಯಾಯ ಪಂಚಾಯತದ ಒಂದು ಸಭೆಯನ್ನು, ಅದರ ಚೇಅರಮನ್ನನ್ನು ಚುನಾಯಿಸುವದಕ್ಕಾಗಿ, ಕರೆಯತಕ್ಕದ್ದು. ಇಂಥ ಸಭೆಯಲ್ಲಿ ಒಬ್ಬ ಚೇಅರಮನ್ನನು ಸದರಿ ನ್ಯಾಯ ಪಂಚಾಯತದಿಂದ ಚುನಾಯಿಸಲ್ಪಡತಕ್ಕದ್ದು

೭ ಅ. ಸದರಿ ಸಭೆಗೆ ಚೇಅರಮನ್ನನು ಚುನಾಯಿಸಲ್ಪಡುವ ವರೆಗೆ, ಸರಪಂಚನು ಅಧ್ಯಕ್ಷನಾಗಿರಬೇಕು

೭ ಬ. ಹೀಗೆ ಅಧ್ಯಕ್ಷನಾಗಿರುವ ಸರಪಂಚನು, ಸದರಿ ಸಭೆಯಲ್ಲಿ, ತಾನು ಸ್ವತಃ ನ್ಯಾಯ ಪಂಚಾಯತದ ಸಭಾಸದನಿದ್ದ ಹೊರ್ತು, ಯಾವದೇ ಸೂಚನೆಯ ಮೇಲೆ ಮತ ಕೊಡಲಿಕ್ಕೆ ಅಥವಾ ಯಾವದೇ ಸೂಚನೆಯನ್ನು ಮಾಡಲಿಕ್ಕೆ ಸ್ವತಂತ್ರನಿರತಕ್ಕದ್ದಲ್ಲ.

೭ ಕ. ಸರಪಂಚನು ಸದರಿ ಸಭೆಗೆ ಅಧ್ಯಕ್ಷನಾಗಲು ಅಸಮರ್ಥನಿದ್ದರೆ ಅಥವಾ ಅವನು ಯಾವದೇ ಕಾರಣದಿಂದ ಹೀಗೆ ಅಧ್ಯಕ್ಷನಾಗಲು ತಪ್ಪಿದರೆ, ಹಾಜರಿದ್ದ ಸಭಾಸದರು ಸದರಿ ಸಭೆಯ ಬಗ್ಗೆ ತಮ್ಮೊಳಗಿಂದ ಒಬ್ಬ ಚೇಅರಮನ್ನನನ್ನು ಚುನಾಯಿಸಬೇಕು ಇಂಥ ಚೇಅರಮನ್ನನು, ನ್ಯಾಯ ಪಂಚಾಯತಿಯ ಚೇಅರಮನ್ನನು ಚುನಾಯಿಸಲ್ಪಡುವ ವರೆಗೆ, ಸದರಿ ಸಭೆಯ ಅಧ್ಯಕ್ಷನಾಗತಕ್ಕದ್ದು.

೭ ಡ. ಮತಗಳು ಸಮಾನವಾಗಿ ಬಿದ್ದ ಪ್ರಸಂಗದಲ್ಲಿ, ಚುನಾವಣೆಯ ಪರಿಣಾಮವನ್ನು, ಸದರಿ ಸಭೆಗೆ ಅಧ್ಯಕ್ಷನಾಗಿದ್ದ ಮನುಷ್ಯನ ಸಮಕ್ಷ, ಅವನು ಗೊತ್ತುಪಡಿಸಬಹುದಾದಂಥ ರೀತಿಯಿಂದ, ಚೀಟಿಹಾಕಿ ನಿರ್ಣಯಿಸಬೇಕು

೮ ಚೇಅರಮನ್ನನು ಗೈರಹಾಜರಿದ್ದ ಪ್ರಸಂಗದಲ್ಲಿ ಅಥವಾ ಅಧ್ಯಕ್ಷನಾಗಲಿಕ್ಕೆ ಅಸಮರ್ಥನಿದ್ದ ಪ್ರಸಂಗದಲ್ಲಿ ಚೇಅರಮನ್ನನನ್ನು ನೇಮಿಸುವದು.—ನ್ಯಾಯ ಪಂಚಾಯತಿಯ ಚೇಅರಮನ್ನನು ಇಂಥ ಗ್ರಾಮದ ಬೆಂಚಿನ ಪ್ರತಿಯೊಂದು ಸಭೆಯಲ್ಲಿ ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಚೇಅರಮನ್ನನು ಗೈರಹಾಜರಿದ್ದಾಗ ಅಥವಾ ಅವನು ಯಾವದೇ ಸಭೆಗೆ ಅಧ್ಯಕ್ಷನಾಗಲು ಅಸಮರ್ಥನಿದ್ದಾಗ, ಹಾಜರಿದ್ದ ಸಭಾಸದರು, ಸದರಿ ಸಭೆಗೆ ಚೇಅರಮನ್ನನಾಗುವದಕ್ಕಾಗಿ, ಹಾಜರಿದ್ದ ಸಭಾಸದರೊಳಗಿದ್ದ ಒಬ್ಬನನ್ನು ಚುನಾಯಿಸಬೇಕು. ಚೇಅರಮನ್ನನೆಂದು ಚುನಾಯಿಸಲ್ಪಡಲಿಕ್ಕೆ ಮುಂದೆ ಬಂದ ಇಬ್ಬರು ಅಥವಾ ಹೆಚ್ಚು ಜನ ಸದಸ್ಯರಿಗೆ ಸಮಾನ ಸಂಖ್ಯೆಯ ಮತಗಳು ಬಿದ್ದರೆ, ಯಾವ ಸದಸ್ಯನು ಚುನಾಯಿಸಲ್ಪಟ್ಟಿದ್ದಾನೆಂಬದನ್ನು ಚೀಟಿಹಾಕಿ ನಿರ್ಣಯಿಸತಕ್ಕದ್ದು.

೯. ಸಭೆ ಕೂಡುವ ಸ್ಥಳ— ಪ್ರತಿಯೊಂದು ನ್ಯಾಯ ಪಂಚಾಯತವು ೧೯ ನೇ ಕಲಮಿನನ್ವಯ ಮಾಡಲ್ಪಟ್ಟ ಪೋಟ ಕಾಯದೆಗಳಿಗನುಸರಿಸಿ ಗೊತ್ತುಪಡಿಸಲ್ಪಟ್ಟ ಪಂಚಾಯತದ ಸಭೆ ಕೂಡುವ ಸ್ಥಳದಲ್ಲಿ ಸಭೆಗೂಡತಕ್ಕದ್ದು, ಮತ್ತು ಇಂಥ ಸ್ಥಳವು ದೊರೆಯದಿದ್ದರೆ, ಗ್ರಾಮದ ಚಾವಡಿಯಲ್ಲಿ ಸಭೆಗೂಡತಕ್ಕದ್ದು ;

ಆದರೆ ಗೊತ್ತುಪಡಿಸುವದೇನಂದರೆ, ಯಾವದೇ ಗ್ರಾಮದಲ್ಲಿ ಇಂಥ ಯಾವದೊಂದು ಗ್ರಾಮದ ಚಾವಡಿಯು ಇರದಿದ್ದರೆ, ಸದರಿ ಗ್ರಾಮವು ಯಾವನ ಹುಕುಮತಿನೊಳಗಿರುತ್ತದೋ ಅಂಥ ಸಬ್-ಡಿವಿಜನಲ್ ಮ್ಯಾಜಿಸ್ಟ್ರೇಟನು ಸಮ್ಮತಿಸುವ ಹಾಗು ಸಂಬಂಧಪಟ್ಟ ಎಲ್ಲರಿಗೂ ಹೋಗಿ ಬರಲಿಕ್ಕೆ ಅನುಕೂಲವಿರುವ ಇತರ ಯಾವದೇ ಸ್ಥಳದಲ್ಲಿ ಸದರಿ ಗ್ರಾಮದ ಬೆಂಚು ಸಭೆಗೂಡಬಹುದು.

೧೦ ಸಭೆ ನೆರೆಯಿಸುವ ತಾಸುಗಳು — ನ್ಯಾಯ ಪಂಚಾಯತದ ಚೇರಮನ್ನನು, ಇತರ ಸದಸ್ಯರನ್ನು ವಿಚಾರಿಸಿ, ಇಂಥ ಬೆಂಚು ಸಭೆ ನೆರೆಯಿಸುವ ತಾಸುಗಳನ್ನು ಠರಾಯಿಸತಕ್ಕದ್ದು.

೧೧. ರಜಿಸ್ಟರುಗಳು ಪ್ರತಿಯೊಂದು ನ್ಯಾಯಪಂಚಾಯತವು ಈ ಕೆಳಗೆ ಹೇಳಿದ ರಜಿಸ್ಟರುಗಳನ್ನು ಇಡತಕ್ಕದ್ದು —

(೧) ೧ ನೇ ನಮೂನೆಯಲ್ಲಿ, ನಡಿಸಿದ ಕೆಲಸಗಳ ರಜಿಸ್ಟರು

(೨) ೨ ನೇ ನಮೂನೆಯಲ್ಲಿ, ದಾವೆಗಳ ರಜಿಸ್ಟರು

(೩) ೩ ನೇ ನಮೂನೆಯಲ್ಲಿ, ಖಟ್ಲೆಗಳ ರಜಿಸ್ಟರು

೧೨. ಭಾಷೆ - ನ್ಯಾಯ ಪಂಚಾಯತವು ನಡಿಸಿದ ಕೆಲಸಗಳು ಮತ್ತು ನ್ಯಾಯ ಪಂಚಾಯತದ ಎಲ್ಲ ರಜಿಸ್ಟರುಗಳು, ಸಂಬಂಧಪಟ್ಟ ಗ್ರಾಮವು ಯಾವ ಜಿಲ್ಲೆಯಲ್ಲಿ ಇರುತ್ತದೋ ಆ ಜಿಲ್ಲೆಯ ಮುಖ್ಯ ಪ್ರಾದೇಶಿಕ ಭಾಷೆಯಲ್ಲಿ, ಅಥವಾ ಸದರಿ ಗ್ರಾಮವು ಯಾವನ ಹುಕುಮತಿನಲ್ಲಿರುತ್ತದೋ ಅಂಥ ಸಬ್-ಡಿವಿಜನಲ್ ಮ್ಯಾಜಿಸ್ಟ್ರೇಟನು ಫರ್ಮಾಯಿಸಬಹುದಾದ ಇತರ ಭಾಷೆಯಲ್ಲಿ, ಅನುಕ್ರಮವಾಗಿ ನಡೆಯತಕ್ಕದ್ದು ಮತ್ತು ಇಡಲ್ಪಡತಕ್ಕದ್ದು.

೧೩. ದಾವೆ ಅಥವಾ ಖಟ್ಲೆಗಳ ಚುನಾವಣೆ ಮತ್ತು ಅವುಗಳನ್ನು ಮುಂದೆ ಹಾಕೋಣ - ಪ್ರತಿಯೊಂದು ನ್ಯಾಯ ಪಂಚಾಯತವು ಶಕ್ಯವಿದ್ದ ಮಟ್ಟಿಗೆ, ಯಾವದೊಂದು ದಾವೆಯು ಅಥವಾ ಖಟ್ಲೆಯ ಚುನಾವಣೆಯನ್ನು ಇಂಥ ಚುನಾವಣೆಗಾಗಿ ಗೊತ್ತುಪಡಿಸಿದ ತಾರೀಖಿನ ದಿವಸ ಮುಗಿಯತಕ್ಕದ್ದು. ಯಾವಸಾದರೂ ದಾವೆಯ ಅಥವಾ ಖಟ್ಲೆಯ ಸುನಾವಣೆಯು ಯಾವದೇ ಕಾರಣದಿಂದ ಗೊತ್ತುಪಡಿಸಿದ ದಿವಸ ಮುಗಿಯದಿದ್ದರೆ, ಸದರಿ ಬೆಂಚು, ಮುಂದೆ ಹಾಕುವ ಬಗ್ಗೆ ತನ್ನ ಕಾರಣಗಳನ್ನು ಬರಹ ಮೂಲಕ ಬರೆದಿಟ್ಟು, ಸದರಿ ಸುನಾವಣೆಯನ್ನು, ಸಾಧ್ಯ

ವಿದ್ದರೆ, ಮುಂದಿನ ದಿವಸಕ್ಕೆ ಮುಂದೆ ಹಾಕಬೇಕು ಮತ್ತು ಆ ಮೇಲೆ ದಿನದಿಂದ ದಿನಕ್ಕೆ ಸದರಿ ಸುನಾವಣಿ ಮಾಡುವದನ್ನು ಚಾಲೂ ಇಡಬೇಕು ಯಾವದಾದರೂ ದಾವೆಯ ಅಥವಾ ಪ್ರಕರಣದ ನಿಕಾಲೆಯು, ಅದರ ಮೊದಲನೇ ಸುನಾವಣಿಯು ಆದ ತಾರೀಖಿನಿಂದ ೧೪ ದಿವಸಗಳೊಳಗಾಗಿ ಮಾಡಲ್ಪಡದಿದ್ದರೆ, ಚೇಅರಮನ್ನನು ಆ ಬಗ್ಗೆ ಕಾರಣಗಳನ್ನು ಕುರಿತು, ಸದರಿ ಗ್ರಾಮವು ಯಾವನ ಹುಕುಮಿನಲ್ಲಿರುತ್ತದೋ ಅಂಥ ಸಬ್-ಡಿವಿಜನಲ್ ಮ್ಯಾಜಿಸ್ಟ್ರೇಟನ ಕಡೆಗೆ ರಿಪೋರ್ಟ ಮಾಡಬೇಕು

೧೪ ಪುರಾವೆಯನ್ನು ಬರೆದಿಡುವದು— ಪ್ರತಿಯೊಂದು ನ್ಯಾಯಪಂಚಾಯತವು ಅರ್ಜಿಯ ಸಾರಾಂಶವನ್ನು, ಪ್ರತಿವಾದಿಯು ಅಥವಾ ಆರೋಪಿಯು ಕೊಟ್ಟ ಜಬಾನಿಯನ್ನು ಮತ್ತು ದಾವೆಯಲ್ಲಿ ಅಥವಾ ಖಟ್ಲೆಯಲ್ಲಿ ಕೊಡಲ್ಪಟ್ಟ ಪುರಾವೆಯನ್ನು ಒಳಗೊಂಡ, ಸದರಿ ನ್ಯಾಯಪಂಚಾಯತಿಯಿಂದ ಸುನಾವಣಿಮಾಡಲ್ಪಟ್ಟ ಪ್ರತಿಯೊಂದು ದಾವೆಯಲ್ಲಿ ಅಥವಾ ಖಟ್ಲೆಯಲ್ಲಿ ನಡಿಸಿದ ಕೆಲಸಗಳ ಟಿಪ್ಪಣಿಯನ್ನು, ಪ್ರಸಂಗವಿದ್ದಂತೆ, ದಾವೆಗಳ ರಜಿಸ್ಟರಿನಲ್ಲಿ ಅಥವಾ ಖಟ್ಲೆಗಳ ರಜಿಸ್ಟರಿನಲ್ಲಿ ಬರೆದಿಡತಕ್ಕದ್ದು

೧೫ ಕಾಗದಪತ್ರಗಳು— ಯಾವದೇ ದಾವೆಯಲ್ಲಿ ಅಥವಾ ಖಟ್ಲೆಯಲ್ಲಿ ಯಾವವೇ ಕಾಗದಪತ್ರಗಳು ಹಾಜರ ಮಾಡಲ್ಪಟ್ಟರೆ. ಆ ಸಂಬಂಧದಿಂದ ಅವುಗಳ ಮೇಲೆ ಶರಾ ಬರೆದಿಡತಕ್ಕದ್ದು, ಮತ್ತು ಪ್ರಸಂಗವಿದ್ದಂತೆ, ಅವುಗಳ ಬಗ್ಗೆ ಒಂದು ಟಿಪ್ಪಣಿಯನ್ನು ದಾವೆಗಳ ಮತ್ತು ಖಟ್ಲೆಗಳ ರಜಿಸ್ಟರಿನಲ್ಲಿ ಬರೆದಿಡತಕ್ಕದ್ದು ನ್ಯಾಯಪಂಚಾಯತವು ಇಂಥ ಕಾಗದಪತ್ರಗಳನ್ನು, ಸದರಿ ದಾವೆಯು ಅಥವಾ ನಿರ್ಣಯಿಸಲ್ಪಟ್ಟ ಬಳಿಕ, ಅವುಗಳನ್ನು ಹಾಜರ ಮಾಡಿದ ಮನುಷ್ಯನಿಗೆ ತಿರುಗಿ ಕೊಡತಕ್ಕದ್ದು.

೧೬. ನಿರ್ಣಯವನ್ನು ಬರೆದಿಡತಕ್ಕದ್ದು— ಪ್ರತಿಯೊಂದು ನ್ಯಾಯಪಂಚಾಯತವು ಪ್ರಸಂಗವಿದ್ದಂತೆ, ದಾವೆಗಳ ರಜಿಸ್ಟರಿನಲ್ಲಿ ( ನಮೂನೆ ನಂ ೨ ) ಅಥವಾ ಖಟ್ಲೆಗಳ ರಜಿಸ್ಟರಿನಲ್ಲಿ ( ನಮೂನೆ ನಂ ೩ ) ತನ್ನ ನಿರ್ಣಯವನ್ನು ಮತ್ತು ತನ್ನ ನಿರ್ಣಯದ ಬಗ್ಗೆ ಸಂಕ್ಷಿಪ್ತ ಕಾರಣಗಳನ್ನು ಬರೆದಿಡತಕ್ಕದ್ದು, ಮತ್ತು ಸದರಿ ನಿರ್ಣಯವನ್ನು ಕೊಡುವ ಸಭಾಸದರು ಅದರ ಮೇಲೆ ತಮ್ಮ ಸಹಿಗಳನ್ನು ಅಥವಾ ತಮ್ಮ ಹೆಬ್ಬಟ್ಟಿನ ಗುರ್ತುಗಳನ್ನು ಮಾಡತಕ್ಕದ್ದು ಸದರಿ ನಿರ್ಣಯವನ್ನು ಹಾಜರಿರುವ ಪಕ್ಷಕಾರರಿಗೆ ತಿಳಿಸತಕ್ಕದ್ದು ಮತ್ತು ಆ ನಂತರ ಅವರ ಸಹಿಗಳನ್ನು ಅಥವಾ ಹೆಬ್ಬಟ್ಟಿನ ಗುರ್ತುಗಳನ್ನು ಸದರಿ ರಜಿಸ್ಟರಿನಲ್ಲಿ ತೆಗೆದುಕೊಳ್ಳತಕ್ಕದ್ದು

# ನಮೂನೆ ನಂಬರು ೫.

(೧೫ ನೇ ಕಾನೂನನ್ನು ನೋಡಿರಿ)

ದಾವೆ/ಖಟ್ಲೆಯ ನಂಬರು --

ಪಕ್ಷಕಾರರ ಹೆಸರುಗಳು -

ದಾವೆಯ/ಫಿರ್ಯಾದಿಯ ಸ್ವರೂಪ - - - -

ದಾಖಲ ಮಾಡಿದ ತಾರೀಖು - - - - -

- - ನೀವು ಮೇಲಿನ

ದಾವೆ/ಖಟ್ಲೆಯಲ್ಲಿ ಪುರಾವೆಯನ್ನು ಕೊಡಲಿಕ್ಕೆ/ಕೆಳಗೆ ಹೇಳಿದ ದಸ್ತೈವಜನ್ನು ಹಾಜರ ಮಾಡಲಿಕ್ಕೆ ಫರ್ಮಾಯಿಸ

ಲ್ಪಟ್ಟಿರುವದರಿಂದ, ಲ್ಲಿ (ಸ್ಥಳ) - —— —— ——

- ದಿವಸ (ತಾರೀಖು ಮತ್ತು ವೇಳೆ) --

ನ್ಯಾಯ ಪಂಚಾಯತದ ಮುಂದೆ ಹಾಜರಾಗಲಿಕ್ಕೆ/ಮೇಲೆ ಹೇಳಿದ ದಸ್ತೈವಜನ್ನು ಹಾಜರ ಮಾಡಲಿಕ್ಕೆ

ನಿಮಗೆ ಇದರ ಮೂಲಕ ಫರ್ಮಾಯಿಸಲಾಗಿದೆ

ತಾರೀಖು

ಚೇರಮನ್ನನ ಸಹಿ

*

# ನಮೂನೆ ನಂಬರು ೩.

( ೧೧ ನೇ ಕಾನೂ ನನ್ನು ನೋಡಿರಿ. )

......................ನ್ಯಾಯಪಂಚಾಯತಿಯಲ್ಲಿ ದಾಖಲ ಮಾಡಲ್ಪಟ್ಟ ಖಟ್ಲೆಗಳ ರಜಿಸ್ಟರು.

| ಖಟ್ಲೆಯ ನಂಬರು. | ಅರ್ಜಿಯ ತಾರೀಖು. | ಫಿರ್ಯಾದಿಯ ಹೆಸರು, ವಯಸ್ಸು, ಜಾತಿ, ತಂದೆಯ ಅಥವಾ ಗಂಡನ ಹೆಸರು ಮತ್ತು ವಾಸಸ್ಥಳ; ಅವನ ಬೇಡಿಕೆಯ ಮುಖ್ಯಾಂಶ, ಅವನ ಸಹಿ ಅಥವಾ ಹೆಬ್ಬೆಟ್ಟಿನ ಗುರ್ತು ಮತ್ತು ತಾರೀಖು, ಮತ್ತು ಫೀಜಿನ ಸರಪಂಚ ಅಥವಾ ಸಭಾಸದನ ಸಹಿ ( ಕಲಮು ೬೦. ) | ಸಭೆಯ ಬಗ್ಗೆ ಗೊತ್ತು ಪಡಿಸಿದ ತಾರೀಖು. ವೇಳೆ ಮತ್ತು ಸ್ಥಳ ಕಲಮು ೬೧) | ಖಟ್ಲೆಯನ್ನು ಸುನಾವಣಿ ಮಾಡುವ ಬಗ್ಗೆ ಗೊತ್ತು ಪಡಿಸಿದ ತಾರೀಖು, ವೇಳೆ ಮತ್ತು ಸ್ಥಳ. ಕಲಮು ೬೨. ) | ಫಿರ್ಯಾದಿಯ ಹಾಗೂ ಅವನ ಸಾಕ್ಷಿದಾರರ ಹೆಸರುಗಳು ಮತ್ತು ಅವರ ಪುರಾವೆಯ ಮುಖ್ಯಾಂಶ. |
|---|---|---|---|---|---|
| ೧ | ೨ | ೩ | ೪ | ೫ | ೬ |
| | | | | | |

| ಪ್ರತಿವಾದಿಯ ಅಥವಾ ಅವನ ಪ್ರತಿನಿಧಿಯ ಹೆಸರು ವಯಸ್ಸು, ಜಾತಿ, ತಂದೆಯ ಅಥವಾ ಗಂಡನ ಹೆಸರು ಮತ್ತು ವಾಸಸ್ಥಳ ಮತ್ತು ಅವನ ಬೇಡಿಕೆಯ ಮುಖ್ಯಾಂಶ, ಅವನ ಸಹಿ ಅಥವಾ ಹೆಬ್ಬೆಟ್ಟಿನ ಗುರ್ತು ಮತ್ತು ತಾರೀಖು, ಮತ್ತು ಅವನ ಪರವಾಗಿ ಸಾಕ್ಷಿದಾರರು ಕೊಟ್ಟ ಪುರಾವೆಯ ಮುಖ್ಯಾಂಶ ಮತ್ತು ಅವರ ಹೆಸರುಗಳು. | ಸಂಕ್ಷಿಪ್ತ ಕಾರಣಗಳೊಂದಿಗೆ, ಮಾಡಲ್ಪಟ್ಟ ಹುಕುಮುಗಳು; ಹುಕುಮಿನ ತಾರೀಖು ( ಕಾನೂನು ೧೬.) | ದಂಡದ ಅಥವಾ ಲುಕ್ಸಾನ ಭರಪಾಯಿಯ ರಕಮನ್ನು ವಸೂಲು ಮಾಡಿದ್ದು ಮತ್ತು ತಾರೀಖು. ( ಕಲಮು ೮೫ ) | ಜಿಲ್ಹಾ ಮ್ಯಾಜಿಸ್ಟ್ರೇಟನಿಂದ ಮಾಡಲ್ಪಟ್ಟ ಯಾವದೇ ನಂತರದ ಹುಕುಮು. ( ಕಲಮು ೮೭. ) | ಜಿಲ್ಹಾ ಮಾಜಿಸ್ಟ್ರೇಟನು ಖಟ್ಲೆಯನ್ನು ವರ್ಗಾಯಿಸಿದ್ದು. ( ಕಲಮು ೮೭ ಬ. ) |
|---|---|---|---|---|
| ೭ | ೮ | ೯ | ೧೦ | ೧೧ |
| | | | | |

ಹುಕುಮುಗಳನ್ನು ಮಾಡುವ ನ್ಯಾಯಪಂಚಾಯತದ ಸಭಾಸದರ ಸಹಿಗಳು ಅಥವಾ ಹೆಬ್ಬೆಟ್ಟಿನ ಗುರ್ತುಗಳು

ಚೇಅರಮನ್ನನ ಸಹಿ.

ಸಮ್ಮತಿ ಕೊಡದ ನ್ಯಾಯ ಪಂಚಾಯತದ ಸಭಾಸದರ ಸಹಿಗಳು ಅಥವಾ ಹೆಬ್ಬೆಟ್ಟಿನ ಗುರ್ತುಗಳು.

೧೬ ನೇ ಕಾನೂನಿನ ಮೇರೆಗೆ ಪಕ್ಷಕಾರರ ಸಹಿಗಳು ಮತ್ತು ಹೆಬ್ಬೆಟ್ಟಿನ ಗುರ್ತುಗಳು.

# ನಮೂನೆ ನಂಬರು ೨.

(೧೧ ನೇ ಕಾನೂನನ್ನು ನೋಡಿರಿ.)

..........ನ್ಯಾಯಪಂಚಾಯತಿಯಲ್ಲಿ ದಾಖಲ ಮಾಡಲ್ಪಟ್ಟ ದಾವೆಗಳ ರಜಿಸ್ಟರು.

| ದಾವೆಯ ನಂಬರು | ಅರ್ಜಿಯ ತಾರೀಖು | ವಾದಿಯ ಹೆಸರು ವಯಸ್ಸು, ಜಾತಿ, ತಂದೆಯ ಅಥವಾ ಗಂಡನ ಹೆಸರು ಮತ್ತು ವಾಸಸ್ಥಳ; ಆವನ ಜಬಾನಿಯ ಮುಖ್ಯಾಂಶ, ಆವನ ಸಹಿ ಅಥವಾ ಹೆಬ್ಬೆಟ್ಟಿನ ಗುರ್ತು ಮತ್ತು ತಾರೀಖು ಮತ್ತು ಚೇರಮನ್ನನ ಅಥವಾ ಸಭಾಸದನ ಸಹಿ (ಕಲಮು ೬೦.) | ಸಭೆಯ ಬಗ್ಗೆ ಗೊತ್ತುಪಡಿಸಿದ ತಾರೀಖು, ವೇಳೆ ಮತ್ತು ಸ್ಥಳ (ಕಲಮು ೬೧.) | ಪುರಾವೆಯನ್ನು ಹಾಜರ ಮಾಡುವದರ ಹಾಗೂ ದಾವೆಯ ಸುನಾವಣೆ ಮಾಡುವದರ ಬಗ್ಗೆ ಗೊತ್ತುಪಡಿಸಿದ ತಾರೀಖು, ವೇಳೆ ಮತ್ತು ಸ್ಥಳ (ಕಲಮು ೬೨) | ವಾದಿಯ ಪುರಾವೆಯ ಮುಖ್ಯಾಂಶ ಮತ್ತು ಆವನ ಸಾಕ್ಷಿದಾರರ ಹೆಸರುಗಳು ಮತ್ತು ಅವರ ಪುರಾವೆಯ ಮುಖ್ಯಾಂಶ | ಪ್ರತಿವಾದಿಯ ಅಥವಾ ಆವನ ಪ್ರತಿನಿಧಿಯ ಹೆಸರು, ವಯಸ್ಸು, ತಂದೆಯ ಅಥವಾ ಗಂಡನ ಹೆಸರು ಮತ್ತು ವಾಸಸ್ಥಳ, ಆವನ ಜಬಾನಿಯ ಮುಖ್ಯಾಂಶ ಮತ್ತು ಆವನ ಸಾಕ್ಷಿದಾರರ ಹೆಸರುಗಳೊಂದಿಗೆ ಅವರ ಜಬಾನಿಯ ಮುಖ್ಯಾಂಶ | ಮಾಡಲ್ಪಟ್ಟ ಹುಕುಮನಾಮೆಯು ಅಥವಾ ಹುಕುಮು ಮತ್ತು ಆ ಬಗ್ಗೆ ಸಂಕ್ಷಿಪ್ತ ಕಾರಣಗಳು ಹಾಗೂ ಹುಕುಮನಾಮೆ ಮಾಡಲ್ಪಟ್ಟ ಯಾವದೇ ರಕಮು ಇದ್ದರೆ ಇತರ ವಿಷಯಗಳೊಂದಿಗೆ ಅಂಥ ರಕಮು ಹುಕುಮು ನಾಮೆಯ ಅಥವಾ ಹುಕುಮಿನ ತಾರೀಖು (ಕಾನೂನು ೧೬) | ಯಾವ ತಾರೀಖಿನ ದಿವಸ ಮತ್ತು ಯಾವ ರೀತಿಯಿಂದ ಹುಕುಮು ನಾಮೆಯಲ್ಲಿ ಅಥವಾ ಹುಕುಮಿನಲ್ಲಿ ಠರಾಯಿಸಿದ ಹಣವು ಪೂರ್ಣವಾಗಿಯಾಗಲಿ, ಅಂಶತಃವಾಗಿಯಾಗಲಿ ಕೊಡಲ್ಪಟ್ಟಿರುತ್ತದೆ ಅಥವಾ ಸರಿಗೊಳಿಸಲ್ಪಟ್ಟಿರುತ್ತದೆ (ಕಲಮು ೮೦) | ಜಿಲ್ಲಾ ಕೋರ್ಟಿನಿಂದ ಮಾಡಲ್ಪಟ್ಟ ಯಾವದೇ ನಂತರದ ಹುಕುಮು (ಕಲಮು ೮೭) | ಜಿಲ್ಲಾ ಕೋರ್ಟು ದಾವೆಯನ್ನು ವರ್ಗಾಯಿಸಿದ್ದು (ಕಲಮು ೮೭ ಅ.) |
|---|---|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ |
| | | | | | | | | | | |

ಹುಕುಮನಾಮೆಯನ್ನು/ಹುಕುಮನ್ನು ಮಾಡುವ ನ್ಯಾಯಪಂಚಾಯತದ ಸಭಾಸದರ ಸಹಿಗಳು ಅಥವಾ ಹೆಬ್ಬೆಟ್ಟಿನ ಗುರ್ತುಗಳು.

ಸಮ್ಮತಿ ಕೊಡದ ನ್ಯಾಯ ಪಂಚಾಯತದ ಸಭಾಸದರ ಸಹಿಗಳು ಅಥವಾ ಹೆಬ್ಬೆಟ್ಟಿನ ಗುರ್ತುಗಳು

೧೬ ನೇ ಕಾನೂನಿನ ಮೇರೆಗೆ ಪಕ್ಷಕಾರರ ಸಹಿಗಳು

ಚೇರಮನ್ನನ ಸಹಿ.

ಅಥವಾ ಹೆಬ್ಬೆಟ್ಟಿನ ಗುರ್ತುಗಳು

# ನಮೂನೆ ನಂಬರು ೧.

## ( ೧೧ ನೇ ಕಾನೂನನ್ನು ನೋಡಿರಿ )

## ನಡಿಸಿದ ಕೆಲಸಗಳ ರಜಿಸ್ಟರು

| ತಾರೀಖು.<br>೧ | ಹಾಜರಿರುವ ಸಭಾಸದರ ಹೆಸರುಗಳು<br>೨ | ಮಾಡಲ್ಪಟ್ಟ ಕೆಲಸ<br>೩ |
|---|---|---|
| | | |

## ಡ—ದಾವೆಗಳನ್ನು ದಾಖಲ ಮಾಡುವ ಬಗ್ಗೆ ಫೀಗಳು, ಸಮನುಗಳ ನಮೂನೆಗಳು, ಮುಂತಾಗಿ.

೧೭ ದಾವೆಯನ್ನು ಅಥವಾ ಖಟ್ಲೆಯನ್ನು ದಾಖಲ ಮಾಡುವ ಬಗ್ಗೆ ಫೀಗಳು—ದಾವೆಗಳನ್ನು ಅಥವಾ ಖಟ್ಲೆಗಳನ್ನು ದಾಖಲ ಮಾಡುವ ಬಗ್ಗೆ ಈ ಕೆಳಗಿನ ದರಗಳ ಪ್ರಕಾರ ಫೀಗಳನ್ನು ಆಕರಿಸತಕ್ಕದ್ದು:—

(೧) ದಾವೆಯ ಬಾಬತಿನಲ್ಲಿ ಮಾಗಣಿ ರಕಮು ಅಥವಾ ಕಿಮ್ಮತ್ತು—

(ಅ) ೧೦ ರೂಪಾಯಿಗೆ ಮೀರದಿದ್ದಾಗ .... ಎಂಟು ಆಣೆ.

(ಬ) ೧೦ ರೂಪಾಯಿಗೆ ಮೀರಿದ್ದು ೨೫ ರೂಪಾಯಿಗೆ ಮೀರದಿದ್ದಾಗ ... .... ಒಂದು ರೂಪಾಯಿ.

(ಕ) ೨೫ ರೂಪಾಯಿಗೆ ಮೀರಿದ್ದು ೫೦ ರೂಪಾಯಿಗೆ ಮೀರದಿದ್ದಾಗ ... .... ಒಂದು ರೂಪಾಯಿ ಎಂಟು ಆಣೆ

(ಡ) ೫೦ ರೂಪಾಯಿಗೆ ಮೀರಿದ್ದು ೭೫ ರೂಪಾಯಿಗೆ ಮೀರದಿದ್ದಾಗ .... .... ಎರಡು ರೂಪಾಯಿ

(ಇ) ೭೫ ರೂಪಾಯಿಗೆ ಮೀರಿದ್ದು ೧೦೦ ರೂಪಾಯಿಗೆ ಮೀರದಿದ್ದಾಗ .... .... ೨ ರೂ. ೮ ಆ.

(೨) (ಯಾವದೇ ಅಪರಾಧದ ಸಂಬಂಧದಿಂದ ಅಥವಾ ಯಾವದೇ ಪೋಟ-ಕಾಯದೆಯ ಉಲ್ಲಂಘನೆಯ ಸಂಬಂಧದಿಂದ. ಪಂಚಾಯತದ ವತಿಯಿಂದ ಅಥವಾ ತನ್ನ ಹುದ್ದೆಯ ನಾತೆಯಿಂದ ಯಾವನೊಬ್ಬ ಸರಕಾರೀ ನೌಕರನಿಂದ ದಾಖಲ ಮಾಡಲ್ಪಟ್ಟ ಖಟ್ಲೆಯಲ್ಲದ ಇತರ) ಯಾವದೇ ಖಟ್ಲೆಯ ಬಾಬತಿನಲ್ಲಿ .... .... .... ಎಂಟು ಆಣೆ

೧೮ ಸಮನುಗಳ ನಮೂನೆ ನ್ಯಾಯಪಂಚಾಯತಿಯಿಂದ ಹೊರಡಿಸಲ್ಪಟ್ಟ ಪ್ರತಿಯೊಂದು ಸಮನು ಎರಡು ಪ್ರತಿಗಳಲ್ಲಿ ಇರತಕ್ಕದ್ದು, ಮತ್ತು ಅದ ಪ್ರತಿವಾದಿಯ ಅಥವಾ ಆರೋಪಿಯ ಬಾಬತಿನಲ್ಲಿ ೪ನೇ ನಮೂನೆಯಲ್ಲಿ ಮತ್ತು ಸಾಕ್ಷಿದಾರನ ಬಾಬತಿನಲ್ಲಿ ೫ನೇ ನಮೂನೆಯಲ್ಲಿ ಇರತಕ್ಕದ್ದು.

## ನಮೂನೆ ನಂಬರು ೪.

### ಪ್ರತಿವಾದಿಗೆ ಅಥವಾ ಆರೋಪಿಗೆ ಸಮನು

ದಾವೆ/ಖಟ್ಲೆಯ ನಂಬರು ________

ಪಕ್ಷಕಾರರ ಹೆಸರುಗಳು ________

ದಾವೆ/ಫಿರ್ಯಾದಿಯ ಸ್ವರೂಪ ________

ದಾಖಲ ಮಾಡಿದ ತಾರೀಖು ________

ಈ ದಾವೆ/ಖಟ್ಲೆಯು, ________ ಲ್ಲಿ (ಸ್ಥಳ) ________

ದಿವಸ (ತಾರೀಖು ಮತ್ತು ವೇಳೆ) ________ ಗ್ರಾಮದ ಬೆಂಚಿನ ಮುಂದೆ ಸುನಾವಣೆ ಮಾಡಲ್ಪಡುವದರಿಂದ, ________

ನೀವು, ನಿಮ್ಮ ದಾವೆ/ಖಟ್ಲೆಯಲ್ಲಿ ಪ್ರತಿಪಕ್ಷನನ್ನು ನಡಿಸುವದಕ್ಕಾಗಿ, ದಸ್ತೈವಜುಗಳು ಯಾವವಾದರೂ ಇದ್ದರೆ ಅವುಗಳ ಹಾಗೂ ನಿಮ್ಮ ಸಾಕ್ಷಿದಾರರ ಸಹಿತ ಹಾಜರಾಗಬೇಕೆಂದು ಇದರ ಮೂಲಕ ನಿಮಗೆ ಫರ್ಮಾಯಿಸಲಾಗಿದೆ

ತಾರೀಖು ________ ಚೇಅರಮನ್ನನ ಸಹಿ.

# ಗ್ರಾಮ ನ್ಯಾಯಪಂಚಾಯತಿಯ ಮುಂದೆ ೧೯೫—

## ತಿಂಗಳಲ್ಲಿ ದಾಖಲ ಆದ ದಾವೇ ಮತ್ತು ಖಟ್ಲೆ

| ತಿಂಗಳಿನ ಪ್ರಾರಂಭಕ್ಕೆ ಚಾಲೂ ಇರುವ ೧ | ತಿಂಗಳಲ್ಲಿ ದಾಖಲ ಮಾಡಲ್ಪಟ್ಟವು ೨ | ತಿಂಗಳಲ್ಲಿ ನಿಕಾಲೆ ಮಾಡಲ್ಪಟ್ಟವು ೩ | ತಿಂಗಳ ಕೊನೆಗೆ ಬಾಕಿ ಉಳಿದ ೪ |
|---|---|---|---|
| | | | |
| | | | |

೧೯. ಪ್ರೊಸೆಸ್ ಫೀಗಳು— ನ್ಯಾಯಪಂಚಾಯತಿಯಿಂದ ಹೊರಡಿಸಲ್ಪಟ್ಟ ಪ್ರತಿಯೊಂದು ಸಮನ್ಸಿನ ಬಗ್ಗೆ, ಸದರಿ ಸಮನ್ಸಿನ ಅಮಲಬಜಾವಣಿಯನ್ನು ಗ್ರಾಮದೊಳಗೆ ಮಾಡತಕ್ಕದ್ದಿದ್ದಾಗ್ಗೆ, ಒಂದು ಆಣೆಯ ಫೀಯನ್ನು, ಮತ್ತು ಸದರಿ ಸಮನ್ಸಿನ ಅಮಲಬಜಾವಣಿಯನ್ನು ಗ್ರಾಮದ ಹೊರಗೆ ಮಾಡತಕ್ಕದ್ದಿದ್ದಾಗ್ಗೆ, ನಾಲ್ಕು ಆಣೆಯ ಫೀಯನ್ನು ಆಕರಿಸತಕ್ಕದ್ದು.

೨೦ ಫೀಗಳ ಬಗ್ಗೆ ಪಾವತಿ.—೧೭ನೇ ಮತ್ತು ೧೯ನೇ ಕಾನೂನುಗಳನ್ವಯ ಆಕರಣೆ ಮಾಡಲ್ಪಡತಕ್ಕ ಫೀಗಳನ್ನು ಚೇಅರಮನ್ನನಿಗೆ, ಅಥವಾ ಅವನು ಗ್ರಾಮದಿಂದ ಗೈರಹಾಜರ ಇದ್ದರೆ, ಪಂಚಾಯತದ ಸೆಕ್ರೆಟರಿಗಾಗಲಿ, ದಾವೆಗಳನ್ನು ಅಥವಾ ಖಟ್ಲೆಗಳನ್ನು ದಾಖಲ ಮಾಡುವ ಸಂಬಂಧದ ಅರ್ಜಿಗಳನ್ನು ಸ್ವೀಕರಿಸುವ ಬಗ್ಗೆ ೫ನೇ ಕಲಮಿನನ್ವಯ ನೇಮಿಸಲ್ಪಟ್ಟ ಸಭಾಸದಸಿಗಾಗಲಿ, ನಗದಾಗಿ ಕೊಡತಕ್ಕದ್ದು. ಇಂಥ ಚೇಅರಮನ್ನನು, ಸೆಕ್ರೆಟರಿಯು ಅಥವಾ ಸಭಾಸದನು, ನ್ಯಾಯಪಂಚಾಯತಿಯಿಂದ ಈ ಬಗ್ಗೆ ಸಮ್ಮತಿಸಲ್ಪಟ್ಟ ನಮೂನೆಯ ಪ್ರಕಾರ, ತನ್ನ ಕಡೆಗೆ ಕೊಡಲ್ಪಟ್ಟ ಹಣದ ಬಗ್ಗೆ ತನ್ನ ಸಹಿಯುಳ್ಳ ಒಂದು ಪಾವತಿಯನ್ನು ಕೂಡಲೆ ಕೊಡತಕ್ಕದ್ದು, ಮತ್ತು ಸದರಿ ರಕಮನ್ನು ಗ್ರಾಮದ ಫಂಡಿಗೆ ಜಮಾ ಮಾಡತಕ್ಕದ್ದು, ಮತ್ತು ಗ್ರಾಮದ ಬೆಂಚಿನ ಕ್ಯಾಶ್ ಬುಕ್ಕಿನಲ್ಲಿ ಫೀಗಳ ಸಂಬಂಧದ ಆಸನದಲ್ಲಿ ಅದನ್ನು ನಮೂದ ಮಾಡತಕ್ಕದ್ದು.

೨೧ ಸಮನ್ಸಿನ ಅಮಲಬಜಾವಣಿ ಮಾಡಿದ ಬಗ್ಗೆ ಗ್ರಾಮದ ಅಮಲದಾರರಿಗೆ ಫೀಗಳನ್ನು ಕೊಡೋಣ— ಸಮನ್ಸಿನ ಅಮಲಬಜಾವಣಿ ಮಾಡುವ ಬಗ್ಗೆ ಗ್ರಾಮದ ಅಮಲದಾರನನ್ನು ನೇಮಿಸಿದರೆ, ೧೯ನೇ ಕಾನೂನಿನನ್ವಯ ಆಕರಣಿ ಮಾಡಲ್ಪಟ್ಟ ಫೀಯನ್ನು ಇಂಥ ಅಮಲದಾರನಿಗೆ ಕೊಡತಕ್ಕದ್ದು.

## ಇ – ನಕಲುಗಳನ್ನು ಕೊಡುವದು, ಮುಂತಾಗಿ

೨೨ ರಜಿಸ್ಟರುಗಳೊಳಗಿನ ನೋಂದುಗಳ ನಕಲುಗಳನ್ನು ಕೊಡುವದು.—(೧) ದಾವೆಗಳ ರಜಿಸ್ಟರಿನಲ್ಲಿ ಅಥವಾ ಖಟ್ಲೆಗಳ ರಜಿಸ್ಟರಿನಲ್ಲಿ ಮಾಡಿದ ಯಾವದೇ ನೋಂದಿನ ನಕಲಿನ ಬಗ್ಗೆ ಮಾಡಿದ ಯಾವದೊಂದು ಅರ್ಜಿಯನ್ನು, ನ್ಯಾಯ ಪಂಚಾಯದ ಚೇಅರಮನ್ನನ ಕಡಿಗೆ, ಅಥವಾ ಅವನು ಗೈರಹಾಜರಿದ್ದಾಗ, ನ್ಯಾಯ ಪಂಚಾಯತದ ಸೆಕ್ರೆಟರಿಯ ಕಡೆಗಾಗಲಿ, ದಾವೆಗಳನ್ನು ಅಥವಾ ಖಟ್ಲೆಗಳನ್ನು ದಾಖಲಮಾಡಿಕೊಳ್ಳುವ ಸಂಬಂಧದ ಅರ್ಜಿಗಳನ್ನು ಸ್ವೀಕರಿಸಲಿಕ್ಕೆ ೫ನೇ ಕಲಮಿನನ್ವಯ ನೇಮಿಸಲ್ಪಟ್ಟ ಸಭಾಸದನ ಕಡೆಗಾಗಲಿ ಮಾಡತಕ್ಕದ್ದು ಇಂಥ ಪ್ರತಿಯೊಂದು ನಕಲನ್ನು, ಅರ್ಜಿಯು ಮುಟ್ಟಿದ ತಾರೀಖಿನಿಂದ ಒಂದು ವಾರದೊಳಗಾಗಿ

ಕೊಡತಕ್ಕದ್ದು ಇಂಥ ಪ್ರತಿಯೊಂದು ನಕಲಿನ ಬಗ್ಗೆ ನಾಲ್ಕು ಆಣೆಯ ಫೀಯನ್ನು ಕೊಡತಕ್ಕದ್ದು.

(೨) ನ್ಯಾಯಪಂಚಾಯತದ ಚೇರಮನ್ನನು ಸದರಿ ನಕಲನ್ನು ಸ್ವತಃ ಮಾಡತಕ್ಕದ್ದು ಅಥವಾ ಅವನು ಅದನ್ನು ಪಂಚಾಯತದ ಸೆಕ್ರೆಟರಿಯ ಕಡೆಯಿಂದಾಗಲಿ, ಗ್ರಾಮದ ತಲಾಟಿಯ ಕಡೆಯಿಂದಾಗಲಿ, ಶಾಲೆಯ ಶಿಕ್ಷಕನ ಕಡೆಯಿಂದಾಗಲಿ, ಇತರ ಯಾವನೇ ಓದುಬರಹಬಲ್ಲ ಮನುಷ್ಯನ ಕಡೆಯಿಂದಾಗಲಿ ಮಾಡಿಸತಕ್ಕದ್ದು. ಚೇರಮನ್ನನು ಪ್ರತಿಯೊಂದು ನಕಲನ್ನು ರಜಿಸ್ಟರದೊಂದಿಗೆ ಸರಿ ನೋಡತಕ್ಕದ್ದು ಮತ್ತು ಅದು ನಿಜವಾದ ನಕಲು ಇರುತ್ತದೆಂಬ ಬಗ್ಗೆ ದಾಖಲೆ ಕೊಡತಕ್ಕದ್ದು.

(೩) (೧) ನೇ ಪೋಟ-ಕಾನೂನಿನನ್ವಯ ತೆಗೆದುಕೊಂಡ ನಕಲು ಮಾಡುವ ಫೀಯ ಅರ್ಧದಷ್ಟು ರಕಮನ್ನು ನಕಲು ಮಾಡುವ ಮನುಷ್ಯನಿಗೆ ಕೊಡತಕ್ಕದ್ದು ಮತ್ತು ಉಳಿದದ್ದನ್ನು ಗ್ರಾಮದ ಫಂಡಿಗೆ ಜಮಾ ಮಾಡತಕ್ಕದ್ದು.

## ಫ— ಕಿರಕೋಳ

೨೩ ದಂಡ, ಲುಕ್ಸಾನ ಭರಸಾಯಿ ಮುಂತಾದ್ದನ್ನು ಕೊಡೋಣ ಮತ್ತು ಅದರ ಬಗ್ಗೆ ಪಾವತಿ— ಯಾವದೊಂದು ನ್ಯಾಯಪಂಚಾಯತಿಯ ಹುಕುಮಿನನ್ವಯ ಅಥವಾ ಹುಕುಮನಾಮೆಯನ್ವಯ ದಂಡದ ಸಂಬಂಧದಿಂದ ಲುಕ್ಸಾನ ಭರಪಾಯಿಯ ಸಂಬಂಧದಿಂದ ಅಥವಾ ಇತರ ಕಾರಣದ ಮೂಲಕ ಯಾವದೇ ರಕಮನ್ನು ಕೊಡಲಿಕ್ಕೆ ಪಾತ್ರನಿರುವ ಪ್ರತಿಯೊಬ್ಬ ಮನುಷ್ಯನು, ಇಂಥ ರಕಮನ್ನು ನ್ಯಾಯಪಂಚಾಯತಿಯ ಚೇರಮನ್ನನ ಕಡೆಗೆ, ಅಥವಾ ಗ್ರಾಮದಿಂದ ಗೈರಹಾಜರ ಇದ್ದರೆ, ಪಂಚಾಯತದ ಸೆಕ್ರೆಟರಿಯ ಕಡೆಗಾಗಲಿ, ದಾವೆಗಳನ್ನು ಅಥವಾ ಖಟ್ಲೆಗಳನ್ನು ದಾಖಲ ಮಾಡುವ ಸಂಬಂಧದ ಅರ್ಜಿಗಳನ್ನು ಸ್ವೀಕರಿಸುವ ಬಗ್ಗೆ ೫೯ ನೇ ಕಲಮಿನನ್ವಯ ನೇಮಿಸಲ್ಪಟ್ಟ ಸಭಾಸದನ ಕಡೆಗಾಗಲಿ ಕೊಡತಕ್ಕದ್ದು. ಇಂಥ ಚೇರಮನ್ನನು, ಸೆಕ್ರೆಟರಿಯು ಅಥವಾ ಸಭಾಸದನು, ಸದರಿ ಆಕ್ಟಿನ ೧೦೮ ನೇ ಕಲಮಿನ (೨) ನೇ ಪೋಟ-ಕಲಮಿನ (ಫ) ರಕಮಿನನ್ವಯ ಮಾಡಲ್ಪಟ್ಟ ಕಾನೂನುಗಳನ್ವಯ ಗ್ರಾಮಪಂಚಾಯತದ ಲೆಕ್ಕಗಳ ಬಾಬತಿನಲ್ಲಿ ಗೊತ್ತುಪಡಿಸಿದ "ಸಾಮಾನ್ಯ ಪಾವತಿಯು" ಎಂಬ ನಮೂನೆಯ ಪ್ರಕಾರ, ಹೀಗೆ ತೆಗೆದುಕೊಂಡ ರಕಮಿನ ಬಗ್ಗೆ ಒಂದು ಪಾವತಿಯನ್ನು ಕೊಡತಕ್ಕದ್ದು. ನ್ಯಾಯಪಂಚಾಯತಿಯ ಯಾವದೊಂದು ಹುಕುಮಿನನ್ವಯ ಅಥವಾ ಹುಕುಮನಾಮೆಯನ್ವಯ ಯಾವನೇ ಮನುಷ್ಯನಿಗೆ ಯಾವದೇ ರಕಮನ್ನು ಕೊಟ್ಟ್ಯಾಗ್ಗೆ, ನ್ಯಾಯಪಂಚಾಯತಿಯಿಂದ

ಸಮ್ಮತಿಸಲ್ಪಡಬಹುದಾದಂಥ ನಮೂನೆಯಲ್ಲಿ, ಇಂಥ ಮನುಷ್ಯನ ಕಡೆಯಿಂದ, ಹೀಗೆ ಕೊಟ್ಟ ರಕಮಿನ ಬಗ್ಗೆ ಒಂದು ಪಾವತಿಯನ್ನು ಪಡೆಯತಕ್ಕದ್ದು.

೨೪ ದಾವೆಗಳಲ್ಲಿಯ ವೆಚ್ಚವು — ಹಣದ ವಿಷಯದ ದಾವೆಗಳಲ್ಲಿ ವೆಚ್ಚಗಳ ಬಗ್ಗೆ ಮಾಡಲ್ಪಡುವ ಹುಕುಮು, ಸದರಿ ದಾವೆಯ ಪರಿಣಾಮವನ್ನನುಸರಿಸ ತಕ್ಕದ್ದು, ಮತ್ತು ಇಂಥ ವೆಚ್ಚಗಳಲ್ಲಿ, ೧೭ ನೇ ಹಾಗೂ ೧೯ ನೇ ಕಾನೂನು ಗಳನ್ವಯ ಕೊಡಲ್ಪಟ್ಟ ಫೀಗಳು ಮತ್ತು ಸಾಕ್ಷಿದಾರರ ಬಗ್ಗೆ ಉಂಟಾದ ಯಾವ ವೆಚ್ಚಗಳ ಭಾಗವನ್ನು ಕೊಡುವದು ವಾಜವಿಯೆಂದು ನ್ಯಾಯಪಂಚಾಯತಿಗೆ ತೋರು ವದೋ ಅಂಥ ೬೭ನೇ ಕಲಮಿನ (೩) ನೇ ಪೋಟ-ಕಲಮಿನನ್ವಯ ಉಂಟಾದ ವೆಚ್ಚಗಳ ಭಾಗವು ಸಮಾವೇಶವಾಗತಕ್ಕದ್ದು.

**೩೭ 'ಅ. ನ್ಯಾಯಪಂಚಾಯತಿಯ ಚೇಅರಮನ್ನನು – ಪ್ರತಿಯೊಂದು ನ್ಯಾಯಪಂಚಾಯತಿಗೆ ಒಬ್ಬ ಚೇಅರಮನ್ನನಿರತಕ್ಕದ್ದು. ನ್ಯಾಯಪಂಚಾ ಯತಿಯ ಚೇಅರಮನ್ನನು ನ್ಯಾಯಪಂಚಾಯತಿಯ ಸಭಾಸದರೊಳಗಿಂದ ಸದರಿ ನ್ಯಾಯಪಂಚಾಯತಿಯಿಂದ ಆರಿಸಲ್ಪಟ್ಟ ಮನುಷ್ಯನಾಗಿರಬೇಕು ಮತ್ತು ಇಂಥ ನ್ಯಾಯಪಂಚಾಯತಿಯ ಚೆಅರಮನ್ನನ ಹುದ್ದೆಯ ಅವಧಿಯು ಸದರಿ ನ್ಯಾಯಪಂಚಾಯತಿಯ ಹುದ್ದೆಯ ಅವಧಿಯಷ್ಟಿರತಕ್ಕದ್ದು.**

**೩೭ ಬ. ಪಂಚಾಯತದ ಜ್ಯುಡಿಶಿಯಲ್ ಕಾರಕೂನನು—ಪಂಚಾ ಯತದ ಸೆಕ್ರೆಟರಿಯು, ಪಂಚಾಯತದ ಮುಂದೆ ನಡೆದ ಕೆಲಸಗಳನ್ನು ಮತ್ತು ಅದರ ನಿರ್ಣಯಗಳನ್ನು ನಮೂದ ಮಾಡುವ ಮತ್ತು ಠರಾಯಿಸ ಲ್ಪಡಬಹುದಾದಂಥ ಇತರ ಕರ್ತವ್ಯಗಳನ್ನು ಮಾಡುವ ಕಾರಣದ ಸಲುವಾಗಿ, ನ್ಯಾಯಪಂಚಾಯತಿಯ ಜ್ಯುಡಿಶಿಯಲ್ ಕಾರಕೂನನೆಂದು ಕೆಲಸ ಮಾಡತಕ್ಕದ್ದು.**

## ಪಂಚಾಯತಿಯ ಸೆಕ್ರೆಟರಿಯು ಆ ಪಂಚಾಯತಿಯ ಜ್ಯೂಡಿಶಿಅಲ್ ಕಾರಕೂನನೆಂದು ಕೆಲಸ ಮಾಡುವಾಗ ಮಾಡತಕ್ಕ ಕರ್ತವ್ಯಗಳನ್ನು ಠರಾಯಿಸಿದ್ದ ನಿಯಮಗಳು

[ ನಂ ಎಸ್. ೧೭೪-೧೧/೧ ತಾ ೧೯-೧-೪೦ ]

ನ್ಯಾಯ ಪಂಚಾಯತಿಯ ಜ್ಯುಡಿಶಿಯಲ್ ಕಾರಕೂನನೆಂದು ಬದಲಿ ಕೆಲಸ ಮಾಡುವ ಯಾವದೊಂದು ಪಂಚಾಯತದ ಕಾರ್ಯದರ್ಶಿಯು ಈ ಕೆಳಗಿನ ಕರ್ತವ್ಯಗಳನ್ನು ಮಾಡತಕ್ಕದ್ದು, ಅಂದರೆ.—

(ಅ) ಅವನು, ನ್ಯಾಯ ಪಂಚಾಯತಿಯಿಂದ ದಾಖಲ ಮಾಡಿಕೊಳ್ಳಲ್ಪಟ್ಟ, ಸುನಾವಣಿ ಮಾಡಲ್ಪಟ್ಟ ಅಥವಾ ನಿರ್ಣಯಿಸಲ್ಪಟ್ಟ ದಾವೆಗಳ

ಹಾಗೂ ವ್ಯವಹರಣೆಗಳ ಮತ್ತು ಖಟ್ಲೆಗಳ ರಜಿಸ್ಟರುಗಳನ್ನು, ಸನ್ ೧೯೩೪ನೇ ಇಸವಿಯ ನ್ಯಾಯ ಪಂಚಾಯತಿಯ ವಿಷಯದ ಕಾನೂನುಗಳಿಂದ ಗೊತ್ತುಪಡಿಸಲ್ಪಟ್ಟ ನಮೂನೆಯಲ್ಲಿ ಇಡತಕ್ಕದ್ದು.

* ರಜಿಸ್ಟರದ ನಮೂನೆಗಳು ೧೧೪—೧೧೫, ೧೧೬--೧೧೭, ಮತ್ತು ೧೧೮ ಪಾನುಗಳ ಮೇಲೆ ಕೊಟ್ಟವೆ.

(ಬ) ಆವನು—

(೧) ಸದರಿ ಆಕ್ಟಿನ ೪೫ನೇ, ೪೬ನೇ ಅಥವಾ ೪೮ನೇ ಕಲಮಿನನ್ವಯ ದಂಡಗಳೆಂದು ಅಥವಾ ಲುಕ್ಸಾನ ಭರಪಾಯಿಯೆಂದು ವಸೂಲ ಮಾಡಲ್ಪಟ್ಟ ಯಾವತ್ತು ರಕಮುಗಳನ್ನು ;

(೨) ಗ್ರಾಮದ ಫಂಡಿಗೆ ಜಮಾ ಮಾಡಲ್ಪಡುವದಕ್ಕಾಗಿ ಯಾವದೊಂದು ಕೋರ್ಟಿನಿಂದ ಹುಕುಮು ಮಾಡಲ್ಪಟ್ಟ ಇತರ ಯಾವತ್ತು ರಕಮುಗಳನ್ನು :

(೩) ಸದರಿ ಆಕ್ಟಿನ ೫೯ ನೇ ಕಲಮಿನನ್ವಯ ದಾವೆಗಳನ್ನು ಹಾಗೂ ಖಟ್ಲೆಗಳನ್ನು ದಾಖಲ ಮಾಡುವ ಬಗ್ಗೆ ಹೊರಿಸಲಾದ ಫೀಗಳನ್ನು; ಮತ್ತು

(೪) ತನ್ನ ಜುಡಿಶಿಯಲ್ ಕೆಲಸದ ಸಂಬಂಧದಿಂದ ನ್ಯಾಯಪಂಚಾಯತಿಗೆ ತಗಲಿದ ವೆಚ್ಚವನ್ನು

ಗ್ರಾಮಪಂಚಾಯತಕ್ಕೆ, ಆದರ ಲೆಕ್ಕಗಳೊಳಗೆ ಸೇರಿಸುವದಕ್ಕಾಗಿ, ಕಳಿಸಿಕೊಡತಕ್ಕದ್ದು.

(ಕ) ಆವನು ನ್ಯಾಯಪಂಚಾಯತದ ಹುಕುಮುಗಳನ್ನು ಬಜಾಯಿಸತಕ್ಕದ್ದು.

(ಡ) ಆವನು, ನ್ಯಾಯಪಂಚಾಯತ ಕಾರ್ಯಗಳ ಸಂಬಂಧದಿಂದ, ಪ್ರಾಂತಿಕ ಸರಕಾರದವರು ಅಥವಾ ನ್ಯಾಯಪಂಚಾಯತಿಯು ಆವನ ಕಡೆಗೆ ಒಪ್ಪಿಸಿಕೊಡಬಹುದಾದ ಇತರ ಕರ್ತವ್ಯಗಳನ್ನು ಮಾಡತಕ್ಕದ್ದು.

**೩೭ ಕ. ನ್ಯಾಯಪಂಚಾಯತಿಯೊಳಗಿಂದ ಯಾವನೊಬ್ಬ ಸಭಾಸದನನ್ನು ತೆಗೆದು ಹಾಕುವದು:—**

**(೧) ಪ್ರಾಂತಿಕ ಸರಕಾರದವರು, ತಮಗೆ ಯೋಗ್ಯ ಕಂಡರೆ, ಯಾವದೊಂದು ನ್ಯಾಯಪಂಚಾಯತಿಗೆ ಚುನಾಯಿಸಲ್ಪಟ್ಟ ಯಾವನೇ ಸಭಾಸದನನ್ನು, ಇಂಥ ಸಭಾಸದನು ತನ್ನ ಕರ್ತವ್ಯಗಳನ್ನು ನೆರವೇರಿಸುವದರಲ್ಲಿ ದುರ್ನಡತೆಯನ್ನನುಸರಿಸಿರುವನೆಂದು ಅಥವಾ ಯಾವದೇ ನಾಚಿಕೆಗೇಡಿತನದ ರೀತಿಯಿಂದ ಅಥವಾ**

ತಾತ್ಸಾರದಿಂದ ವರ್ತಿಸಿರುವನೆಂದು ಅಥವಾ ನ್ಯಾಯಪಂಚಾಯತಿಯ ಸಭಾಸದನೆಂದು ತನ್ನ ಕರ್ತವ್ಯಗಳ ಪೈಕಿ ಯಾವದೇ ಕರ್ತವ್ಯವನ್ನು ಮಾಡಲಿಕ್ಕೆ ನಾಕಾರಿಸುತ್ತಾನೆಂದು ಅಥವಾ ಅಸಮರ್ಥನಾಗಿರುವನೆಂದು ಪ್ರಾಂತಿಕ ಸರಕಾರದವರು ಅಭಿಪ್ರಾಯಪಟ್ಟರೆ. ಅವನಿಗೆ ತನ್ನ ಹೇಳಿಕೆಯನ್ನು ಹೇಳುವದಕ್ಕೆ ಸಂಧಿಯನ್ನು ಕೊಟ್ಟ ನಂತರ ಮತ್ತು ಪ್ರಾಂತಿಕ ಸರಕಾರದವರಿಗೆ ಅವಶ್ಯತೋರುವ ಚೌಕಶಿಯು ಮಾಡಲ್ಪಟ್ಟ ನಂತರ, ತೆಗೆದು ಹಾಕಬಹುದು.

(೨) (೧)ನೇ ಪೋಟ-ಕಲಮಿನನ್ವಯ ಯಾವದಾದರೂ ಚೌಕಶಿಯು ನಡಿಸಲ್ಪಟ್ಟರೆ, ಪ್ರಾಂತಿಕ ಸರಕಾರದವರು, ತಮಗೆ ಯೋಗ್ಯ ತೋರುವಂಥ ಅವಧಿಯವರೆಗೆ, ನ್ಯಾಯಪಂಚಾಯತಿಯ ಸಭಾಸದನ ಹುದ್ದೆಯಿಂದ ಇಂಥ ಸಭಾಸದನನ್ನು ಸಸ್ಪೆಂಡ ಮಾಡಬಹುದು.

(೩) ಪೋಟ-ಕಲಮು (೧) ಅಥವಾ (೨)ರನ್ವಯ ಇಂಥ ಸಭಾಸದನನ್ನು ತೆಗೆದು ಹಾಕಿದ ಅಥವಾ ಸಸ್ಪೆಂಡ ಮಾಡಿದ ಸಂಗತಿಯು ಮೇಲಿಂದಲೇ ಅವನು ಪಂಚಾಯತದ ಸಭಾಸದನಾಗಿ ಉಳಿಯುವದಕ್ಕೆ ನಾಲಾಯಖನಾಗಲಾರನು

(೪) (೧)ನೇ ಪೋಟ-ಕಲಮಿನನ್ವಯ ನ್ಯಾಯಪಂಚಾಯತಿಯೊಳಗಿಂದ ತೆಗೆದು ಹಾಕಲ್ಪಟ್ಟ ಯಾವನೊಬ್ಬ ಮನುಷ್ಯನು ಇಂಥ ನ್ಯಾಯಪಂಚಾಯತಿಯ ಮೇಲೆ ಪುನಃ ಚುನಾಯಿಸಲ್ಪಡಲಿಕ್ಕೆ ಲಾಯಖನಾಗಲಾರನು"

೩೮. ಬಾಕಿ ಇರುವ ವ್ಯವಹರಣೆಗಳ ಬಚಾವು.- ಯಾವದೇ ಕೋರ್ಟಿನಲ್ಲಿ ಬಾಕಿ ಇರುವ ಮತ್ತು ೩೭ ನೇ ಕಲಮಿನನ್ವಯ ಅಧಿಕಾರ ಪಡೆದ ನ್ಯಾಯಪಂಚಾಯತಿಯಿಂದ ಹಿಡಿಯಲ್ಪಡಬಹುದಾದ ೩೯ನೇ ಅಥವಾ ೪೧ನೇ ಕಲಮಿನಲ್ಲಿ ನಮೂದಿಸಿದ ಸ್ವರೂಪದ ಪ್ರತಿಯೊಂದು ದಾವೆಯು ಅಥವಾ ಖಟ್ಲೆಯು ಮತ್ತು ಇಂಥ ಯಾವದೇ ದಾವೆ ಅಥವಾ ಖಟ್ಲೆಯಿಂದ ಹುಟ್ಟುವ ಮತ್ತು ಅದಕ್ಕೆ ಆನುಷಂಗಿಕವಾದ ಯಾವತ್ತು ವ್ಯವಹರಣೆಗಳು, ಇಂಥ ಕೋರ್ಟಿನಿಂದ ಅಥವಾ ಅದರ ಇನಸಾಫು ಮಾಡಲಿಕ್ಕೆ, ಅದರ ಸುನಾವಣಿ ಮಾಡಲಿಕ್ಕೆ ಮತ್ತು ಅದರ ತೀರ್ಮಾನ ಮಾಡಲಿಕ್ಕೆ ಅಧಿಕಾರವಿರುವ ಇತರ ಯಾವದೇ ಕೋರ್ಟಿನಿಂದ, ಈ ಆಕ್ಟು ಪಾಸುಮಾಡಲ್ಪಟ್ಟರದಿದ್ದರೆ ಹ್ಯಾಗೋ

ಹಾಗೆಯೇ, ಇನಸಾಫು ಮಾಡಲ್ಪಡಬೇಕು, ಸುನಾವಣಿ ಮಾಡಲ್ಪಡಬೇಕು ಮತ್ತು ತೀರ್ಮಾನ ಮಾಡಲ್ಪಡಬೇಕು.

೩೯. ನ್ಯಾಯಪಂಚಾಯತಿಯಿಂದ ಇನಸಾಫು ಮಾಡಲ್ಪಡಬಹುದಾದ ದಾವೆಗಳು – (೧) ೪೦ ನೇ ಕಲಮಿನಲ್ಲಿ ಇತರ ರೀತಿಯಿಂದ ಠರಾಯಿಸಿದ್ದನ್ನು ಹೊರ್ತುಪಡಿಸಿ, ಈ ಕೆಳಗಿನ ಎಲ್ಲ ದಾವೆಗಳ ಅಥವಾ ಅವುಗಳ ಪೈಕಿ ಯಾವವಾದರೂ ದಾವೆಗಳ ;

(ಅ) ಸ್ಥಾವರಾಸ್ತಿಯೊಳಗಿನ ಯಾವದೇ ಹಿತಸಂಬಂಧಕ್ಕೆ ಸಂಬಂಧಿಸದ, ಕರಾರುಗಳ ಮೇಲಿಂದ ಸಲ್ಲಬೇಕಾದ ಹಣದ ವಿಷಯದ ದಾವೆಗಳ ;

(ಬ) ಜಂಗಮ ಆಸ್ತಿಯನ್ನು ತಿರಿಗಿ ತೆಗೆದುಕೊಳ್ಳುವ ಅಥವಾ ಅಂಥ ಆಸ್ತಿಯ ಬೆಲೆಯ ವಿಷಯದ ದಾವೆಗಳ ;

(ಕ) ಜಂಗಮ ಆಸ್ತಿಯನ್ನು ಅನ್ಯಾಯವಾಗಿ ತೆಗೆದುಕೊಂಡ ಮತ್ತು ಅದಕ್ಕೆ ಹಾನಿಮಾಡಿದ ಬಗ್ಗೆ ಲುಕ್ಸಾನ ಭರಪಾಯಿ ಪಡೆಯಲಿಕ್ಕೆ ಮಾಡಿದ ದಾವೆಗಳ

ಇನಸಾಫವನ್ನು, ದಾವೆಯ ರಕಮು ಅಥವಾ ಕಿಮ್ಮತ್ತು ಇಪ್ಪತ್ತೈದು ರೂಪಾಯಿಗಳಿಗೆ ಮೀರದಿದ್ದ ಸಂಗತಿಯಲ್ಲಿ, ಮಾಡುವ ಅಧಿಕಾರವು ಯಾವದೊಂದು ನ್ಯಾಯಪಂಚಾಯತಿಗೆ ೩೭ ನೇ ಕಲಮಿನನ್ವಯ ಕೊಡಲ್ಪಡಬಹುದು.

(೨) ನ್ಯಾಯಪಂಚಾಯತಿಯ ಮುಂದೆ ಬರದಿಡಲ್ಪಟ್ಟ ಇಬ್ಬರು ಪಕ್ಷಕಾರರ ಲೇಖೀ ಸಮ್ಮತಿಯಿಂದ (೧)ನೇ ಪೋಟ-ಕಲಮಿನಲ್ಲಿ ವಿವರಿಸಲ್ಪಟ್ಟ ಸ್ವರೂಪದ ಯಾವ ದಾವೆಗಳ ಕಿಮ್ಮತ್ತು ನೂರು ರೂಪಾಯಿಗೆ ಮೀರುವದಿಲ್ಲವೋ ಅಂಥ ದಾವೆಗಳು ಇಂಥ ನ್ಯಾಯಪಂಚಾಯತಿಯಿಂದ ಇನಸಾಫು ಮಾಡಲ್ಪಡಬೇಕು

(೩) ಪ್ರಾಂತಿಕ ಸರಕಾರದವರು ಸರಕಾರೀ ಗೆಝೇಟಿನಲ್ಲಿ ಜಾಹೀರನಾಮೆ ಕೊಟ್ಟು, (೧)ನೇ ಪೋಟ-ಕಲಮಿನಲ್ಲಿ ವಿವರಿಸಿದ ಸ್ವರೂಪದ ಯಾವದೆ ದಾವೆಯ ಇನಸಾಫನ್ನು, ನೂರು ರೂಪಾಯಿಗೆ ಮೀರಿದ ಸದರಿ ಜಾಹೀರನಾಮೆಯಲ್ಲಿ ನಮೂದಿಸಲ್ಪಡಬಹುದಾದ ಕಿಮ್ಮತ್ತಿನ ವರೆಗೆ, ಸದರಿ ನ್ಯಾಯಪಂಚಾಯತಿಯು ಮಾಡಬಹುದೆಂದು ನಿರ್ಧರಿಸಬಹುದು

೪೦. ನ್ಯಾಯಪಂಚಾಯತಿಯು ಇನಸಾಫು ಮಾಡಬಾರದಾಗಿರುವ ದಾವೆಗಳು ಯಾವದೇ ದಾವೆಯು—

(೧) ಪಾಲುಗಾರಿಕೆಯ ಲೆಖ್ಖದ ಶಿಲುಕಿನ ಮೇಲೆ ;

(೨) ಮೃತ್ಯುಪತ್ರ ಮಾಡದೆ ಉಂಟಾದ ಮರಣದನ್ವಯದ ಹಿಸ್ಸೆಯ ಅಥವಾ ಹಿಸ್ಸೆಯ ಭಾಗದ ಬಗ್ಗೆ ಅಥವಾ ಯಾವದೊಂದು ಮೃತ್ಯುಪತ್ರದ ಮೇಲಿಂದ ಬರುವ ಆಸ್ತಿಯ ಬಗ್ಗೆ ಅಥವಾ ಆಸ್ತಿಯ ಭಾಗದ ಬಗ್ಗೆ ;

(೩) ಕ್ರೌನು, ಯಾವದೇ ಸ್ಥಾನಿಕ ಸರಕಾರೀ ಸಂಘ, ಕ್ರೌನದ ಯಾವನೇ ಅಮಲದಾರ ಅಥವಾ ನೌಕರ ಅಥವಾ ತನ್ನ ಹುದ್ದೆಯ ಕೆಲಸವನ್ನು ಮಾಡುತ್ತಿರುವ ಸ್ಥಾನಿಕ ಅಧಿಕಾರೀ ಸಂಘದ ಯಾವನೊಬ್ಬ ಅಮಲದಾರ, ಸಭಾಸದ ಅಥವಾ ನೌಕರ, ಇವರಿಂದ ಅಥವಾ ಇವರ ವಿರುದ್ಧ ;

(೪) ಯಾವನೊಬ್ಬ ಅಲ್ಪವಯಸ್ಕ ಅಥವಾ ಭ್ರಮಿಷ್ಟ ಮನುಷ್ಯ ಇವನಿಂದ ಅಥವಾ ಇವನ ವಿರುದ್ಧ ; ಮತ್ತು

(೫) ಮುಲ್ಕೀ ಕೋರ್ಟಿನಿಂದ ತೀರಿಸಲ್ಪಡಬಹುದಾದ ಯಾವದೇ ದಾವೆಯ ಅಥವಾ ಅರ್ಜಿಯ ಸಂಬಂಧದ ಯಾವದೇ ವಿವಾದದ ಅಥವಾ ಸಂಗತಿಯ ಬಗ್ಗೆ

ಯಾವದೇ ನ್ಯಾಯಪಂಚಾಯತಿಯ ಮುಂದೆ ತರಲ್ಪಡಬಾರದು.

೪೧ ನ್ಯಾಯಪಂಚಾಯತಿಗಳು ಹಿಡಿಯಬಹುದಾದ ಅಪರಾಧಗಳು— ಈ ಕೆಳಗಿನ ಯಾವತ್ತು ಅಪರಾಧಗಳನ್ನು ಅಥವಾ ಯಾವವಾದರೂ ಅಪರಾಧಗಳನ್ನು ಹಿಡಿಯುವ ಮತ್ತು ಇನ್‌ಸಾಫು ಮಾಡುವ ಅಧಿಕಾರವನ್ನು ೩೭ ನೇ ಕಲಮಿನನ್ವಯ ನ್ಯಾಯಪಂಚಾಯತಿಗಳಿಗೆ ಕೊಡಬಹುದು, ಅಂದರೆ —

(ಅ) ಹಿಂದುಸ್ಥಾನದ ಅಪರಾಧಿಗಳಿಗೆ ಶಿಕ್ಷೆ ಮಾಡುವ ಕಾಯದೆಯನ್ವಯ—

| | | ಕಲಮು |
|---|---|---|
| ೧ | ಜೀವಕ್ಕೆ ಅಪಾಯವಾಗುವ ಯಾವದಾದರೂ ರೋಗದ ಸೋಂಕನ್ನು ಹಬ್ಬಿಸುವ ಸಂಭವವಿದ್ದಂಥ ಯಾವದಾದರೂ ಕೃತ್ಯವನ್ನು ತಾತ್ಸಾರದಿಂದ ಮಾಡೋಣ .. | ೨೬೯ |
| ೨ | ಎಲ್ಲ ಜನರು ಉಪಯೋಗಿಸುವಂಥ ಸೆಲೆ ಅಥವಾ ಜಲಾಶಯದ ನೀರು ಕೆಡಿಸೋಣ ... ... | ೨೭೭ |
| ೩. | ಜನರು ಹೋಗಿಬರುವ ದಾರಿಯಲ್ಲಿ ಅಪಾಯ ಅಟ್ಟ ಅಥವಾ ಹಾನಿ ಮಾಡೋಣ ... | ೨೮೩ |

೪. ಮನೋಇಚ್ಛೆಯಾಗಿ ಶರೀರಕ್ಕೆ ದುಃಖಪಡಿಸೋಣ ३२३

೫. ಅಕಸ್ಮಾತ್ತಾಗಿ ಭಾರಿ ರೋಷವು ತುಂಬುವಂತೆ ಕೆಣಕಲ್ಪಡದೆ ಮೈಮೇಲೆ ಬೀಳೋಣ ಅಥವಾ ದಂಡಣೀಯ ಬಲಾತ್ಕಾರ ಮಾಡೋಣ .... .... ३५२

೬ ಅಕಸ್ಮಾತ್ತಾಗಿ ಭಾರಿ ರೋಷವು ತುಂಬುವಂತೆ ಕೆಣಕಿದ್ದರಿಂದ ಮೈಮೇಲೆ ಬೀಳೋಣ ಅಥವಾ ದಂಡಣೀಯ ಬಲಾತ್ಕಾರ ಮಾಡೋಣ .... .... ३५८

೭. ಕಳವು, ಕಳವು ಮಾಡಿದ ಮಾಲಿನ ಬೆಲೆಯು ೨೦ ರೂಪಾಯಿಗೆ ಮೀರದಿದ್ದಲ್ಲಿ .... .... .... ३७९

೮ ನಷ್ಟ ಮಾಡೋಣ, ಮಾಡಲ್ಪಟ್ಟ ನಷ್ಟ, ಅಥವಾ ಲುಕ್ಸಾನಿನ ಬೆಲೆಯು ೨೦ ರೂಪಾಯಿಗೆ ಮೀರದಿದ್ದಲ್ಲಿ ४२६

೯ ದಂಡಣೀಯ ಅತಿಕ್ರಮಣ.... .... .... .... ४४७

೧೦ ಮನೆಯ ಅತಿಕ್ರಮಣ .... .... .... .... ४४८

೧೧ ಮಾಲು ಇದ್ದಂಥ ಅಥವಾ ಮಾಲು ಇದೆಯೆಂದು ತಿಳಿದಂಥ ಯಾವದೇ ಬಂದಮಾಡಿದ ಪಾತ್ರೆಯನ್ನು ಅಪ್ರಮಾಣಿಕತನದಿಂದ ಒಡೆಯೋಣ ಅಥವಾ ತೆರೆಯೋಣ ४६१

೧೨ ಕೆಣಕಿ ಶಾಂತತೆಗೆ ಭಂಗತರುವ ಉದ್ದೇಶದಿಂದ ಬುದ್ಧಿಪೂರ್ವಕ ಅವಮಾನ ಮಾಡೋಣ .... ५०४

(ಬ) ಸನ್ ೧೮೭೧ನೇ ಇಸವಿಯ ದನಗಳ ಅತಿಕ್ರಮಣದ ವಿಷಯದ ಆಕ್ಟಿನನ್ವಯ ದನಗಳನ್ನು ಹಿಡಿಯುವ ಕೆಲಸಕ್ಕೆ ಜಬರಿಯಿಂದ ಹರಕತು ಮಾಡೋಣ ಅಥವಾ ಅವುಗಳನ್ನು ಬಿಡಿಸೋಣ. २४

(ಕ) ಈ ಆಕ್ಟಿನನ್ವಯ ಶಿಕ್ಷೆಗೆ ಒಳಪಡಿಸಲ್ಪಟ್ಟ ಪೋಟ-ಕಾಯದೆಗಳ ಉಲ್ಲಂಘನೆಗಳು

ಆದರೆ ಗೊತ್ತುಪಡಿಸುವದೇನಂದರೆ, ಆರೋಪಿತ ಮನುಷ್ಯನು ದಸ್ತಗೀರ ಮಾಡಲ್ಪಟ್ಟ ಅಥವಾ ಅವನು ಗುರ್ತಿಸಲ್ಪಟ್ಟು ಅವನ ಹೆಸರು ಹೇಳಲ್ಪಟ್ಟ ಹೊರ್ತು, ಯಾವದೇ ಕಳವಿನ ಅಪರಾಧವನ್ನು ಯಾವದೇ ನ್ಯಾಯಪಂಚಾಯತಿ ಹಿಡಿಯಬಾರದು."

ಸನ್ ೧೮೯೦ ನೆಯ ಇಸವಿಯ ಜನಾವರಗಳನ್ನು ಛಳಿಸುವ ಬಗ್ಗೆ ಮನಾಯಿ ಮಾಡುವ ವಿಷಯದ ಆಕ್ಟಿನನ್ವಯ—

ಪೂಕಾವನ್ನು ಮಾಡುವದು .... .... ೪

ಜನಾವರಗಳನ್ನು ಅನಾವಶ್ಯಕ ಕ್ರೂರತನದಿಂದ ಕೊಲ್ಲುವದು ೫

ಅನಾವಶ್ಯಕ ಕ್ರೂರತನದಿಂದ ಕೊಂದ ಆಡಿನ ಚರ್ಮವನ್ನು ವಶದಲ್ಲಿಟ್ಟುಕೊಳ್ಳುವದು. .... .... ... ೫ ಅ

ಕೆಲಸ ಮಾಡಲಿಕ್ಕೆ ಅಯೋಗ್ಯವಾದಂಥ ಜನಾವರಗಳನ್ನು ಕೆಲಸಕ್ಕೆ ಹಚ್ಚುವದು .... .... .... .... ೬

ಜನಾವರಗಳು ಕಾದಾಡದಂತೆ ಅವುಗಳ ಮನವೊಲಿಸುವದು ಅಥವಾ ಅವುಗಳನ್ನು ಹುರಿದುಂಬಿಸುವದು .... .... ೬ ಕ

ರೋಗ ತಗಲಿದ ಜನಾವರಗಳನ್ನು ಸಾರ್ವಜನಿಕ ಜಾಗೆಗಳಲ್ಲಿ ತಿರುಗಾಡಕೊಡುವದು ಅಥವಾ ಸಾಯಗೊಡುವದು .... ೭

(ಡ) ಸನ್ ೧೮೪೯ ನೇ ಇಸವಿಯ ಮುಂಬಯಿಯ ಮದ್ಯಪಾನ ಪ್ರತಿಬಂಧದ ಆಕ್ಟಿನ ಅನ್ವಯ —

ಸರಾಯಿ ಕುಡಿದು ತನ್ನ ಕಾಳಜಿಯನ್ನು ತೆಗೆದುಕೊಳ್ಳಲಿಕ್ಕೆ ಅಸಮರ್ಥನಾಗುವದು .... .... ೮೫ (೧)

(ಇ) ಸನ್ ೧೮೯೨ನೆಯ ಇಸವಿಯ ಮುಂಬಯಿಯ ಜಿಲ್ಲಾ ಮೈಲಿ ಚುಚ್ಚುವ ವಿಷಯದ ಆಕ್ಟಿನನ್ವಯ—

ಮೈಲಿ ರಸಕಿಯಿಂದ ಮೈಲಿ ಚುಚ್ಚುವದು, ಮೈಲಿ ರಸಿಕೆಯಿಂದ ಚುಚ್ಚಿದ ಮೇಲೆ ಮೈಲಿ ತೆಗೆಯುವ ಕ್ಷೇತ್ರದಲ್ಲಿ ಬರುವದು, ಮತ್ತು ಮೈಲಿ ರಸಿಕೆಯಿಂದ ಚುಚ್ಚಿದ ಮನುಷ್ಯನನ್ನು ಕ್ಷೇತ್ರದಲ್ಲಿ ತರುವದು .... .... .... ೨೨

(೧೪) ವರ್ಷದೊಳಗಿನ ಯಾವನಾದರೂ ಅಸಂರಕ್ಷಿತ ಮಗುವಿನ ಮೈಲಿ ತೆಗೆಯುವ ಬಗ್ಗೆ ಮ್ಯಾಜಿಸ್ಟ್ರೇಟನು ಮಾಡಿದ ಹುಕುಮನ್ನು ಮನ್ನಿಸದೆ ಇರುವದು ... .... ೨೩

ಮಗುವನ್ನು ಹಾಜರ ಮಾಡದಿರುವದು .... ೨೪

ಮಗುವನ್ನು ಮೈಲಿ ತೆಗೆಯುವದಕ್ಕಾಗಿ ತೆಗೆದುಕೊಂಡು ಹೋಗುವದಕ್ಕೆ ತಾತ್ಸಾರ ಮಾಡುವದು ... .... ೨೫

(ಫ) ಸನ್ ೧೯'೨ ನೇ ಇಸವಿಯ ಮುಂಬಯಿಯ ಪ್ರಾಥಮಿಕ ಶಿಕ್ಷಣದ ವಿಷಯದ ಆಕ್ಟಿನನ್ವಯ —

ಸಕ್ತಿಯ ಶಿಕ್ಷಣಕ್ಕೆ ಪಾತ್ರವಿರುವ ಮಗುವನ್ನು ನೌಕರಿಯ ಮೇಲೆ ಇಟ್ಟುಕೊಳ್ಳುವದು .... .... .... ೩೬

(ಗ) ಸನ್ ೧೯೨೫ನೇ ಇಸವಿಯ ಮುಂಬಯಿಯ ಬೆರಸುವದನ್ನು ಪ್ರತಿಬಂಧಿಸುವ ವಿಷಯದ ಆಕ್ಟಿನನ್ವಯ—

ಯೋಗ್ಯ ಪ್ರಕಾರದ್ದು, ಪದಾರ್ಥದ್ದು ಅಥವಾ ಗುಣವುಳ್ಳದ್ದು ಅಲ್ಲದ ಆಹಾರ ಪದಾರ್ಥವನ್ನು ಮಾರಾಟ ಮಾಡುವದು ಅಥವಾ ತಯಾರ ಮಾಡುವದು .... .... .... ೪

(ಹ) ಈ ಆಕ್ಟಿನನ್ವಯ

(೧) ಸಾರ್ವಜನಿಕ ಬೀದಿಗಳ ಹಾಗೂ ಖುಲ್ಲಾ ಜಾಗೆಗಳ ಮೇಲೆ ಆತಂಕಗಳು ಹಾಗೂ ಅತಿಕ್ರಮಣಗಳು ೨೮ ಕ (೧) ಹಾಗೂ ೩

(೨) ಪೋಟ ಕಾಯದೆಯ ಉಲ್ಲಂಘನೆ .... .... ೧೦೯

ಪ್ರಾಂತಿಕ ಸರಕಾರವು ಯಾವ ಯಾವ ಬಗೆಯ (ಫೌಜದಾರಿ) ಖಟ್ಲೆ ನಡಿಸುವ ಅಧಿಕಾರ ನ್ಯಾಯಪಂಚಾಯತಿಗೆ ಕೊಡಬಹುದು ?

(ಅ) ಇಂಡಿಯನ್ ಪಿನಲಕೋಡಿನಂತೆ ಆಗುವ ಗುನ್ಹೆಗಳು

(ಬ) ದನಗಳ ಅತಿಕ್ರಮಣದ ವಿಷಯದಲ್ಲಿ ( ಕ್ಯಾಟಲ್ ಟ್ರೇಸಪಸ ) ಆಕ್ಟದ ಕೆಳಗೆ ಆಗುವ ಗುನ್ಹೆಗಳು

(ಕ) ಗ್ರಾಮಪಂಚಾಯತಿಯ ಕಾಯದೆಯಂತೆ ಶಿಕ್ಷೆಗೆ ಪಾತ್ರವಾದ ಪೋಟ-ಕಾಯದೆಗಳನ್ನು ಭಂಗಮಾಡಿದ ಗುನ್ಹೆಗಳು.

ಒಂದನೇ (ಅ) ಪ್ರಕಾರದಲ್ಲಿ ಇ. ಪಿ ಕೋಡಿನ ೪ ಬೇರೆ ಬೇರೆ ಚಾಬುಗಳ ಕೆಳಗಾಗುವ ಗುನ್ಹೆಗಳು ಬರುತ್ತವೆ. (೧) ಕಲಮು ೨೬೯, ೨೭೭, ೨೮೩ ಇವುಗಳ ಕೆಳಗಾಗುವ ಗುನ್ಹೆಗಳು, ಸಾರ್ವಜನಿಕ ಆರೋಗ್ಯ ಮತ್ತು ಸುರಕ್ಷಿತತೆ ಇವುಗಳ ವಿರುದ್ಧವಾಗಿರುವವು. (೨) ಕಲಮು ೩೨೩, ೩೫೨, ೩೫೮ ಇವುಗಳ ಕೆಳಗಾಗುವ ಗುನ್ಹೆಗಳು ಮನುಷ್ಯನ ಶರೀರಕ್ಕೆ ಉಪದ್ರವಕಾರಿಗಳಾಗಿವೆ. (೩) ಕಲಮು ೩೭೯, ೪೨೬, ೪೪೭, ೪೪೮, ೪೬೧ ಇವುಗಳಿಂದಾಗುವ ಗುನ್ಹೆಗಳು ಮಾಲಮತ್ತೆ (ಆಸ್ತಿ-ಪಾಸ್ತಿ) ವಿರುದ್ಧ ಇವೆ; ಮತ್ತು (೪) ಕಲಮು ೫೦೪ ಇದರಿಂದಾಗುವ ಗುನ್ಹೆ ಅಪಮಾನ ಸಂಬಂಧದ್ದು ಇದೆ.

ಮೇಲೆ ಕೊಟ್ಟ ಗುನ್ಹೆಗಳಲ್ಲಿ ಆರೋಪಿಯು ಯಾವದೊಂದು ಗುನ್ಹೆ ಮಾಡಿರುವನು, ಎಂದು ಠರಾಯಿಸುವ ಮೊದಲು, ಆ ಗುನ್ಹೆಯ ಕಾಯದೇಶೀರ ವ್ಯಾಖ್ಯೆ ಪಿನಲಕೋಡಿನಲ್ಲಿ ಹೇಗೆ ಮಾಡಿದ್ದಾರೆ, ಆ ವ್ಯಾಖ್ಯೆಯ ಭಾಗಗಳಾವವು ಎಂಬದನ್ನು ನೋಡುವದು ಅತ್ಯವಶ್ಯವಾಗಿದೆ. ಉದಾ:— ಕಳವು, ಲೋಕವ್ಯವಹಾರದಲ್ಲಿ ಕಳವಿನ ವ್ಯಾಖ್ಯೆಮಾಡುವಂತೆಯೇ ಕಾಯದೆಯಲ್ಲಿಯೂ ಮಾಡಲಾಗಿದೆ ಹೀಗೆ ತಿಳಕೊಂಡು ನಡೆಯತಕ್ಕದ್ದು, ಮತ್ತು ಅದರಂತೆ ಕಳವಿನ ಗುನ್ಹೆಮಾಡಲಾಗಿದೆಂದು ಠರಾಯಿಸುವದು ಸರಿಯಾಗಲಾರದು. ಯಾವಾಗಲೂ ಕಾಯದೆಯಿಂದ ಠರಾಯಿಸಿದ ವ್ಯಾಖ್ಯೆಗಳೇ ನ್ಯಾಯದಾನದ ಕಲಸದಲ್ಲಿ ವಿಚಾರಿಸತಕ್ಕ

ವಿರುತ್ತವೆ. ಆದುದರಿಂದ ಯಾವದೊಂದು ಕೃತ್ಯವು ಗುನ್ಹೆಯ ಸದರಿನಲ್ಲಿ ಬರುತ್ತದೋ ಇಲ್ಲೋ, ಎಂಬದನ್ನು ನೋಡಬೇಕಾಗಿದ್ದಲ್ಲಿ, ಆ ಕೃತ್ಯವು ಆ ಗುನ್ಹೆಯ ಚೌಕಟ್ಟಿನಲ್ಲಿ (ಪಡಿಯಚ್ಚಿನಲ್ಲಿ) ಪೂರ್ಣವಾಗಿ ಸಮಾವೇಶವಾಗುತ್ತದೋ ಇಲ್ಲವೋ, ಎಂಬದನ್ನು ನೋಡಲಿಕ್ಕೆ ಬೇಕು. ಈ ದೃಷ್ಟಿಯಿಂದ ಬೇರೆ ಬೇರೆ ಗುನ್ಹೆಗಳ ವ್ಯಾಖ್ಯೆಗಳನ್ನು ಲಕ್ಷ್ಯಗೊಟ್ಟು ಅಭ್ಯಾಸಿಸಲಿಕ್ಕೆ ಬೇಕು.

## ಪ್ರಕಾರ ೧—ಆರೋಗ್ಯ ಮತ್ತು ಸುರಕ್ಷಿತತೆಯ ವಿರುದ್ಧವಿದ್ದ ಗುನ್ಹೆಗಳು

**೧ ಜೀವಕ್ಕೆ ಅಪಾಯವಾಗುವ ಯಾವದಾದರೂ ರೋಗದ ಸೊಗಡು ವ್ಯಾಪಿಸುವ ಸಂಭವವಿದ್ದಂಥಾ ಯಾವದಾದರೂ ಕೃತ್ಯವು ತಾತ್ಸಾರದಿಂದ ಮಾಡಿದ್ದಕ್ಕೆ ಶಿಕ್ಷೆ —** ಜೀವಕ್ಕೆ ಅಪಾಯವಾಗುವ ಯಾವದಾದರೂ ರೋಗದ ಸೊಗಡು ವ್ಯಾಪಿಸುವದೆಂದು ತನಗೆ ತಿಳಿದಿರುವಂಥಾ ಅಥವಾ ವ್ಯಾಪಿಸಬಹುದೆಂದು ನಂಬಲಿಕ್ಕೆ ಕಾರಣವಿದ್ದಂಥಾ ಯಾವದಾದರೂ ಕೃತ್ಯವು ಯಾವನಾದರೂ ಕಾಯದೆಗೆ ವಿರುದ್ಧವಾಗಿ ಅಥವಾ ತಾತ್ಸಾರವಾಗಿ ಮಾಡಿದರೆ ಅವನಿಗೆ ಆರು ತಿಂಗಳವರೆಗೆ ಎರಡು ಪ್ರಕಾರದಲ್ಲಿ ಯಾವ ಪ್ರಕಾರದಾದರೂ ಕೈದು ಅಥವಾ ದಂಡ ಅಥವಾ ಈ ಎರಡೂ ಶಿಕ್ಷೆಗಳನ್ನು ಮಾಡಬೇಕು **ಕಲಮು ೨೬೯**

**೨ ಎಲ್ಲಾ ಜನರು ಉಪಯೋಗಿಸುವಂಥಾ ಸೆಲೆ ಅಥವಾ ಜಲಾಶಯದ ನೀರು ಕೆಡಸಿದ್ದಕ್ಕೆ ಶಿಕ್ಷೆ—** ಯಾವನಾದರೂ ಎಲ್ಲಾ ಜನರು ಬಳಿಸುವಂಥಾ ಸೆಲೆ ಅಥವಾ ಭಾಂವಿ ಅಥವಾ ಕೆರಿ ಅಥವಾ ಹೊಂಡ ಮುಂತಾದ ಜಲಾಶಯದಲ್ಲಿರುವ ನೀರು ಸಾಧಾರಣವಾಗಿ ಯಾವ ಕೆಲಸಕ್ಕೆ ಉಪಯೋಗಿಸಲ್ಪಡುತ್ತದೋ ಆ ಕೆಲಸಕ್ಕೆ ಕೊರತೆ ಆಗುವಂತೆ ಮನೋಯಿಚ್ಛೆಯಾಗಿ ಕೆಡಿಸಿದರೆ, ಅಥವಾ ಕೊಳಕ ಮಾಡಿದರೆ ಅವನಿಗೆ ಮೂರು ತಿಂಗಳವರೆಗೆ ಎರಡು ಪ್ರಕಾರದಲ್ಲಿ ಯಾವ ಪ್ರಕಾರದ್ದಾದರೂ ಕೈದು ಅಥವಾ ೫೦೦ ರೂಪಾಯಿದವರಿಗೆ ದಂಡ ಅಥವಾ ಎರಡೂ ಶಿಕ್ಷೆಗಳನ್ನು ಮಾಡಬೇಕು **ಕಲಮು ೨೭೭**

[ 'ಕೆಡಿಸುವದು' ಇಲ್ಲವೆ 'ಹೊಲಸು ಮಾಡುವದು'— ಯಾವಳೊಬ್ಬ ಅಸ್ಪೃಶ್ಯಜಾತಿಯ ಹೆಂಗಸು ಸಾರ್ವಜನಿಕ ಝರಿಯೊಳಗಿಂದ ನೀರು ಒಯ್ದರೆ ಅವಳ ಆ ಕೃತ್ಯವು, ಕೆಡಿಸುವದು ಇಲ್ಲವೆ ಹೊಲಸುಮಾಡುವದು ಇದು ಈ ಕಲಮಿನ ಕೆಳಗೆ ಬರುವದಿಲ್ಲ ಆದರೆ ಯಾವದೊಂದು ಕೆರೆಯಲ್ಲಿ ಜಳಕ ಮಾಡುವದೆಂದರೆ ಅದರೊಳಗಿನ ನೀರು ಕೆಡಿಸಿದಂತೆ, ಹೊಲಸುಮಾಡಿದಂತೆಯೇ ಸರಿ. ]

**೩. ಜನರು ಹೋಗಿ ಬರುವ ಹಾದಿಯಲ್ಲಿ ಅಥವಾ ಹಡಗಗಳು ತಿರುಗಾಡುವ ಮಾರ್ಗದಲ್ಲಿ ಅಪಾಯ ಅಥವಾ ಅಡ್ಡಿ ಮಾಡಿದ್ದಕ್ಕೆ ಶಿಕ್ಷೆ:—** ಯಾವನಾದರೂ ತನ್ನ ವಶದಲ್ಲಿರುವ ಅಥವಾ ತನ್ನ ಜುಮ್ಮೆಯಲ್ಲಿರುವ ಯಾವದಾದರೂ

ಮಾಲಿನ ಬಗ್ಗೆ ವ್ಯವಸ್ಥೆ ಮಾಡದೆ ಬಿಟ್ಟು ಅಥವಾ ಎರಡನೇ ಯಾವದಾದರೂ ಕೃತ್ಯ ಮಾಡಿ ಜನರು ಹೋಗಿಬರುವ ಮಾರ್ಗದಲ್ಲಿ ಅಥವಾ ಹಡಗಗಳು ತಿರಿಗಾಡುವ ಜಲಮಾರ್ಗದಲ್ಲಿ ಯಾವ ಮನುಷ್ಯನಿಗಾದರೂ ಅಪಾಯ ಅಥವಾ ಅಡ್ಡಿ ಅಥವಾ ಹಾನಿ ಘಟಿಸುವ ಹಾಗೆ ಮಾಡಿದರೆ ಅವನಿಗೆ ೨೦೦ ರೂಪಾಯಿಯ ವರೆಗೆ ದಂಡ ಮಾಡಬೇಕು. **ಕಲಮು ೨೮೩**

## ಪ್ರಕಾರ ೨ ಮನುಷ್ಯ ಶರೀರಕ್ಕೆ ಉಪದ್ರವ ಕೊಡುವ ಗುನ್ಹೆಗಳು

೧. ಒಪ್ಪಿಗೆಯಿಲ್ಲದೆ ಗಾಯಪಡಿಸುವದು — ಇಂಡಿಯನ್ ಪಿನಲಕೋಡ ಹಿಂದುಸ್ಥಾನದ (ಅಪರಾಧಿಗಳಿಗೆ ಶಿಕ್ಷೆ ಮಾಡುವ ಕಾಯದೆ) ಇದರ ೩೧೯ನೇ ಕಲಮಿನಲ್ಲಿ "ಮನೋಯಿಚ್ಛೆಯಾಗಿ ಶರೀರಕ್ಕೆ ಗಾಯಗೊಳಿಸುವದು" ಇದರ ವ್ಯಾಖ್ಯೆ ಮುಂದೆ ಹೇಳಿದಂತೆ ಮಾಡಲಾಗಿದೆ

**ಮನೋಯಿಚ್ಛೆಯಾಗಿ ಶರೀರಕ್ಕೆ ದುಃಖಪಡಿಸೋಣ** — ತಾನು ಮಾಡಿದ ಕೃತ್ಯದಿಂದ ಯಾವ ಮನುಷ್ಯನಿಗಾದರೂ ಶರೀರಕ್ಕೆ ದುಃಖ ಆಗಬೇಕೆಂಬ ಇರಾದೆಯಿಂದ ಅಥವಾ ಶರೀರಕ್ಕೆ ದುಃಖಪಡಿಸುವ ಸಂಭವ ಅದೆಂದು ತನಗೆ ತಿಳಿದಿದ್ದು ಯಾವನಾದರೂ ಯಾವದಾದರೂ ಕೃತ್ಯ ಮಾಡಿ ಯಾವ ಮನುಷ್ಯನಿಗಾದರೂ ಶರೀರಕ್ಕೆ ದುಃಖಪಡಿಸಿದರೆ ಅವನು ಮನೋಯಿಚ್ಛೆಯಾಗಿ ಶರೀರಕ್ಕೆ ದುಃಖಪಡಿಸಿದನೆಂದೆನ್ನಬೇಕು **ಕಲಮು ೩೨೧**

ಈ ಪ್ರಕಾರ ಮಾಡಿದ ದುಃಖಾಪತಿಯ ಗುನ್ಹೆಗೆ ಕಲಮು ೩೨೩ ರಲ್ಲಿ ಶಿಕ್ಷೆ ಹೇಳಿರುತ್ತದೆ ಮಾತ್ರ ಈ ದುಃಖಾಪತವು ರೋಷವಾಗಲಿಕ್ಕೆ ಮತ್ತು ಆಕಸ್ಮಿಕ ಕಾರಣ ಇಲ್ಲದಲೆ ಆಗಿರಲಿಕ್ಕೆಬೇಕು ಈ ಪ್ರಕಾರ ಕಾರಣವಿದ್ದರೆ ಆ ಗುನ್ಹೆಯು (ತಪ್ಪು) ೩೩೪ ಕಲಮಿನ ಕೆಳಗೆ ಬರುವದಿಲ್ಲ

೨ ಆಕಸ್ಮಾತ್ತಾಗಿ ಭಾರಿ ರೋಷವು ತುಂಬುವಂತೆ ಕಣಕಲ್ಪಡದೆ ಮೈಮೇಲೆ ಬೀಳೋಣ ಅಥವಾ ದಾಂಡಣೀಯ ಬಲಾತ್ಕಾರ ಮಾಡೋಣ ಕ ೩೫೨

"ಮೈಮೇಲೆ ಏರಿಹೋಗುವದು" ಪಿನಲಕೋಡ ಕಲಮು ೩೫೧ ರಲ್ಲಿ ಕೊಟ್ಟ ಈ ಸಂಜ್ಞೆಯ ವ್ಯಾಖ್ಯೆ—

**ಮೈಮೇಲೆ ಹೋಗಿ ಬೀಳೋಣ** — ಯಾವನಾದರೂ ಯಾವ ಅಂಗಚೇಷ್ಟೆಯನ್ನಾಗಲಿ ತಯಾರಿಯನ್ನಾಗಲಿ ಮಾಡಿ ಆ ಅಂಗಚೇಷ್ಟೆಯಿಂದ ಅಥವಾ ತಯಾರಿಯಿಂದ ಬದಿಲಿರುವ ಮನುಷ್ಯನಿಗೆ ತನ್ನಿಂದಾ ದಂಡಣೀಯ ಬಲಾತ್ಕಾರ ಆಗುವ ಭಯ ಹುಟ್ಟಬೇಕೆಂಬ ಇರಾದೆಯಿಂದ ಅಥವಾ ಅವನಿಗೆ ಭಯ ಹುಟ್ಟುವ ಸಂಭವವದೆಂದು ತಿಳಿದಿದ್ದು ಅಂಥಾ ಅಂಗಚೇಷ್ಟೆಯನ್ನು ಅಥವಾ ತಯಾರಿಯನ್ನು ಮಾಡಿದರ ಅವನು ಮೈಮೇಲೆ ಹೋಗಿ ಬಿದ್ದನೆಂದೆನ್ನಬೇಕು **ಕಲಮು ೩೫೧**

ಉದಾ:— ಮುಷ್ಟಿ ಮುಚ್ಚಿ ಹೊಡೆಯಲು ಹೋಗುವದು, ಬಡಿಗೆಯನ್ನು ನೆಗಹುವದು, ಮೈಮೇಲೆ ನಾಯಿ ಛೂಬಿಡುವದು ಮುಂ.

"ಅನ್ಯಾಯದಿಂದ ಬಲಾತ್ಕಾರಮಾಡುವದು"— ಪಿನಲಕೋಡ ಕಲಮು ೩೫೦ ರಲ್ಲಿ ಈ ಸಂಜ್ಞೆಯ ವ್ಯಾಖ್ಯೆ ಕೊಡಲಾಗಿದೆ.

**ದಂಡನೀಯ ಬಲಾತ್ಕಾರ:**— ಯಾವ ಮನುಷ್ಯನಾದರೂ ಅನುಮತಿ ಇಲ್ಲದೆ ಯಾವ ಅಪರಾಧವನ್ನಾದರೂ ಮಾಡುವದರದೆಸೆಯಿಂದ ಯಾವನಾದರೂ ಮನಃಪೂರ್ವಕವಾಗಿ ಅವನಿಗೆ ಬಲಾತ್ಕಾರ ಮಾಡಿದರೆ ಅಥವಾ ಆ ಪ್ರಕಾರ ಬಲಾತ್ಕಾರ ಮಾಡುವದರಿಂದ ಬಲಾತ್ಕಾರ ಹೊಂದಿದ ಮನುಷ್ಯನಿಗೆ ಹಾನಿ ಅಥವಾ ಭಯ ಅಥವಾ ಪೀಡನೆ ಆಗಬೇಕೆಂಬ ಇರಾದೆಯಿಂದ ಅಥವಾ ಆಗುವ ಸಂಭವ ಅದೆಂದು ತಿಳಿದಿದ್ದು ಅವನಿಗೆ ಮನಃಪೂರ್ವಕವಾಗಿ ಅಂಥಾ ಬಲಾತ್ಕಾರ ಮಾಡಿದರೆ ಅವನು ದಂಡನೀಯ ಬಲಾತ್ಕಾರ ಮಾಡಿದನೆಂದು ಅನಬೇಕು ಕಲಮು ೩೫೦

ಉದಾ:— ನೂಕುವದು, ಕಲ್ಲು ಒಗೆಯುವದು, ತಡೆಯುವದು, ನಿಲ್ಲಿಸುವದು ಮುಂತಾದವು.

ಈ ಬಗೆಯ (ಅ) ಮೈಮೇಲೆ ಏರಿಹೋಗುವ ಬಗ್ಗೆ ಇಲ್ಲವೆ (ಬ) ಅನ್ಯಾಯದಿಂದ ಬಲಾತ್ಕಾರ ಮಾಡುವ ಬಗ್ಗೆ, ಪಿನಲಕೋಡ ಕಲಮು ೩೫೨ ರಲ್ಲಿ ಶಿಕ್ಷೆ (ಕಮಾಲ-ತೀರ ಹೆಚ್ಚಿನ ಪ್ರಮಾಣ) ಹೇಳಿದೆ.

**೩. ಭಾರಿ ರೋಷ ತುಂಬುವಂತೆ ಕೆಣಕಿದ್ದರಿಂದ ಮೈಮೇಲೆ ಹೋಗಿ ಬಿದ್ದದ್ದಕ್ಕೆ ಅಥವಾ ದಂಡನೀಯ ಬಲಾತ್ಕಾರ ಮಾಡಿದ್ದಕ್ಕೆ ಶಿಕ್ಷೆ**:— ಯಾವ ಮನುಷ್ಯನಿಗಾದರೂ ಎರಡನೆಯವನು ಅಕಸ್ಮಾತವಾಗಿ ಭಾರೀ ರೋಷ ತುಂಬುವ ಹಾಗೆ ಕೆಣಕಿದ್ದರಿಂದ ಅವನು ಅವನ ಮೈಮೇಲೆ ಹೋಗಿಬಿದ್ದರೆ ಅಥವಾ ಅವನಿಗೆ ದಂಡನೀಯ ಬಲಾತ್ಕಾರ ಮಾಡಿದರೆ ಅವನಿಗೆ ಒಂದು ತಿಂಗಳವರೆಗೆ ಫಕ್ತ ಕೈದು ಅಥವಾ ೨೦೦ ರೂಪಾಯಿಯ ವರೆಗೆ ದಂಡ ಅಥವಾ ಈ ಎರಡೂ ಶಿಕ್ಷೆಗಳನ್ನು ಮಾಡಬೇಕು ಕಲಮು ೩೫೮

## ಪ್ರಕಾರ ೩ ಆಸ್ತಿ ಪಾಸ್ತಿಯ ವಿರುದ್ಧ ಇದ್ದ ಗುನ್ಹೆಗಳು

೧. ಕಳವು:—"ಕಳವು" ಈ ಸಂಜ್ಞೆಯ ವ್ಯಾಖ್ಯೆ ಪಿನಲ್‌ಕೋಡಿನ ಕಲಮು ೩೭೮ ರಲ್ಲಿ ಮುಂದೆ ಹೇಳಿದಂತೆ ಮಾಡಲಾಗಿದೆ; ಮತ್ತು ಶಿಕ್ಷೆ (ಶಿಕ್ಷೆಯ ಕಮಾಲ ಪ್ರಮಾಣ) ಕಲಮು ೩೭೯ ರಲ್ಲಿ ಹೇಳಲಾಗಿದೆ .... .... ....

**ಕಳವು** - ಯಾವ ಮನುಷ್ಯನದಾದರೂ ಅನುಮತಿಯ ಹೊರ್ತು ಅವನ ಸ್ವಾಧೀನದಲ್ಲಿರುವಂಥಾ ಜಂಗಮ ಮಾಲನ್ನು ಅಪ್ರಾಮಾಣಿಕತನವಾಗಿ ತೆಗೆದು ಕೊಂಬುವ ಇರಾದೆಯಿಂದ ಯಾವನಾದರೂ ಆ ಮಾಲನ್ನು ಆ ಪ್ರಕಾರ

ತೆಗೆದುಕೊಂಬುವದರ ದೆಸೆಯಿಂದ ಸ್ಥಳಾಂತರ ಮಾಡಿದರೆ ಅವನು ಕಳವು ಮಾಡಿದನೆಂದೆನ್ನಬೇಕು **ಕಲಮು ೩೭೮**

ಮುಖ್ಯವಾಗಿ ಕಳುವಿನಲ್ಲಿ ೫ ಅಂಗ-ಭಾಗಗಳಿರುತ್ತವೆ — (೧) ಸುಳ್ಳುತನದ (ಮೋಸದ) ಹೇತು-ಗುರಿ, (೨) **ಕಳವಿನ ಒಡವೆ** ಜಂಗಮ ಮಾಲು ಇರಲಿಕ್ಕೆ ಬೇಕು, (೩) ಅದರ ಮೇಲೆ ಎರಡನೆಯವರ ಅಧಿಕಾರ ( ತಾಬಾ ) ಇರಲಿಕ್ಕೆ ಬೇಕು, (೪) ಅದು ಒಪ್ಪಿಗೆ ಇಲ್ಲದೆ, (೫) ಸ್ಥಳಾಂತರ ಮಾಡಲಿಕ್ಕೆ ಇಲ್ಲವೆ ತೆಗೆದುಕೊಳ್ಳಲಿಕ್ಕೆ ಬೇಕು

ಒಂದುವೇಳೆ ಯಾವನೊಬ್ಬ ಮನುಷ್ಯನು, ತನ್ನ ಸ್ವಂತದ ವಸ್ತು-ಒಡವೆ ಇದ್ದರೂ ಎರಡನೆಯವರಿಂದ ಮೋಸಮಾಡಿ ತಕ್ಕೊಂಡರೆ ಅವನು ಕಳವಿನ ಗುನ್ಹೆಗೆ— ಅಪರಾಧಕ್ಕೆ ಗುರಿಯಾಗುವನು ಉದಾ— ನೆಟ್ಟಗೆ ಮಾಡಲಿಕ್ಕೆ ಕೊಟ್ಟ ಸ್ವಂತದ ಗಡಿಯಾರವನ್ನು ಮೋಸದ ಹೇತುವಿನಿಂದ, ನೆಟ್ಟಗೆ ಮಾಡುವವನ ಒಪ್ಪಿಗೆ ಇಲ್ಲದೆ ಒಯ್ದರೆ, ಅದು ಗುನ್ಹೆ ಆಗುವದು ಮೋಸದ ಹೇತು ಇರದೆ, ಸಹಜವಾಗಿ, ಸರಳರೀತಿಯಿಂದ ಒಯ್ದರೆ, ಅದು ಗುನ್ಹೆ ಆಗಲಾರದು

ಕಳವಿನ ಅಪರಾಧದ ವಿಷಯದಲ್ಲಿ ನ್ಯಾಯ ಪಂಚಾಯತಿಗೆ ಖಟ್ಲೆ ನಡಿಸುವ ಕೆಲಸದಲ್ಲಿ ಮೇಲಿನ ಕಲಮಿನಲ್ಲಿ ಎರಡು ಮರ್ಯಾದೆ ಅಳತೆ ಹೇಳಿರುವರು (೧) ಕಳವಾದ ಸರಕು ೨೦ ರೂ ಗಿಂತ ಹೆಚ್ಚು ಬೆಲೆಯದಿರಬಾರದು, ಮತ್ತು (೨) ಆ ಕಳವಿನ ಆರೋಪವಿದ್ದ ವ್ಯಕ್ತಿ ಹಿಡಿದವನಿರಲಿಕ್ಕೆಬೇಕು, ಇಲ್ಲವೆ ಅದು ಗುರ್ತು ಹಿಡಿಯಲ್ಪಟ್ಟು, ಅದರ ಹೆಸರು ಹೇಳಿರಲಿಕ್ಕೆಬೇಕು ಕಳವಿನ ಸರಕು ೨೦ ರೂ ಗಿಂತ ಹೆಚ್ಚು ಬೆಲೆಯದಿದ್ದರೆ, ಅದರಂತೆ ಕಳ್ಳನನ್ನು ಹಿಡಿಯದಿದ್ದಲ್ಲಿ ಇಲ್ಲವೆ ಅವನನ್ನು ಗುರ್ತಿಸಿ, ಅವನ ಹೆಸರು ಹೇಳದೆ ಇದ್ದಲ್ಲಿ ನ್ಯಾಯ ಪಂಚಾಯತಿಗೆ ಈ ಕಳವಿನ ಖಟ್ಲೆ ನಡೆಸುವ ಅಧಿಕಾರವಿರುವದಿಲ್ಲ

ಎರಡನೇ ಪ್ರಕಾರದ ಮರ್ಯಾದೆ ಕೆಳಗೆ ೪೨ನೇ ಕಲಮಿನಲ್ಲಿ ಕೊಟ್ಟಿರುತ್ತದೆ

**೨. ಅಪಕ್ರಿಯೆ:** " ಅಪಕ್ರಿಯೆ " ಈ ಶಬ್ದದ ವ್ಯಾಖ್ಯೆ ಇಂಡಿಯನ್ ಪಿನಲ್‌ಕೋಡ ಕಲಮು ೪೨೫ ರಲ್ಲಿ ಮುಂದೆ ಹೇಳಿದಂತೆ ಕೊಟ್ಟಿರುತ್ತದೆ, ಮತ್ತು ಎಸ್ಟ್ರ ( ಹೆಚ್ಚಿಗೆ ಹೆಚ್ಚು ಶಿಕ್ಷ) ಕಲಮು ೪೨೬ ರಲ್ಲಿ ಕೊಟ್ಟಿರುತ್ತದೆ

**ನಷ್ಟದ ಬಗ್ಗೆ** ಯಾವ ಮನುಷ್ಯನಾದರೂ ತಾನು ಮಾಡುವ ಕೃತ್ಯದಿಂದ ಎಲ್ಲ ಜನರಿಗಾಗಲಿ ಅಥವಾ ಯಾವನಿಗಾಗಲಿ ಅನ್ಯಾಯವಾದ ಲುಕಸಾನು ಅಥವಾ ಕೇಡು ಮಾಡಬೇಕಂಬ ಇರಾದೆಯಿಂದ ಅಥವಾ ಇಂಥಾ ನುಕಸಾನ ಅಥವಾ ಕೇಡು ಆಗುವ ಸಂಭವವದೆಂದು ತಿಳಿದಿದ್ದು ಯಾವ ಮಾಲನ್ನಾದರೂ ನಾಶ ಮಾಡಿದರೆ ಅಥವಾ ಅದರ ಬೆಲೆಯನ್ನು ಅಥವಾ ಉಪಯೋಗವನ್ನು ಕೆಡಿಸುವಂತೆ ಅಥವಾ

ಕಡಿಮೆ ಆಗುವಂತೆ ಅಥವಾ ನುಕಸಾನ ಆಗುವಂತೆ ಯಾವನಾದರೂ ಆ ಮಾಲಿನಲ್ಲಿ ಅಥವಾ ಅದರ ಸ್ಥಿತಿಯಲ್ಲಿ ಭೇದ ಮಾಡಿದರೆ ಅವನು ನಷ್ಟ ಮಾಡಿದನೆಂದೆನ್ನಬೇಕು.

೧ ವ್ಯಾಖ್ಯೆ -- ನಷ್ಟ ಮಾಡಿದ ಅಪರಾಧ ಆಯಿತೆಂಬುದಕ್ಕೆ ಹಾನಿ ಅಥವಾ ನಾಶವಾದಂಥಾ ಮಾಲಿನ ಯಜಮಾನನಿಗೆ ನುಕಸಾನು ಅಥವಾ ಕೇಡು ಮಾಡಬೇಕೆಂದು ಅಪರಾಧಿಯ ಇರಾದೆ ಇರಬೇಕೆಂಬ ಅವಶ್ಯವಿಲ್ಲಾ ಆದರೆ ಯಾವನಾದರೂ ಮಾಲನ್ನು ಹಾನಿ ಮಾಡಿ ಯಾವ ಮನುಷ್ಯನಿಗಾದರೂ ಅನ್ಯಾಯವಾದ ನುಕಸಾನು ಅಥವಾ ಕೇಡು ಮಾಡಬೇಕೆಂಬುವ ಇರಾದೆ ಇದ್ದರೆ ಅಥವಾ ಅಂಥಾ ಅನ್ಯಾಯವಾದ ನುಕಸಾನು ಅಥವಾ ಹಾನಿ ಆಗುವ ಸಂಭವವದೆಂದು ತಿಳಿದಿದ್ದರೆ ಸಾಕು ಆ ಮಾಲು ಆ ಮನುಷ್ಯನದು ಇರಲಿ ಅಥವಾ ಇರದೆ ಇರಲಿ

೨ನೇದು— ಅಪರಾಧ ಮಾಡುವವನ ಮಾಲಿನ ಬಗ್ಗೆ ಅಥವಾ ಅವನ ಮತ್ತು ಎರಡನೆಯವನ ಹುಗುವಿನಲ್ಲಿ (ಅಂದರೆ ಸಮಾಯಿತದಲ್ಲಿ) ಇರುವ ಮಾಲಿನ ಬಗ್ಗೆ ನುಕಸಾನು ಮಾಡಿದಂಥಾ ಕೃತ್ಯವು ನಷ್ಟ ಮಾಡಿದ ಅಪರಾಧ ಇರಬಹುದು

ಅಪಕ್ರಿಯೆಗಳ ಮೂರು ಭಾಗಗಳು ಇರುತ್ತವೆ (೧) ಅನ್ಯಾಯ ಹೇತು; ನುಕಸಾನ ಸಂಭವಿಸುವ ಜ್ಞಾನ (೨) ಮಾಲಿನ ನಾಶ ಅಥವಾ ಬದಲಾವಣೆ; ಮತ್ತು (೩) ಅದರಿಂದ ಆಗುವ ಹಾನಿ

## ಉದಾಹರಣೆಗಳು.

(೧) ಜ ಯಂಬುವವನಿಗೆ ಅನ್ಯಾಯವಾದ ನುಕಸಾನು ಮಾಡುವ ಇರಾದೆಯಿಂದ ಅ ಎಂಬುವವನು ಜ ಇವನ ಬೆಲೆಯುಳ್ಳ ದಸ್ತೈವಜನ್ನು ಮನೋಇಚ್ಛೆಯಾಗಿ ಸುಟ್ಟರೆ ಅ ಇವನು ನಷ್ಟ ಮಾಡಿದ ಅಪರಾಧ ಮಾಡಿದನೆಂದು ತಿಳಿಯಬೇಕು

(೨) ಜ ಎಂಬುವವನಿಗೆ ಅನ್ಯಾಯದಿಂದ ನುಕಸಾನು ಮಾಡುವ ಇರಾದೆಯಿಂದ ಅವನ ಬರ್ಫಿನ ಮನೆಯಲ್ಲಿ ಅ ಇವನು ನೀರು ತಿರುವಿ ಆ ಬರ್ಫನ್ನು ಕರಗಿಸಿದರೆ ಅ. ಇವನು ನಷ್ಟ ಮಾಡಿದ ಅಪರಾಧ ಮಾಡಿದನೆಂದು ತಿಳಿಯಬೇಕು

(೩) ಜ ಎಂಬುವವನಿಗೆ ಹಾನಿ ಮಾಡಬೇಕೆಂಬ ಇರಾದೆಯಿಂದ ಅ ಇವನು ಅವನ ಉಂಗರವನ್ನು ಮನೋಇಚ್ಛೆಯಾಗಿ ಹೊಳೆಯಲ್ಲಿ ಚೆಲ್ಲಿದರೆ ಅ ಇವನು ನಷ್ಟ ಮಾಡಿದ ಅಪರಾಧ ಮಾಡಿದನೆಂದು ತಿಳಿಯಬೇಕು

(೪) ಅ. ಎಂಬುವವನು ತಾನು ಜ ಎಂಬುವವನಿಗೆ ಕೊಡತಕ್ಕ ಸಾಲವು ತೀರುವದಕ್ಕೆ ತನ್ನ ಮಾಲನ್ನು ತೆಗೆದುಕೊಂಬುವ ಸಂಶಯ ಅದೆಂದು ತಿಳಿದು ಜ. ಇವನಿಗೆ ಸಾಲದ ಹಣಾ ತೀರಿಸುವದಕ್ಕೆ ಪ್ರತಿಬಂಧ ಮಾಡಿ ಅವನಿಗೆ ನುಕಸಾನು ಮಾಡುವ ಇರಾದೆಯಿಂದ ಆ ಮಾಲನ್ನು ನಾಶ ಮಾಡಿದರೆ ಅ. ಇವನು ನಷ್ಟ ಮಾಡಿದನೆಂದು ತಿಳಿಯಬೇಕು.

(೫) ಅ. ಎಂಬುವವನು ಒಂದು ಹಡಗದ ವಿಮೆ ತೆಗೆದುಕೊಂಡು ಆ ವಿಮೆಯವರಿಗೆ ನುಕಸಾನು ಮಾಡಬೇಕೆಂಬ ಇರಾದೆಯಿಂದ ಆ ಹಡಗ ವನ್ನು ಮನೋಯಿಚ್ಛೆಯಾಗಿ ಒಡೆಯುವ ಹಾಗೆ ಮಾಡಿದರೆ ಈ ಸಂಗತಿಯಲ್ಲಿ ಅ. ಇವನು ನಷ್ಟ ಮಾಡಿದ ಅಪರಾಧ ಮಾಡಿದ ನೆಂದೆನ್ನಬೇಕು.

(೬) ಒಂದು ಹಡಗದ ಈಡಿನ ಮೇಲೆ ಸಾಲಾ ಕೊಟ್ಟಿರುವ ಜ. ಎಂಬು ವವನಿಗೆ ನಷ್ಟ ಮಾಡಬೇಕೆಂಬ ಇರಾದೆಯಿಂದ ಆ ಹಡಗವು ಒಡೆ ಯುವ ಹಾಗೆ ಅ ಇವನು ಮಾಡಿದರೆ ಅ ಇವನು ನಷ್ಟ ಮಾಡಿದ ಅಪರಾಧ ಮಾಡಿದನೆಂದು ತಿಳಿಯಬೇಕು

(೭) ಅ ಮತ್ತು ಬ ಈ ಉಭಯತರು ಒಂದು ಕುದುರೆಯ ಹುದುವಾದ (ಸಮಾಯಿತ) ಯಜಮಾನರಿದ್ದು ಅ. ಇವನು ಬ ಇವನಿಗೆ ಅನ್ಯಾಯ ವಾದ ನುಕಸಾನು ಮಾಡಬೇಕೆಂಬ ಇರಾದೆಯಿಂದ ಆ ಕುದುರೆಯನ್ನು ಗುಂಡುಹಾಕಿ ಕೊಂದರೆ ಅ. ಇವನು ನಷ್ಟಮಾಡಿದ ಅಪರಾಧ ಮಾಡಿದನೆಂದು ತಿಳಿಯಬೇಕು.

(೮) ಜ ಎಂಬುವವನ ಬೆಳೆಗೆ ಕೇಡು ಮಾಡಬೇಕೆಂಬ ಇರಾದೆಯಿಂದ ಅಥವಾ ತಾನು ಮಾಡುವ ಕೃತ್ಯದಿಂದ ಜ ಇವನ ಬೆಳೆಗೆ ಕೇಡು ಆಗುವ ಸಂಭವವದೆಂದು ತಿಳಿದಿದ್ದು ಅ. ಇವನು ಜ. ಇವನ ಹೊಲದಲ್ಲಿ ದನಗಳನ್ನು ಹೊಗಿಸಿದರೆ ಅ ಇವನು ನಷ್ಟಮಾಡಿದ ಅಪರಾಧಮಾಡಿದನೆಂದು ತಿಳಿಯಬೇಕು.

೩. **ದಂಡಣೀಯ ಅತಿಕ್ರಮಣ:—** ಯಾವನಾದರೂ ಅಪರಾಧ ಮಾಡ ಬೇಕೆಂಬ ಇರಾದೆಯಿಂದ ಅಥವಾ ಯಾವದಾದರೂ ಮಾಲು ಸ್ವಾಧೀನದಲ್ಲಿರುವಂಥಾ ಮನುಷ್ಯನಿಗೆ ಭಯಪಡಿಸುವ ಇರಾದೆಯಿಂದ ಅಥವಾ ಅಪಮಾನ ಮಾಡಬೇಕೆಂಬ ಇರಾದೆಯಿಂದ ಅಥವಾ ಪೀಡನೆಮಾಡಬೇಕೆಂಬ ಇರಾದೆಯಿಂದ ಎರಡನೇ ಮನುಷ್ಯನ ಸ್ವಾಧೀನದಲ್ಲಿರುವಂಥಾ ಮಾಲಿನಲ್ಲಿ ಅಥವಾ ಮಾಲಿನ ಮೇಲೆ ಹೋದರೆ ಅಥವಾ ಇಂಥ ಮಾಲಿನ ಮೇಲೆ ಅಥವಾ ಮಾಲಿನ ಒಳಗೆ ಕಾಯದೆ ಪ್ರಕಾರ ಹೊಕ್ಕು

ಆ ಮನುಷ್ಯನಿಗೆ ಭಯಪಡಿಸಬೇಕೆಂಬ ಇರಾದೆಯಿಂದ ಅಥವಾ ಅಪಮಾನ ಮಾಡಬೇಕೆಂಬ ಇರಾದೆಯಿಂದ ಅಥವಾ ಪೀಡಣೆಮಾಡಬೇಕೆಂಬ ಇರಾದೆಯಿಂದ ಅಥವಾ ಅಪರಾಧಮಾಡಬೇಕೆಂಬ ಇರಾದೆಯಿಂದ ಅಲ್ಲಿ ಕಾಯದೆಗೆ ವಿರುದ್ಧವಾಗಿ ನಿಂತರೆ ಅವನು ದಂಡಣೀಯ ಅತಿಕ್ರಮಣಮಾಡಿದನೆಂದೆನ್ನಬೇಕು. (೪೪೧).

ಈ ಪ್ರಕಾರದ ಅನ್ಯಾಯದ ಅತಿಕ್ರಮಣ ಬಗ್ಗೆ ಆರೋಪಿತನಿಗೆ ಕಲಮು ೪೪೭ ರಲ್ಲಿ ಶಿಕ್ಷೆ ಹೇಳಿರುತ್ತದೆ.

ಅತಿಕ್ರಮಣದ ಮೂರೂ ಭಾಗಗಳು ಇರುತ್ತವೆ (೧) ಎರಡನೇದವರ ವಶದಲ್ಲಿದ್ದ ಮಿಳಕತ್ತು (೨) ಇಂಥ ಮಿಳಕತ್ತಿನ ಮೇಲೆ ಪ್ರವೇಶಮಾಡುವದು, ಅಥವಾ ಪ್ರವೇಶ ಮಾಡಿದ ನಂತರ ಬೇಕಾಯದೇಶೀರ ಇರೋಣ. (೩) ಗುನ್ಹೆ ಮಾಡುವ ಉದ್ದೇಶದಿಂದ ಮತ್ತು ಮಿಳಕತ್ತು ವಶದಲ್ಲಿದ್ದ ಮನುಷ್ಯನಿಗೆ ಧಮಕಿ ಕೊಡುವ ಅಥವಾ ಅಪಮಾನಮಾಡುವ ಅಥವಾ ತ್ರಾಸಕೊಡುವ ಇರಾದೆಯಿಂದ ಪ್ರವೇಶಮಾಡುವದು ಅಥವಾ ಮಾಡಿದ ನಂತರ ಬೇಕಾಯದೇಶೀರ ಇರೋಣ.

**೪. ಮನೆ ಅತಿಕ್ರಮಣ:—** ಜನ ಇರುತ್ತಿರುವಂಥ ಇಮಾರತಿಯಲ್ಲಾಗಲಿ ಡೇರೆಯಲ್ಲಾಗಲಿ ಅಥವಾ ಹಡಗದಲ್ಲಾಗಲಿ ಅಥವಾ ಪೂಜೆಯ ಸ್ಥಳದಂತೆ ಅಥವಾ ಮಾಲು ಇಡುವ ಸ್ಥಳದಂತೆ ಉಪಯೋಗಿಸುತ್ತಿರುವ ಯಾವದಾದರೂ ಇಮಾರತಿಯಲ್ಲಾಗಲಿ ಹೊಕ್ಕು ಅಥವಾ ಒಳಗೆ ಇದ್ದು ಯಾವನಾದರೂ ದಂಡಣೀಯ ಅತಿಕ್ರಮಣ ಮಾಡಿದರೆ ಅವನು "ಮನೆಯ ಅತಿಕ್ರಮಣ" ಮಾಡಿದನೆಂದೆನ್ನಬೇಕು. (೪೪೨).

ವ್ಯಾಖ್ಯಾ:— ದಂಡಣೀಯ ಅತಿಕ್ರಮಣ ಮಾಡುವವನ ಶರೀರದ ಯಾವ ಭಾಗವೇ ಆಗಲಿ ಒಳಗೆ ಪ್ರವೇಶವಾದರೆ ಅದು ಮನೆಯ ಅತಿಕ್ರಮಣ ಮಾಡಿದ ಅಪರಾಧ ಸಂಭವಿಸಿತೆಂಬುವದಕ್ಕೆ ಸಾಕು ಆದೆ.

ಇಂಥ ಮನೆಯ ಅತಿಕ್ರಮಣದ ಬಗ್ಗೆ ಶಿಕ್ಷೆ ಕಲಮು ೪೪೮ ರಲ್ಲಿ ಹೇಳಿರುತ್ತದೆ

**೫. ಮಾಲು ಇದ್ದಂಥಾ ಅಥವಾ ಮಾಲು ಆದೆ ಎಂದು ತಿಳಿದಂಥಾ ಬಂದಮಾಡಿದ ಬಾರದಾನವನ್ನೇ ಅಪ್ರಾಮಾಣಿಕತನವಾಗಿ ಒಡೆದದ್ದಕ್ಕೆ ಶಿಕ್ಷೆ:—** ಯಾವನಾದರೂ ಅಪ್ರಮಾಣಿಕತನವಾಗಿ ಅಥವಾ ನಷ್ಟಮಾಡಬೇಕೆಂಬ ಇರಾದೆಯಿಂದ ಯಾವನಾದರೂ ಮಾಲು ಇಟ್ಟಿರುವಂಥಾ ಅಥವಾ ಮಾಲು ಇಟದೆಂದು ತನಗೆ ನಂಬಿಗೆ ಇರುವಂಥಾ ಯಾವದಾದರೂ ಬಂದುಮಾಡಿದ ಬಾರದಾನವನ್ನು ಒಡೆದರೆ ಅಥವಾ ತೆರದರೆ ಅವನಿಗೆ ಎರಡು ವರ್ಷದವರೆಗೆ ಎರಡು ಪ್ರಕಾರದಲ್ಲಿ ಯಾವ ಪ್ರಕಾರದಾದರೂ ಕೈದು ಅಥವಾ ದಂಡ ಅಥವಾ ಈ ಎರಡೂ ಶಿಕ್ಷೆಗಳನ್ನು ಮಾಡಬೇಕು (೪೬೧).

## ಪ್ರಕಾರ ೪-ಬೈಯ್ದಾಡುವದು, ಅಪಮಾನ

**ಜನರ ಶಾಂತತೆಯನ್ನು ಭಂಗಮಾಡುವದಕ್ಕೆ ರೋಷತುಂಬಿಸಬೇಕೆಂಬುವ ಇರಾದೆಯಿಂದ ಮನಃಪೂರ್ವಕವಾಗಿ ಅಪಮಾನ ಮಾಡಿದ್ದಕ್ಕೆ ಶಿಕ್ಷೆ :—** ಯಾವ ಮನುಷ್ಯನಿಗಾದರೂ ಅಪಮಾನ ಮಾಡಿ ಅವನಿಗೆ ರೋಷ ತುಂಬಿಸಿ ಅವನ ಕಡಿಂದಾ ಜನರ ಶಾಂತತೆಯನ್ನು ಭಂಗಮಾಡಿಸಬೇಕೆಂಬ ಅಥವಾ ಎರಡನೆ ಯಾವ ಅಪರಾಧವನ್ನಾದರೂ ಮಾಡಿಸಬೇಕೆಂಬ ಇರಾದೆಯಿಂದ ಅಥವಾ ರೋಷತುಂಬಿಸುವದರಿಂದ ಅವನು ಈ ಪ್ರಕಾರ ಮಾಡುವ ಸಂಭವವದೆಯೆಂದು ತಿಳದಿದ್ದು ಯಾವನಾದರು ಅವನಿಗೆ ಮನಃಪೂರ್ವಕವಾಗಿ ಅಪಮಾನ ಮಾಡಿ ರೋಷತುಂಬಿಸಿದರೆ ಅವನಿಗೆ ಎರಡು ವರ್ಷದವರೆಗೆ ಎರಡು ಪ್ರಕಾರಗಳಲ್ಲಿ ಯಾವ ಪ್ರಕಾರದಾ್ದದರೂ ಕೈದು ಅಥವಾ ದಂಡ ಅಥವಾ ಎರಡೂ ಶಿಕ್ಷೆಗಳನ್ನು ಮಾಡಬೇಕು (ಕ ೫೦೪).

ಮೇಲೆ ಕೊಟ್ಟ ಒಟ್ಟಾರೆ ೧೦ ಕಲಮುಗಳಿಗೆ ಒಳಪಟ್ಟ ಗುನ್ಹೆ, ಅಂದರೆ ಸಾರ್ವಜನಿಕ ಆರೋಗ್ಯ, ಸುರಕ್ಷಿತತೆ, ಶಾಂತತೆಯ ವಿರುದ್ಧವಾಗುವ ಗುನ್ಹೆಗಳು. ಇದರಂತೆ ಮನುಷ್ಯರ ಆಸ್ತಿ-ಪಾಸ್ತಿ ಮತ್ತು ಶರೀರ ಇವುಗಳ ವಿರುದ್ಧವಾದ ಗುನ್ಹೆ, ನ್ಯಾಯ ಪಂಚಾಯತಿಯ ಅಧಿಕಾರ ಕ್ಷೇತ್ರದಲ್ಲಿ ಬರುತ್ತವೆ.

+ + + +

(ಬ) ದನಗಳನ್ನು ಹಿಡಿಯುವ ಕೆಲಸದಲ್ಲಿ ಒತ್ತಾಯದಿಂದ ಅಡ್ಡಿ ಮಾಡಿದರೆ ಇಲ್ಲವೆ ಅವುಗಳನ್ನು ಬಿಡಿಸುವ ಬಗ್ಗೆ ಶಿಕ್ಷೆ -ಕೊಂಡವಾಡೆ-ದೊಡ್ಡಿಯ ಆಕ್ಟ (ದನಗಳ ಅತಿಕ್ರಮಣದ ಬಗ್ಗೆ ಕಾಯದೆ) ಇದರ ಕಲಮು ೨೪ ಮುಂದೆ ಹೇಳಿದಂತೆ ಇದೆ

ದನಗಳನ್ನು ಹಿಡಿಯುವ ಕೆಲಸಕ್ಕೆ ಜಬರಿಯಿಂದ ಹರಕತು ಮಾಡಿದ ಬಗ್ಗೆ ಅಥವಾ ಅವುಗಳನ್ನು ಬಿಡಿಸಿದ ಬಗ್ಗೆ ಶಿಕ್ಷೆ:—ಈ ಆಕ್ಟಿನನ್ವಯ ಹಿಡಿಯುವದಕ್ಕೆ ಪಾತ್ರ ಇರುವ ದನಗಳನ್ನು ಹಿಡಿಯುವ ಕೆಲಸಕ್ಕೆ ಯಾವನಾದರೂ ಬಲಾತ್ಕಾರದಿಂದ ಹರಕತು ಮಾಡಿದರೆ—

ಮತ್ತು ಅವುಗಳನ್ನು ಹಿಡಿದ ಮೇಲೆ ದೊಡ್ಡಿಯೊಳಗಿಂದ ಅಥವಾ ಯಾವ ಮನುಷ್ಯನು ಹತ್ತಿರವಿದ್ದು ಮತ್ತು ಈ ಆಕ್ಟಿನ ಮೇಲಿಂದ ಕೊಟ್ಟ ಅಧಿಕಾರದನ್ವಯ ಕೆಲಸವನ್ನು ಮಾಡುತ್ತ ಅವುಗಳನ್ನು ದೊಡ್ಡಿಗೆ ಒಯ್ಯುತ್ತಿದ್ದಾನೋ ಅಥವಾ ಒಯ್ಯುವವನಿದ್ದಾನೋ ಅಂಥವನಿಂದ ಬಿಡಿಸಿದರೆ,

ಮ್ಯಾಜಿಸ್ಟ್ರೇಟನ ಸಮಕ್ಷ ಅಪರಾಧ ಸಾಬೀತಿಯ ಠರಾವಾದರೆ ಅವನಿಗೆ ಪರಾಕಾಷ್ಠೆ ಆರು ತಿಂಗಳ ಪರ್ಯಂತರ ಕೈದಿನ ಶಿಕ್ಷೆ ಮಾಡಬೇಕು ಅಥವಾ

ಐನೂರು ರೂಪಾಯಿ ಪರ್ಯಂತರ ದಂಡ ಮಾಡಬೇಕು ಅಥವಾ ಇವೆರಡೂ ಶಿಕ್ಷೆಗಳನ್ನು ಮಾಡಬೇಕು. ( ಕಲಮು ೨೪ ).

\+ + + +

(ಕ) ಪೋಟ-ಕಾಯದೆಯ ಭಂಗ ( ಮುರಿಯೋಣ ):— ಕಲಮು ೧೦೯ರಂತೆ ಜಿಲ್ಲಾ ಲೋಕಲ್‌ಬೋರ್ಡಿಗೆ ಪಂಚಾಯತಿಯ ಕಾಯದೆಯ ಹೇತು ( ಗುರಿ ) ಪೂರ್ಣಮಾಡುವದಕ್ಕಾಗಿ, ಪೋಟ-ಕಾಯದೆ ಮಾಡುವ ಅಧಿಕಾರವಿದೆ. ಈ ಪೋಟ-ಕಾಯದೆಗಳು ಯಾವ ಯಾವ ಬಾಬಿನ ಸಲುವಾಗಿ ಮಾಡಲಿಕ್ಕೆ ಬರುವವು ಇದರ ಖುಲಾಸೆ ( ವಿವರಣೆ ) ಕಲಮು ೧೦೯ ರಲ್ಲಿ ಕೊಟ್ಟಿದೆ. ಹೀಗೆ ಪೋಟ-ಕಾಯದೆಗಳನ್ನು ಮುರಿದಲ್ಲಿ ಆ ಬಗ್ಗೆ ಆದೇ ಕಲಮಿನಲ್ಲಿ ದಂಡ ಹೇಳಿದೆ.

ಉದಾ'—ಸಾರ್ವಜನಿಕ ಆರೋಗ್ಯಕ್ಕೆ ಇಲ್ಲವೆ ಸುಸ್ಥಿಗೆ ಬಾಧಕವಾಗುವಂತೆ ಗೊಬ್ಬರ ಇಲ್ಲವೆ ಕಸಕಡ್ಡಿ ಅಥವಾ ಬೇರೊಂದು ಉಪದ್ರವಕಾರಕವಾದ ಪದಾರ್ಥ ಇಡಲಿಕ್ಕೆ ಮನಾಯಿ ( ಪ್ರತಿಬಂಧ ) ಮಾಡಲೋಸುಗ ಪೋಟ-ಕಾಯದೆ ಮಾಡಲಿಕ್ಕೆ ಬರುತ್ತದೆ; ಮತ್ತು ಯಾವನು ಪೋಟ-ಕಾಯದೆ ವಿರುದ್ಧವಾಗಿ ವರ್ತಿಸುತ್ತಾನೋ, ಅವನಿಗೆ ದಂಡ ಮಾಡುವ ಅಧಿಕಾರ ನ್ಯಾಯ ಪಂಚಾಯತಿಗೆ ( ನ್ಯಾಯದಾನ ಮಾಡಲಿಕ್ಕೆ ) ಕೊಡಲಾಗಿದೆ.

ಯಾವದೊಂದು ಗುನ್ಹೆ ( ತಪ್ಪು ) ಸಲುವಾಗಿ ತೀರ ಹೆಚ್ಚೆಂದು ಪಿನಲ್ ಕೋಡಿನಲ್ಲಿ ಏನನ್ನೂ ಹೇಳಿದ್ದರೂ ನ್ಯಾಯಪಂಚಾಯತಿಗೆ ಅಷ್ಟು ಶಿಕ್ಷೆಯನ್ನು ಕೊಡುವ ಅಧಿಕಾರವಿರುವದಿಲ್ಲ ನ್ಯಾಯ ಪಂಚಾಯತಿಯ ( ನ್ಯಾಯದಾನ ಮಂಡಲದ ) ಶಿಕ್ಷೆ ವಿಧಿಸುವ ಮರ್ಯಾದೆ ಮುಂದೆ ಕಲಮು ೪೫ ರಲ್ಲಿ ಕೊಡಲಾಗಿದೆ. ಅದನ್ನು ನೋಡಬೇಕು.

ಮೇಲೆ ಕೊಟ್ಟ ಗುನ್ಹೆಯ ವ್ಯಾಖ್ಯೆಯ ಮೇಲಿಂದ ಯಾವನೊಬ್ಬನು ಗುನ್ಹೆಯನ್ನು ಮಾಡಿದನೋ ಇಲ್ಲೋ ಎಂಬದನ್ನು ಠರಾಯಿಸುವಾಗ ವ್ಯಾಖ್ಯೆಯ ಹೊರತಾಗಿ ಬೇರೆ ಎಷ್ಟೋ ಸಂಗತಿಗಳನ್ನು ವಿಚಾರದಲ್ಲಿ ತೆಗೆದುಕೊಳ್ಳಬೇಕಾಗುತ್ತದೆ. ಪಿನಲ ಕೋಡಿನಲ್ಲಿ "ಸರ್ವಸಾಧಾರಣ ಅಪವಾದ" ಎಂದು ಒಂದು ಬಾಬನ್ನು ( ಪ್ರಕರಣ ) ಕೊಟ್ಟಿರುವರು. ಯಾವದೊಂದು ಕೃತಿಯು ಮೇಲೆ ಕೊಟ್ಟ ಗುನ್ಹೆಯ ವ್ಯಾಖ್ಯೆಯ ಪರಿಭಾಷೆಯಲ್ಲಿ ಹೊಂದಿಕೆಯಾಗುತ್ತಿದ್ದರೂ, ಅದು ದಂಡನೀಯವೆಂದು ಠರಾಯಿಸುತ್ತದೆಂದು ಹೇಳಲಿಕ್ಕಾಗುವದಿಲ್ಲ, ಎಂಬದು ಆ ಪ್ರಕರಣದ ಮೇಲಿಂದ ಕಂಡುಬರುವದು. ಉದಾ:— ಗೈರ ತಿಳುವಳಿಕೆಯಿಂದ ಮಾಡಿದ ಕೃತ್ಯ, ೭ ವರ್ಷಗಳೊಳಗಿನ ವಯಸ್ಸಿನ ಹುಡುಗನು ಇಲ್ಲವೆ ಹುಚ್ಚನು ಮಾಡಿದ ಕೆಲಸ, ಆತ್ಮಸಂರಕ್ಷಣಕ್ಕಾಗಿ ಮಾಡಿದ ಕೃತ್ಯ, ಸಾಧಾರಣವಾಗಿ ಉಪೇಕ್ಷಣೀಯವಾದ ಕ್ಷುಲ್ಲಕ ಕೃತ್ಯ ಇವುಗಳು ಕಾಯದೆಯ ಕಕ್ಷೆಯಲ್ಲಿ ಬರುತ್ತಿದ್ದರೂ, ಅಪವಾದವೆಂದು ದಂಡನೀಯವಾಗುವದಿಲ್ಲ ( ಶಿಕ್ಷೆಗೆ ತಕ್ಕವುಗಳಾಗುವದಿಲ್ಲ. ).

ಅಪವಾದ ಪ್ರಕರಣದೊಳಗಿನ ಎಲ್ಲ ಕಲಮುಗಳ ಪೂರಾ ಚರ್ಚೆ ಮಾಡುವದು, ಗ್ರಾಮ ಪಂಚಾಯತಿಯ ಕಾಯದೆಯ ಈ ಪುಸ್ತಕದ ಮರ್ಯಾದೆಯ ಹೊರಗಿನದಿರುವದರಿಂದ, ಪಿನಲ್‌ಕೋಡಿನ ವಿಶೇಷ ಅಭ್ಯಾಸದ ಕಡೆಗೆ ಲಕ್ಷವನ್ನು ತೊಲಗಿಸುವದಕ್ಕಿಂತ ಹೆಚ್ಚಿಗೆ ಇಲ್ಲಿ ಏನೂ ಮಾಡಲಿಕ್ಕೆ ಬರುವಂತಿಲ್ಲ.

೪೨. ಕಳವಿನ ಆರೋಪವಿರುವ ಕೆಲವು ಮನುಷ್ಯರ ಇನಸಾಫನ್ನು ನ್ಯಾಯ ಪಂಚಾಯತಿಯು ಮಾಡಬಾರದು—ಯಾವದರಲ್ಲಿ ಆರೋಪಿಯು

(ಅ) ಹಿಂದುಸ್ತಾನದ ಅಪರಾಧಿಗಳಿಗೆ ಶಿಕ್ಷೆ ಮಾಡುವ ಕಾಯಿದೆಯ ೧೨ ನೇ ಅಥವಾ ೧೭ ನೇ ಬಾಬಿನನ್ವಯ ಮೂರು ವರ್ಷಗಳ ಅಥವಾ ಅವುಗಳಿಗಿಂತ ಹೆಚ್ಚಿನ ಎರಡರಲ್ಲಿ ಯಾವದೇ ಪ್ರಕಾರದ ಕೈದಿನ ಶಿಕ್ಷೆಯಿಂದ ಶಿಕ್ಷಿಸಲ್ಪಡಬೇಕಾದ ಅಪರಾಧದ ಬಗ್ಗೆ ಈ ಮೊದಲು ಅಪರಾಧ ಸಾಬೀತು ಆದವನಿರುವನೋ ;

(ಬ) ಕಳವಿನ ಬಗ್ಗೆ ಯಾವದೇ ಪಂಚಾಯತದಿಂದ ಈ ಮೊದಲು ದಂಡ ಮಾಡಲ್ಪಟ್ಟಿರುವನೋ ;

(ಕ) ಸನ್ ೧೯೨೪ ನೇ ಇಸವಿಯ ಅಪರಾಧ ಮಾಡುವ ಜಾತಿಗಳ ವಿಷಯದ ಆಕ್ಟಿನ ೪ನೇ ಕಲಮಿನನ್ವಯ ಅಪರಾಧ ಮಾಡುವ ಜಾತಿಯ ನೋಂದಿಸಿದ ಮನುಷ್ಯನಾಗಿರುವನೋ ; ಅಥವಾ

(ಡ) ಸನ್ ೧೮೯೮ ನೇ ಇಸವಿಯ ಫೌಜದಾರೀ ಕೆಲಸ ನಡಿಸುವ ರೀತಿ ವಿಷಯದ ಕಾಯದೆಯ ೧೦೯ ನೇ ಅಥವಾ ೧೧೦ ನೇ ಕಲಮಿನನ್ವಯ ನಡಿಸಲ್ಪಟ್ಟ ಕೆಲಸಗಳಲ್ಲಿ ಒಳ್ಳೇ ನಡತೆಯಿಂದಿರುವ ಬಗ್ಗೆ ಕಾರಣ ತೆಗೆದುಕೊಳ್ಳಲ್ಪಟ್ಟವನಿರುವನೋ

ಅಂಥ ಹಿಂದುಸ್ಥಾನದ ಅಪರಾಧಿಗಳಿಗೆ ಶಿಕ್ಷೆ ಮಾಡುವ ಕಾಯಿದೆಯ ೭೫ನೇ ಕಲಮಿನನ್ವಯ ಶಿಕ್ಷೆಗೆ ಪಾತ್ರವಾದ ಕಳವಿನ ಯಾವದೇ ಅಪರಾಧವನ್ನು ಯಾವದೇ ನ್ಯಾಯಪಂಚಾಯತಿಯು ಹಿಡಿಯಬಾರದು.

(ಅ) ಇಂಡಿಯನ್ ಪಿನಲ್‌ಕೋಡ ಪ್ರಕರಣದ ೧೨ ರ ಕೆಳಗಿನ ಗುನ್ಹೆಗಳು:— ಈ ಪ್ರಕರಣದಲ್ಲಿ (೧) ನಾಣ್ಯದ ವಿಷಯವಾಗಿ ಮತ್ತು (೨) ಸರಕಾರದ ಸ್ಟಾಂಪಿನ ಸಂಬಂಧದ ಅಪರಾಧಗಳ ವಿವರಣೆ ಮಾಡಲಾಗಿದೆ.

ಇಂಡಿಯನ್ ಪಿಸಲ್‌ಕೋಡ ಪ್ರಕರಣ ೧೭ ರ ಕೆಳಗಿನ ಗುನ್ಹೆಗಳು-- ಈ ಪ್ರಕರಣದಲ್ಲಿ ಮಾಲಿನ (ಸರಕಿನ) ವಿರುದ್ಧವಾದ ಅಪರಾಧಗಳ ಬಗ್ಗೆ ವಿವರಣೆ ಮಾಡಲಾಗಿದೆ. ಆ ಅಪರಾಧಗಳು ಹೀಗೆ:— (೧) ಕಳವು, (೨) ಬಲುಮೆಯಿಂದ ತೆಗೆದುಕೊಳ್ಳೋಣ (೩) ಬಲಾತ್ಕಾರದ ಕಳವು, (೪) ದರೋಡೆ, (೫) ಅನ್ಯಾಯದಿಂದ ಸರಕಿನ ಗೈರ ಉಪಯೋಗ ಮಾಡುವದು, (೬) ಅನ್ಯಾಯದಿಂದ ವಿಶ್ವಾಸಘಾತ ಮಾಡುವದು, (೭) ಕಳವಿನ ಮಾಲು ಕೊಳ್ಳುವದು, (೮) ಠಕ್ಕುತನ, (೯) ಮೋಸದ ದಸ್ತು (ಕಾಗದ), ಮತ್ತು ಮೋಸದಿಂದ ಮಾಲಿನ ವ್ಯವಸ್ಥೆ ಮಾಡುವದು, (೧೦) ಆಪಕ್ರಿಯೆ, ಹಾಗೂ (೧೧) ಅನ್ಯಾಯದ ಅತಿಕ್ರಮಣ (ಬಲಾತ್ಕಾರ).

ಇಂಥ ಗುನ್ಹೆಗಳ ತಪ್ಪುಗಾರರಿಗೆ ಪಿನಲ್‌ಕೋಡಿನಲ್ಲಿ ಹೆಚ್ಚು ತರಗತಿಯ ಶಿಕ್ಷೆ ಹೇಳಿರು

ವದರಿಂದ ಅಷ್ಟು, ಶಿಕ್ಷೆ ಪಂಚಾಯತಿಗಳಿಗೆ ಕೊಡಲಿಕ್ಕೆ ಬರಲಾರದು ಅಂತೇ ಈ ಬಗೆಯ ಗುನ್ಹೆಗಳ ವಿಚಾರ ಮಾಡುವ ಅಧಿಕಾರ ಪಂಚಾಯತಿಗಳಿಗೆ ಕೊಟ್ಟಿರುವದಿಲ್ಲ.

(ಬ) ಈ ಪೋಟ-ಕಲವು ಸ್ಪಷ್ಟವಾಗಿದೆ.

(ಕ) ಕೇವಲ ಗುನ್ಹೆಗಾರ ಜಾತಿಯ ಇಸಮು ಇದ್ದಾನೆ, ಇಷ್ಟರ ಮೇಲಿಂದಲೇ ಸಾಗುವಂತಿಲ್ಲ. ಆವನು ಕಾಯಿದೆಯಂತೆ "ನೋಂದಾಯಿಸಿ" ದವನು ಇರಲಿಕ್ಕೆಬೇಕು.

(ಡ) ಸನ್ ೧೮೯೮ ರ ಫೌಜದಾರಿ ಕೆಲಸ ಸಾಗಿಸುವ ರೀತಿಯ ವಿಷಯಕವಾದ [ಕ್ರಿಮಿನಲ್ ಪ್ರೋಸೀಜರ] ಇದರ [ಚಾಪ್ಟರ (ಪ್ರಕರಣ) ೮] ಕಲವು ೧೦೯ ರ ಅನ್ವಯ ಉಡಾಣಟಪ್ಪು (ಉಡಾಳ) ಇಲ್ಲವೆ ಸಂಶಯವುಳ್ಳ ಜನರಿಂದ ಒಳ್ಳೆಯ ನಡತೆಯ ಬಗ್ಗೆ ಜಾಮೀನು ತೆಗೆದುಕೊಳ್ಳುವ ಅಧಿಕಾರವು ಮ್ಯಾಜಿಸ್ಟ್ರೇಟನಿಗಿರುವದು.

ಆದರಂತೆಯೇ ಕಲವು ೧೧೦ ರಂತೆ ಯಾವಾಗಲೂ ಗುನ್ಹೆ ಮಾಡುವ ಜನರಿಂದ ಜಾಮೀನು ಬೇಡುವ ಅಧಿಕಾರ ಅವನಿಗಿರುವದು.

೪೩. ಸರಕಾರೀ ನೌಕರನಿಂದ ಮಾಡಲ್ಪಟ್ಟ ಅಥವಾ ಅವನ ವಿರುದ್ಧವಾದ ಅಪರಾಧಗಳ ಇನಸಾಫನ್ನು ನ್ಯಾಯಪಂಚಾಯತಿಯು ಹಿಡಿಯಬಾರದು:— ಯಾವ ಗ್ರಾಮದ ಬಗ್ಗೆ ಪಂಚಾಯತವು ಸ್ಥಾಪಿಸಲ್ಪಟ್ಟಿರುವದೋ ಆ ಗ್ರಾಮವಿರುವ ಜಿಲ್ಲೆಯಲ್ಲಿ ನೌಕರಿ ಮಾಡುವ ಸರಕಾರೀ ನೌಕರನು, ಫಿರ್ಯಾದಿಯಾಗಲಿ ಆರೋಪಿಯಾಗಲಿ ಆಗಿರುವಂಥ ೪೦ನೇ ಕಲಮಿನಲ್ಲಿ ಹೇಳಿದ ಯಾವದೇ ಅಪರಾಧವನ್ನು ಯಾವದೇ ನ್ಯಾಯಪಂಚಾಯತವು ಹಿಡಿಯಬಾರದು ;

"ಆದರೆ ಗೊತ್ತುಪಡಿಸುವದೇನಂದರೆ, ೨೮ ಕ ಕಲಮಿನ (೧)ನೇ ಅಥವಾ ೩ನೇ ಪೋಟ ಕಲಮಿನನ್ವಯ ಶಿಕ್ಷಿಸಲ್ಪಡತಕ್ಕ ಅಥವಾ ೧೦೯ ನೇ ಕಲಮಿನ ೩ನೇ ಪೋಟ ಕಲಮಿನನ್ವಯ ಯಾವದೊಂದು ಪೋಟ ಕಾಯದೆಯನ್ನು ಉಲ್ಲಂಘಿಸಿದ ಅಪರಾಧವನ್ನು ಹಿಡಿಯಲಿಕ್ಕೆ, ಸದರಿ ಖಟ್ಲೆಯೊಳಗಿನ ಫಿರ್ಯಾದಿಯು ಸರಕಾರೀ ನೌಕರನಿದ್ದಾಗ್ಯೂ ನ್ಯಾಯ ಪಂಚಾಯತಕ್ಕೆ ಪ್ರತಿಬಂಧವಿರತಕ್ಕದ್ದಲ್ಲ.

೪೪. ನ್ಯಾಯಪಂಚಾಯತಿಯು ಮಾಡಿದ ಅಪರಾಧ ಸಾಬೀತಿಯು ಹಿಂದಿನ ಅಪರಾಧ ಸಾಬೀತಿಯಾಗುವದಿಲ್ಲ:— ಈ ಆಕ್ಟಿನನ್ವಯ ನ್ಯಾಯ ಪಂಚಾಯತಿಯು ಮಾಡಿದ ಅಪರಾಧ ಸಾಬೀತಿಯು, ಹಿಂದುಸ್ಥಾನದ ಅಪರಾಧಿಗಳಿಗೆ ಶಿಕ್ಷೆ ಮಾಡುವ ಕಾಯದೆಯ ೭೫ನೇ ಕಲಮಿನ ಉದ್ದೇಶಗಳ ಬಗ್ಗೆ, ಹಿಂದಿನ ಅಪರಾಧ ಸಾಬೀತಿಯೆಂದು ತಿಳಿಯಲ್ಪಡಬಾರದು

೪೫ ಪರಾಕಾಷ್ಠ ದಂಡಗಳು:— (೧) ೪೧ನೇ ಕಲಮಿನಲ್ಲಿ ಹೇಳಿದ ಅಪರಾಧಗಳ ಬಗ್ಗೆ ನ್ಯಾಯಪಂಚಾಯತಿಯು ಈ ಕೆಳಗಿನ ಪರಾಕಾಷ್ಠ ದಂಡಗಳನ್ನು ಮಾಡಬಹುದು —

(ಅ) ಹಿಂದುಸ್ಥಾನದ ಅಪರಾಧಿಗಳಿಗೆ ಶಿಕ್ಷೆ ಮಾಡುವ ಕಾಯದೆಯನ್ವಯ—೨೦ ರೂಪಾಯಿಗೆ ಮೀರದ, ಅಥವಾ ೪೦ ರೂಪಾಯಿಯ ಮರ್ಯಾದೆಗೆ ಒಳಪಟ್ಟು, ನಷ್ಟದ ಅಥವಾ ಲುಕ್ಸಾನಿನ ಇಮ್ಮಡಿಯಷ್ಟು ರಕಮಿಗೆ ಮೀರದ ದಂಡವು;

(ಬ) ಸನ್ ೧೮೭೧ನೇ ಇಸವಿಯ ದನಗಳ ಅತಿಕ್ರಮಣದ ವಿಷಯದ ಆಕ್ಟಿನ ೨೪ನೇ ಕಲಮಿನನ್ವಯ—
೧೦ ರೂಪಾಯಿಗೆ ಮೀರದ ದಂಡವು, ಮತ್ತು

(ಬ ಬ) ಸನ್ ೧೯೪೭ನೇ ಇಸವಿಯ ಮುಂಬಯಿಯ ಪ್ರಾಥಮಿಕ ಶಿಕ್ಷಣದ ವಿಷಯದ ಆಕ್ಟಿನ ೩೬ನೇ ಕಲಮಿನನ್ವಯ ಅಥವಾ ೪೧ನೇ ಕಲಮಿನಲ್ಲಿ ಹೇಳಿದ ಇತರ ಯಾವದೇ ಆಕ್ಟಿನ ಠರಾವುಗಳನ್ವಯ ೨೦ ರೂಪಾಯಿ ಮೀರದ ದಂಡವು

(ಕ) ಈ ಆಕ್ಟಿನ ೨೮ ಕ ಕಲಮಿನ (೧)ನೇ ಪೋಟ ಕಲಮಿನನ್ವಯ ಆ ಪೋಟ ಕಲಮಿನಲ್ಲಿ ಠರಾಯಿಸಲ್ಪಟ್ಟಂತೆ ೨೦ ರೂಪಾಯಿಗೆ ಮೀರದ ಅಥವಾ ಚಾಲೂ ಇರುವ ಉಲ್ಲಂಘನೆಯ ಬಗ್ಗೆ ಪ್ರತಿ ದಿವಸಕ್ಕೆ ೧ ರೂಪಾಯಿಗೆ ಮೀರಿದ ದಂಡವು.

(ಡ) ಈ ಆಕ್ಟಿನ ೨೮ ಕ ಕಲಮಿನ (೩)ನೇ ಪೋಟ ಕಲಮಿನನ್ವಯ ಆ ಪೋಟ ಕಲಮಿನಲ್ಲಿ ಠರಾಯಿಸಲ್ಪಟ್ಟಂತೆ ೪೦ ರೂಪಾಯಿಗೆ ಮೀರದ ಅಥವಾ ಚಾಲೂ ಇರುವ ಉಲ್ಲಂಘನೆಯ ಬಗ್ಗೆ ಪ್ರತಿ ದಿವಸಕ್ಕೆ ೨ ರೂಪಾಯಿಗೆ ಮೀರದ ದಂಡವು

(ಇ) ಈ ಆಕ್ಟಿನ ೧೯ನೇ ಕಲಮಿನ (೩)ನೇ ಪೋಟ ಕಲಮಿನನ್ವಯ ಆ ಪೋಟ ಕಲಮಿನಲ್ಲಿ ಠರಾಯಿಸಲ್ಪಟ್ಟನಂತೆ ೨೦ ರೂಪಾಯಿಗೆ ಮೀರದ ಅಥವಾ ಚಾಲೂ ಇರುವ ಉಲ್ಲಂಘನೆಯ ಬಗ್ಗೆ ಪ್ರತಿ ದಿವಸಕ್ಕೆ ೧ರೂಪಾಯಿಗೆ ಮೀರದ ದಂಡವು

(೨) ನಿಜವಾದ ಕೈದಿನ ಶಿಕ್ಷೆಯು ಅಥವಾ ದಂಡ ಕೊಡಲಿಕ್ಕೆ ತಪ್ಪಿದ ಬಗ್ಗೆ ಕೊಡಲ್ಪಡುವ ಕೈದಿನ ಶಿಕ್ಷೆಯು ಅಥವಾ ಫಟಿಕೆ ಹೊಡೆಯುವ ಶಿಕ್ಷೆಯು ನ್ಯಾಯಪಂಚಾಯತಿಯಿಂದ ಕೊಡಲ್ಪಡಬಾರದು.

೪೬. ಹೆಚ್ಚಿನ ದಂಡಗಳನ್ನು ಹೊರಿಸುವ ಬಗ್ಗೆ ವಿಶಿಷ್ಟ ನ್ಯಾಯಪಂಚಾಯತಿಗೆ ಅಧಿಕಾರ ಕೊಡಲಿಕ್ಕೆ ಪ್ರಾಂತಿಕ ಸರಕಾರದವರ ಅಧಿಕಾರ— ಪ್ರಾಂತಿಕ ಸರಕಾರದವರು, ಸರಕಾರೀ ಗೆಝೇಟಿನಲ್ಲಿ ಜಾಹೀರನಾಮೆ ಕೊಟ್ಟು ಈ ಕೆಳಗಿನ ಪರಾಕಾಷ್ಠ ದಂಡಗಳನ್ನು ಮಾಡಲಿಕ್ಕೆ ನ್ಯಾಯಪಂಚಾಯತಿಗೆ ಅಧಿಕಾರ ಕೊಡಬಹುದು.—

(ಅ) ೪೧ನೇ ಕಲಮಿನಲ್ಲಿ ಹೇಳಿದ, ಹಿಂದುಸ್ಥಾನದ ಅಪರಾಧಿಗಳಿಗೆ ಶಿಕ್ಷೆ ಮಾಡುವ ಕಾಯಿದೆಯ ಕಲಮುಗಳನ್ವಯ—
೪೦ ರೂಪಾಯಿಗೆ ಮೀರದ, ಅಥವಾ ಉಂಟಾದ ನಷ್ಟದ ಅಥವಾ ಲುಕ್ಸಾನಿನ ರಕಮಿನ ಇಮ್ಮಡಿಗೆ ಮೀರದ ದಂಡವು, ಇವುಗಳಲ್ಲಿ ಯಾವದು ದೊಡ್ಡದೋ ಅದು.

(ಬ) ಸನ್ ೧೮೭೧ನೇ ಇಸವಿಯ ದನಗಳ ಅತಿಕ್ರಮಣದ ವಿಷಯದ ಆಕ್ಟಿನ ೨೪ನೇ ಕಲಮಿನನ್ವಯ—
೨೦ ರೂಪಾಯಿಗೆ ಮೀರದ ದಂಡವು

(ಕ) ಸನ್ ೧೯೪೭ನೆಯ ಇಸವಿಯ ಮುಂಬಯಿಯ ಪ್ರಾಥಮಿಕ ಶಿಕ್ಷಣದ ಆಕ್ಟನ್ನು ಹೊರ್ತುಪಡಿಸಿ ೪೧ನೇ ಕಲಮಿನಲ್ಲಿ ಹೇಳಿದ ಇತರ ಯಾವದೇ ಆಕ್ಟಿನ ಕಲಮುಗಳನ್ವಯ—೫೦ ರೂಪಾಯಿಗೆ ಮೀರದ ದಂಡವು

೪೭ ಫಿರ್ಯಾದಿಗಳಿಗೆ ಲುಕ್ಸಾನ ಭರಪಾಯಿ ಕೊಡೋಣ— ೪೫ನೇ ಅಥವಾ ೪೬ನೇ ಕಲಮಿನನ್ವಯ ಯಾವದೇ ದಂಡವನ್ನು ಮಾಡುವಲ್ಲಿ, ವಸೂಲ ಮಾಡಲ್ಪಟ್ಟ ಇಡೀ ದಂಡವು ಅಥವಾ ಅದರ ಯಾವದೇ ಭಾಗವು-

(ಅ) ಸದರಿ ಖಟ್ಲೆಯಲ್ಲಿ ಫಿರ್ಯಾದಿಗೆ ಯೋಗ್ಯವಾಗಿ ಆದ ಖರ್ಚುಗಳನ್ನು ಕೊಡುವ ಬಗ್ಗೆ, ಅಥವಾ

(ಬ) ಸದರಿ ಅಪರಾಧ ಮಾಡಲ್ಪಟ್ಟದ್ದರಿಂದ ಯಾವನೊಬ್ಬ ಮನುಷ್ಯನಿಗೆ ಉಂಟಾದ ಯಾವದೇ ನಿಜವಾದ ನಷ್ಟ ಅಥವಾ ಲುಕ್ಸಾನಿನ ಬಗ್ಗೆ ಅವನಿಗೆ ಲುಕ್ಸಾನ ಭರಪಾಯಿ ಕೊಡುವ ಬಗ್ಗೆ

ವಿನಿಯೋಗಿಸಲ್ಪಡಬೇಕೆಂದು ನ್ಯಾಯಪಂಚಾಯತವು ಫರ್ಮಾಯಿಸಬಹುದು.

೪೮. ಸುಳ್ಳು ಅಥವಾ ಹುಡಗಾಟಿಕೆಯ ಖಟ್ಲೆಯ ಬಗ್ಗೆ ಆರೋಪಿಗೆ ಲುಕ್ಸಾನ ಭರಪಾಯಿ – ತನ್ನ ಮುಂದೆ ತರಲ್ಪಟ್ಟ ಖಟ್ಲೆಯು ಸುಳ್ಳು, ಹುಡುಗಾಟಿಕೆಯದು ಅಥವಾ ಉಪದ್ರವ ಕೊಡುವಂಥಾದ್ದು ಇರುತ್ತದೆಂದು ನ್ಯಾಯಪಂಚಾಯತಿಗೆ ಚೌಕಶಿಯ ನಂತರ ಸಮಾಧಾನವಾದರೆ, ಸದರಿ ನ್ಯಾಯಪಂಚಾಯತಿಯು ತನಗೆ ಯೋಗ್ಯ ತೋರಿದಂತೆ ಸದರಿ ಆರೋಪಿಗೆ ೫ ರೂಪಾಯಿಗೆ ಮೀರದ ಲುಕ್ಸಾನ ಭರಪಾಯಿಯನ್ನು ಕೊಡಲಿಕ್ಕೆ ಫಿರ್ಯಾದಿಗೆ ಹುಕುಮು ಮಾಡಬಹುದು.

೪೯ ಎಳೆ ಪ್ರಾಯದ ಅಪರಾಧಿಗಳು—ಯಾವ ಎಳೆ ಪ್ರಾಯದ ಅಪರಾಧಿಯು, ಸದರಿ ಅಪರಾಧ ಸಾಬೀತಾದ ಕಾಲದಲ್ಲಿ ಹದಿನಾರು ವರ್ಷಕ್ಕಿಂತ ಕಡಿಮೆ ಪ್ರಾಯದವನಿರುತ್ತಾನೆಂದು ನ್ಯಾಯಪಂಚಾಯತಿಯು ಅಭಿಪ್ರಾಯ ಪಡುವದೋ ಅವನಿಗೆ ಯಾವದೇ ಶಿಕ್ಷೆಯನ್ನು ವಿಧಿಸುವದರ ಬದಲಾಗಿ, ಅವನಿಗೆ ಯೋಗ್ಯ ತಾಕೀತು ಕೊಟ್ಟು, ಅವನನ್ನು ಬಿಟ್ಟುಬಿಡಬಹುದು.

೫೦. ಹಿತಸಂಬಂಧವಿರುವ ಸಭಾಸದರು ನ್ಯಾಯಪಂಚಾಯತಿಯಲ್ಲಿ ಕೂಡ್ರಬಾರದು— ಯಾವದೇ ದಾವೆ ಅಥವಾ ಖಟ್ಲೆಯಲ್ಲಿ ಪಕ್ಷಕಾರನಾಗಿರುವ ಅಥವಾ ಅದರಲ್ಲಿ ಯಾವದೇ ಹಿತಸಂಬಂಧವಿರುವ ಯಾವನೊಬ್ಬ ನ್ಯಾಯಪಂಚಾಯತಿಯ ಸಭಾಸದನು, ನ್ಯಾಯಪಂಚಾಯತಿ ಸದರಿ ದಾವೆ ಅಥವಾ ಖಟ್ಲೆಯ ಇನಸಾಫು ಮಾಡುವ ಕಾಲದಲ್ಲಿ, ನ್ಯಾಯಪಂಚಾಯತಿಯಲ್ಲಿ ಕೂಡ್ರಬಾರದು.

ಯಾವನೊಬ್ಬ ನ್ಯಾಯಪಂಚಾಯತಿಯ ಸಭಾಸದನು ಯಾವದೊಂದು ದಾವೆ ಅಥವಾ ಖಟ್ಲೆಯಲ್ಲಿ ಪಕ್ಷಕಾರನಾಗಿರುವನೋ ಅಥವಾ ಸಂಬಂಧಪಡುವನೋ ಹ್ಯಾಗೆಂಬ ಸಂಬಂಧದ ಯಾವದೇ ವಿವಾದವು, ಇಂಥ ದಾವೆ ಅಥವಾ ಖಟ್ಲೆಯ ಒಬ್ಬ ಪಕ್ಷಕಾರನಿಂದ ಲೇಖೀ ಅರ್ಜಿ ಮಾಡಲ್ಪಡಲಾಗಿ ಕಲೆಕ್ಟರನ ಕಡೆಗೆ ಅಥವಾ ಅವನು ಈ ಬಗ್ಗೆ ಅಧಿಕಾರ ಕೊಡಬಹುದಾದ ಇತರ ಅಮಲದಾರನ ಕಡೆಗೆ ನಿಕಾಲೆಗಾಗಿ ಕಳುಹಿಸಲ್ಪಡಬೇಕು ಕಲೆಕ್ಟರನ ಅಥವಾ ಇಂಥ ಅಮಲದಾರನ ನಿಕಾಲೆಯು ಕೊನೆಯದಾಗುವದು.

ಈ ಕಲಮಿನಲ್ಲಿ ಕೊಟ್ಟ ಪರಿಸ್ಥಿತಿಯು ಕಂಡುಬಂದರೆ ಪಕ್ಷಕಾರನಿಗೆ ನ್ಯಾಯಪಂಚಾಯತಿಯೆದುರಿನಲ್ಲಿ ಲೇಖಿ ಅರ್ಜಿ ಮಾಡಿ, ತನ್ನ ತಕರಾರು ಮುಂದಿಡಲಿಕ್ಕೆ ಬರುತ್ತದೆ. ಅರ್ಥಾತ್ ಈ ತಕರಾರು ನ್ಯಾಯಪಂಚಾಯತಿಯ ಸದಸ್ಯರ ವಿರುದ್ಧವಾದದ್ದೇ ಇರುವದು. ಅಂತೇ ಈ ತಕರಾರಿನ ನಿರ್ಣಯ ಮಾಡಲು ಅಧಿಕಾರವಿಲ್ಲ. ಯಾಕಂದರೆ, ಸ್ವಂತದ ವಿರುದ್ಧವಾದ ತಕರಾರಿನ ನಿರ್ಣಯವನು ತಾನೇ ಮಾಡುವದು ನ್ಯಾಯ–ನೀತಿಯ ವಿರುದ್ಧವಾಗಿದೆ. ಇಂಥ ಪರಿಸ್ಥಿತಿಯಲ್ಲಿ ನ್ಯಾಯಪಂಚಾಯತಿಯು ಕಲೆಕ್ಟರ ಇಲ್ಲವೆ ಕಲೆಕ್ಟರನು ಯಾವನಿಗೆ ಅಧಿಕಾರ ಕೊಡುವನೋ ಅಂಥ ಅಮಲದಾರ (ಅಧಿಕಾರಿ)ನ ಕಡೆಗೆ ಪಕ್ಷಕಾರನ ತಕರಾರಿಯ ಅರ್ಜಿ ನಿರ್ಣಯಕ್ಕಾಗಿ ಕಳಿಸಲಿಕ್ಕೆ ಬೇಕು. ಈ ಬಗೆಯ ಕೆಲಸದಲ್ಲಿ ವರಿಷ್ಠರ (ಮೇಲಧಿಕಾರಿಗಳ) ನಿರ್ಣಯವಾಗುವವರೆಗೆ ಕೆಲಸವನ್ನು ತಹಕೂಬ (ತಡೆಹಿಡಿದು) ಇಡಲಿಕ್ಕೆಬೇಕು.

ಸ್ಥೂಲದೃಷ್ಟಿಯಿಂದ ನ್ಯಾಯತತ್ವಕ್ಕನುಸಾರವಾಗಿ ಮತ್ತು ವಿಶಿಷ್ಟ ದೃಷ್ಟಿಯಿಂದ ಸಿವ್ಹಿಲ್ ಮತ್ತು ಕ್ರಿಮಿನಲ್ ಪ್ರೊಸೀಜರ ಕೋಡಿನ ನಿಯಮಕ್ಕೆ ಅನುಸಾರವಾಗಿಯೇ ಮೇಲಿನ ಕಲಮು ಅದೆ.

ಕಲಮು ೮೭ (ಪೋಟ ಕಲಮು ೧ ಮತ್ತು ೩) ನೋಡು.

೫೧. ನಿರ್ಣೀತ ಪ್ರಸಕ್ತಿಗಳ ಮತ್ತು ಬಾಕಿ ಇರುವ ದಾವೆ ಮತ್ತು ಖಟ್ಲೆಗಳು-(೧) ಅದೇ ಪಕ್ಷಕಾರರೊಳಗೆ ಅಥವಾ ಅವರು ಹಕ್ಕು ಹೇಳುವವರೊಳಗೆ ಈ ಮುಂಚೆ ದಾಖಲಾದ ದಾವೆಯಲ್ಲಿ ಯೋಗ್ಯ ಹುಕಮತ್ತಿರುವ ಕೋರ್ಟಿನಲ್ಲಿ ನಿರ್ಣಯಿಸದೆ ಬಾಕಿ ಇರುವ ಅಥವಾ ಅವರಿಂದ ಸುನಾವಣಿ ಮಾಡಲ್ಪಟ್ಟು ನಿಕಾಲಿ ಮಾಡಲ್ಪಟ್ಟ ಯಾವದೇ ಸಂಗತಿಯ ಸಂಬಂಧದಿಂದ ಯಾವದೇ ದಾವೆ ಅಥವಾ ಮುದ್ದೆಯ ಇನಸಾಫನ್ನು ಯಾವದೇ ನ್ಯಾಯಪಂಚಾಯತಿಯು ಮಾಡಬಾರದು

(೨) ಯಾವದೇ ಅಪರಾಧದ ಬಗ್ಗೆ ಆರೋಪಿತ ಮನುಷ್ಯನ ಇನಸಾಫು ಮಾಡಲ್ಪಟ್ಟಲ್ಲಿ, ಇಂಥ ಅಪರಾಧವನ್ನು ಅಥವಾ ಅವೇ ಸಂಗತಿಗಳ ಮೇಲೆ, ಆರೋಪಿತನ ಮೇಲೆ ಹೊರಿಸಲ್ಪಡಬಹುದಾದ ಅಥವಾ ಅಪರಾಧ ಸಾಬೀತು ಮಾಡಲ್ಪಡಬಹುದಾದ ಇತರ ಯಾವದೇ ಅಪರಾಧವನ್ನು ಯಾವದೇ ನ್ಯಾಯಪಂಚಾಯತವು ಹಿಡಿಯಬಾರದು.

ಒಮ್ಮೆ ಆದ ನಿರ್ಣಯವನ್ನು ಮೇಲಿಂದ ಮೇಲೆ ಬದಲಾಯಿಸುವ (ರೀಜ್ಯುಡಿಕೇಟ) ಮಾಡುವ ಅನುವು ಇದ್ದರೆ, ಪಕ್ಷಕಾರರೊಳಗಿನ ವ್ಯಾಜ್ಯವು ಎಂದಿಗೂ ಅಗಲಾರದು, ಮತ್ತು ನ್ಯಾಯದಾನದ ನಿರ್ಣಯದ ಸ್ವರೂಪಕ್ಕೆ ಧಕ್ಕೆ ಬರುವದು. ನ್ಯಾಯದಾನದ ಈ ತತ್ವವನ್ನು ಈ ಕಲಮಿನಲ್ಲಿ ಸೇರಿಸಲಾಗಿದೆ. ಈ ಸಂಬಂಧದಲ್ಲಿ ಸಿವಿಲ ಹಾಗೂ ಕ್ರಿಮಿನಲ್ ಪ್ರೊಸಿಜರ ಕೋಡಿನ ವಿಶಿಷ್ಟ ಕಲಮುಗಳೂ ಇದೇ ತತ್ವಕ್ಕೆ ಅನುಸಾರವಾದವುಗಳು ಇರುವವು.

೫೨. ದಾವೆಗಳಲ್ಲಿ ಇಡೀ ಹಕ್ಕಿನ ಸಮಾವೇಶವಾಗೋಣ--- ನ್ಯಾಯಪಂಚಾಯತದ ಮುಂದೆ ಮಾಡಲ್ಪಟ್ಟ ಪ್ರತಿಯೊಂದು ದಾವೆಯಲ್ಲಿ, ವಿವಾದದ ವಿಷಯದ ಸಂಬಂಧದಿಂದ ವಾದಿಗೆ ಮಾಡಲಿಕ್ಕೆ ಹಕ್ಕಿರುವ ಇಡೀ ದಾವೆಯು ಸೇರುವದು, ಆದರೆ ಅವನು ಸದರಿ ದಾವೆಯನ್ನು ನ್ಯಾಯಪಂಚಾಯತದ ಅಧಿಕಾರ ಸೀಮೆಯೊಳಗೆ ತರುವ ಬಗ್ಗೆ ತನ್ನ ಹಕ್ಕಿನ ಯಾವದೇ ಭಾಗವನ್ನು ಬಿಟ್ಟುಕೊಡಬಹುದು

ಯಾವನೊಬ್ಬ ವಾದಿಯು ತನ್ನ ಹಕ್ಕಿನ ಸಂಬಂಧದಿಂದ ದಾವೆ ಮಾಡಲಿಕ್ಕೆ ಬುದ್ಧಿಪೂರ್ವಕವಾಗಿ ತಪ್ಪಿದರೆ ಅಥವಾ ಅದರ ಯಾವದೇ ಭಾಗವನ್ನು ಬಿಟ್ಟುಕೊಟ್ಟರೆ, ಹೀಗೆ ತಪ್ಪಿದ ಅಥವಾ ಬಿಟ್ಟುಕೊಟ್ಟ ಭಾಗದ ಸಂಬಂಧದಿಂದ ಅವನು ಆ ತರುವಾಯ ದಾವೆ ಮಾಡಬಾರದು.

೫೩. ದಾವೆ ಮತ್ತು ಖಟ್ಲೆಗಳಿಗೆ ಮರ್ಯಾದೆಯು — (೧) ದಾವೆ ಮಾಡಲಿಕ್ಕೆ ಮೊದಲಿಗೆ ಹಕ್ಕು ಉಂಟಾದಂದಿನಿಂದ ಒಂದು ವರ್ಷವು

ಕಳೆದ ತರುವಾಯ ಯಾವದೊಂದು ನ್ಯಾಯಪಂಚಾಯತವು ಯಾವ ದೊಂದು ದಾವೆಯನ್ನು ಹಿಡಿಯಬಾರದು.

(೨) ಅಪರಾಧವು ಮಾಡಲ್ಪಟ್ಟ ತಾರೀಖಿನಿಂದ ಒಂದು ತಿಂಗಳು ಮುಗಿದ ಬಳಿಕ ನ್ಯಾಯಪಂಚಾಯತವು ಖಟ್ಲೆಯ ವಿಚಾರಣೆಯನ್ನು ಮಾಡಬಾರದು.

೫೪. ದಾವೆಗಳನ್ನು ಯಾವ ನ್ಯಾಯಪಂಚಾಯತಿಯ ಮುಂದೆ ಮಾಡಬೇಕು—ಈ ಆಕ್ಟಿನನ್ವಯದ ಪ್ರತಿಯೊಂದು ದಾವೆಯು, ಆ ದಾವೆ ಯನ್ನು ಮಾಡುವ ಕಾಲಕ್ಕೆ ಪ್ರತಿವಾದಿಯು, ಅಥವಾ ಒಬ್ಬನಿಗಿಂತ ಹೆಚ್ಚು ಮಂದಿ ಇದ್ದರೆ, ಪ್ರತಿಯೊಬ್ಬ ಪ್ರತಿವಾದಿಯು ಯಾವ ಗ್ರಾಮದಲ್ಲಿ ವಾಸಿ ಸುತ್ತಿರುವನೋ ಆ ನ್ಯಾಯಪಂಚಾಯತಿಯ ಮುಂದೆ ಮಾಡಲ್ಪಡಬೇಕು, ಮತ್ತು ದಾವೆಯ ಕಾರಣವು ಎಲ್ಲಿ ಉದ್ಭವಿಸಿತೆಂಬದರ ವಿಚಾರ ಮಾಡ ಬಾರದು.

೫೫ ಖಟ್ಲೆಗಳನ್ನು ಯಾವ ನ್ಯಾಯಪಂಚಾಯತಿಯ ಮುಂದೆ ಮಾಡ ಬೇಕು— ಈ ಆಕ್ಟಿನನ್ವಯದ ಪ್ರತಿಯೊಂದು ಖಟ್ಲೆಯು ಅಪರಾಧವು ಯಾವ ಗ್ರಾಮದಲ್ಲಿ ಮಾಡಲ್ಪಟ್ಟಿತೋ ಆ ಗ್ರಾಮದ ನ್ಯಾಯಪಂಚಾಯ ತಿಯ ಮುಂದೆ ಮಾಡಲ್ಪಡಬೇಕು.

೫೬ ಫಿರ್ಯಾದನ್ನು ತಿರಿಗಿ ಕೊಡುವದು.— ಯಾವನೇ ಮ್ಯಾಜಿಸ್ಟ್ರೇ ಟನು, ನ್ಯಾಯಪಂಚಾಯತಿಯಿಂದ ವಿಚಾರಿಸಲ್ಪಡಬಹುದಾದ ಅಪರಾಧ ವಾಗುವಂಥ ಸಂಗತಿಗಳ ವಿಷಯದ ಫಿರ್ಯಾದು ಮುಟ್ಟಿದ ಬಳಿಕ, ಮ್ಯಾಜಿಸ್ಟ್ರೇಟನಿಗೆ ಸಮಾಧಾನವಾಗುವಂತೆ ವಿರುದ್ಧ ಕಾರಣವೇನಾದರೂ ತೋರಿಸಲ್ಪಡದಿದ್ದರೆ, ಅದನ್ನು ವಿಚಾರಿಸಲಿಕ್ಕೆ ಹುಕುಮತು ಇರುವ ನ್ಯಾಯಪಂಚಾಯತಿ ಮುಂದೆ ಹಾಜರ ಮಾಡುವ ಸಲುವಾಗಿ ಆ ಫಿರ್ಯಾದನ್ನು ತಿರಿಗಿ ಕೊಡಬೇಕು.

ನ್ಯಾಯಪಂಚಾಯತಿಯ ಕಡೆಗೆ ಫಿರ್ಯಾದಿ ದಾಖಲ ಮಾಡದಿರುವ ನಂಬಿಕೆಗೆ ಯೋಗ್ಯ ವಾದ (ಖಾತ್ರಿ ಲಾಯಖ) ಕಾರಣವು ಇದ್ದ ಹೊರತು ಮ್ಯಾಜಿಸ್ಟ್ರೇಟರಿಗೆ ತಮ್ಮ ಕಡೆಗೆ ಫಿರ್ಯಾದಿ ತೆಗೆದುಕೊಳ್ಳಲಿಕ್ಕೆ ಬರಲಾರದು.

೫೭ ದಾವೆಗಳಲ್ಲಿ ಮತ್ತು ಖಟ್ಲೆಗಳಲ್ಲಿ ಕೋರ್ಟುಗಳ ಹುಕುಮತಿಗೆ ಅಡ್ಡಿ—ಆಯಾ ಕಾಲಕ್ಕೆ ಅಮಲಿನಲ್ಲಿರುವ ಯಾವದೇ ಕಾಯದೆಯಲ್ಲಿ ಯಾವದೇ ಮಜಕೂರು ಇದ್ದರೂ, ಪ್ರಸಂಗವಿದ್ದಂತೆ, ಡಿಸ್ಟ್ರಿಕ್ಟ ಕೊರ್ಟು ಅಥವಾ ಸೆಶನ್ಸಕೋರ್ಟು ೭೭ನೇ ಅಥವಾ ೮೭ನೇ ಕಲಮಿನನ್ವಯ ಲೇಖೀ

**ಹುಕುಮನ್ನು ಕೊಟ್ಟ ಹೊರ್ತು ಮತ್ತು ಕೊಡುವವರೆಗೆ, ೫೬ನೇ ಕಲಮಿನ ಠರಾವುಗಳಿಗೊಳಪಟ್ಟು ಯಾವದೇ ಕೋರ್ಟು, ೩೯ ನೇ ಕಲಮಿನಲ್ಲಿ ವಿವರಿಸಲ್ಪಟ್ಟ ಯಾವದೇ ದಾವೆಯನ್ನು ಹಿಡಿಯಬಾರದು ಅಥವಾ ೪೧ನೇ ಕಲಮಿನಲ್ಲಿ ವಿವರಿಸಲ್ಪಟ್ಟ ಯಾವದೇ ಖಟ್ಲೆಯ ವಿಚಾರಣೆಯನ್ನು ಮಾಡಬಾರದು.**

ಕಲಮು ೩೯ ರ ಕೆಳಗೆ ನಮೂದಿಸಿದ ದಿವಾಣಿ ದಾವೆಗಳು [ ಅಂದರೆ ಕಲಮು ೪೦ ರಲ್ಲಿ ಕೊಟ್ಟವುಗಳನ್ನು ಬಿಟ್ಟು ] ಮತ್ತು ಕಲಮು ೪೧ ರಲ್ಲಿ ಕೊಟ್ಟ ಫೌಜದಾರಿ ಖಟ್ಲೆ ಸರ್ವಸಾಧಾರಣವಾಗಿ ನ್ಯಾಯಪಂಚಾಯತಿಯ ಹೊರತಾಗಿ, ಎರಡನೇ ಯಾವದೇ ಕೋರ್ಟಿಗೆಇಲ್ಲವೆ ಮ್ಯಾಜಿಸ್ಟ್ರೇಟನಿಗೆ ನಡಿಸಲಿಕ್ಕೆ ಈ ಕಲಮಿನಿಂದ ಪ್ರತಿಬಂಧ (ಅಡ್ಡಿ) ಮಾಡಲಾಗಿದೆ.

ಈ ವಿಷಯಕ್ಕೆ ಸಂಬಂಧಪಟ್ಟ ಕಲಮುಗಳು— ದಿವಾಣಿ ದಾವೆಯ ಸಂಬಂಧವಾಗಿ ಕಲಮು ೩೮, ೩೯, ಮತ್ತು ೪೦; ಫೌಜದಾರಿ ಖಟ್ಲೆಯ ಸಂಬಂಧವಾಗಿ ಕಲಮು ೪೧, ೪೨ ಮತ್ತು ೪೩; ಹೊರತಾಗಿ ಎರಡೂ ಕೆಲಸಗಳಿಗೆ ಲಾಗು ( ಹೊಂದಿಕೆ ) ಆಗುವಂಥ ಕಲಮು ೫೬, ೫೭, ೭೭, ೮೭.

**೫೮ ನ್ಯಾಯಪಂಚಾಯತಿ ಇರುವ ಗ್ರಾಮಕ್ಕೆ ಸನ್ ೧೮೬೭ನೇ ಇಸವಿಯ ಮುಂಬಯಿಯ ಆಕ್ಟು ನಂಬರು ೮ ರ ೧೪ನೇ, ೧೫ನೇ, ೧೬ನೇ ಕಲಮುಗಳು ಲಾಗೂ ಆಗಬಾರದು.— ಸನ್ ೧೮೬೭ನೇ ಇಸವಿಯ ಮುಂಬಯಿಯ ಗ್ರಾಮ ಪೋಲೀಸ ಆಕ್ಟಿನಲ್ಲಿ ಏನಿದ್ದಾಗ್ಯೂ, ಸದರಿ ಆಕ್ಟಿನ ೧೪ನೇ ೧೫ನೇ ೧೬ನೇ ಕಲಮುಗಳಲ್ಲಿಯ ಠರಾವುಗಳು, ೩೭ನೇ ಕಲಮಿನನ್ವಯ ನ್ಯಾಯಪಂಚಾಯತವು ರಚಿಸಲ್ಪಟ್ಟಿರುವ ಯಾವದೇ ಗ್ರಾಮಕ್ಕೆ ಲಾಗೂ ಆಗಲಿಕ್ಕಿಲ್ಲ.**

ಈ ಗ್ರಾಮ ಪೋಲೀಸ ಆಕ್ಟಿನ ೧೪ನೇ ಕಲಮಿನ ಪ್ರಕಾರ, ಪೋಲೀಸ ಗೌಡನಿಗೆ ನ್ಯಾಯಾಧೀಶನ ಅಧಿಕಾರಗಳಿರುವವು. ಮತ್ತು ಅವುಗಳ ಆಧಾರದಿಂದ ಅವನಿಗೆ ೨೪ ತಾಸುಗಳ ವರೆಗೆ ಗುನ್ಹೆಗಾರನಿಗೆ ( ಅಪರಾಧಿಗೆ ) ಕೈಸೆರೆಯ ( ಅಟಕಿನ ) ಶಿಕ್ಷೆ ಕೊಡಲು ಬರುತ್ತದೆ. ಹೊರತಾಗಿ ಕಲಮು ೧೫ ಹಾಗೂ ೧೬ ರಂತೆ ಜಿಲ್ಹಾ ಮ್ಯಾಜಿಸ್ಟ್ರೇಟನು ಹೆಚ್ಚಿನ ಅಧಿಕಾರ ಕೂಡ ಪೋಲೀಸ ಗೌಡನಿಗೆ ಕೊಡಬಹುದು. ನ್ಯಾಯಪಂಚಾಯತವು ಯಾವ ಊರಲ್ಲಿರುವದೋ, ಆ ಊರ ಪೋಲೀಸ ಗೌಡನ ಈ ಅಧಿಕಾರಗಳನ್ನು ತೆಗೆದುಕೊಳ್ಳುವದರಲ್ಲಿ ಬಂದಿವೆ.

**೫೮. ಅ. ಹುದ್ದೆಯ ಅವಧಿಯು ಮುಗಿದ ನಂತರ ನ್ಯಾಯಪಂಚಾಯತದ ಮುಂದೆ ಚಾಲೂ ಇರುವ ಖಟ್ಲೆಗಳು:— ಯಾವದೊಂದು ಎರಡನೇ**

ನ್ಯಾಯಪಂಚಾಯತಿಯ ಮೆಂಬರರ ಹುದ್ದೆಯ ಅವಧಿಯು ಮುಗಿದ ಬಳಿಕ ಹೊಸತಾಗಿ ರಚಿಸಲ್ಪಟ್ಟ ನ್ಯಾಯಪಂಚಾಯತಿಯು ಅಥವಾ ೧೦೬ನೇ ಕಲಮಿನನ್ವಯ ಎರಡನೇ ಯಾವದೊಂದು ಬೆಂಚು ಮುರಿಯಲ್ಪಟ್ಟ ಬಳಿಕ ಹೊಸತಾಗಿ ರಚಿಸಲ್ಪಟ್ಟ ನ್ಯಾಯಪಂಚಾಯತ ಇಂಥ ಅವಧಿಯು ಮುಗಿದ ತಾರೀಖಿನ ದಿವಸ ಅಥವಾ ಹೀಗೆ ಮುರಿಯಲ್ಪಟ್ಟ ತಾರೀಖಿನ ದಿವಸ ಅದರ ಮುಂದೆ ಚಾಲು ಇದ್ದ ಯಾವತ್ತು ದಾವೆಗಳ, ಖಟ್ಲೆಗಳ ಮತ್ತು ವ್ಯವಹರಣೆಗಳ ಸುನಾವಣೆಯನ್ನು ಮತ್ತು ನಿಕಾಲೆಯನ್ನು ಮಾಡತಕ್ಕದ್ದು.

ಆದರೆ ಗೊತ್ತುಪಡಿಸುವದೇನಂದರೆ, ಇಂಥ ದಾವೆಗಳ, ಖಟ್ಲೆಗಳ ಮತ್ತು ವ್ಯವಹರಣೆಗಳ ಸುನಾವಣೆಯು, ಹೊಸತಾಗಿ ರಚಿಸಲ್ಪಟ್ಟ ನ್ಯಾಯ ಪಂಚಾಯತಿಯ ಮುಂದೆ, ಇಂಥ ದಾವೆಗಳನ್ನು, ಖಟ್ಲೆಗಳನ್ನು ಮತ್ತು ವ್ಯವಹರಣೆಗಳನ್ನು ಅದರ ಮುಂದೆ ಹೊಸತಾಗಿ ದಾಖಲ ಮಾಡಿದರೆ ಹ್ಯಾಗೋ ಹಾಗೆಯೇ, ಹೊಸತಾಗಿ ಪ್ರಾರಂಭಿಸಲ್ಪಡಬೇಕು.

## ಬಾಬಿನ ಸಮಾರೋಪ

ಪಂಚಾಯತಿಯು ಸಭಾಸದ ಚುನಾವಣೆ ಆದ ಮೇಲೆ, ಪಂಚಾಯತಿಯು ಸ್ಥಾಪನೆ ಆಯಿತೆಂದು ಅನ್ನಲಿಕ್ಕೆ ಬರುತ್ತದೆ. ಪಂಚಾಯತಿಯು ಸ್ಥಾಪನವಾದ ಮೇಲೆ ಪಂಚಾಯತಿಯ ಬೆಂಚಿನ ಚುನಾವಣೆಯು ಕೂಡಲೆ (ಮೊದಲನೇ ಸಭೆಯಲ್ಲಿ) ಆಗಲಿಕ್ಕೆಬೇಕು. ಈ ಆಯ್ಕೆಯು ಪಂಚಾಯತಿಯು ಸ್ವತಃ ಆರಿಸಿ ಬಂದ ಸದಸ್ಯರೊಳಗಿಂದಲೇ ಆಗತಕ್ಕದ್ದಿರುತ್ತದೆ. ಹೀಗೆ ಚುನಾಯಿಸಿದ ೫ ಸಭಾಸದರ ಬೆಂಚು (ನ್ಯಾಯದಾನ ಮಂಡಲವು) ಆ ಊರಿನವರಾಗುವರು. ಈ ಬೆಂಚು ಅಂದರೆ ಅದರೊಳಗಿನ ಸಭಾಸದರು ತಮ್ಮೊಳಗಿನ ಒಬ್ಬನನ್ನು ಚೇರಮನ್ನನ ಸ್ಥಳದ ಸಲುವಾಗಿ ಆರಿಸಲಿಕ್ಕೆಬೇಕು.

ಈ ಚುನಾವಣೆಯೊಳಗಿನ ಪರಂಪರೆಯೊಳಗಿನ ಮೊದಲನೇ ಘಟಕವೆಂದರೆ, ಗ್ರಾಮ ಪಂಚಾಯತಿಯು ಒಟ್ಟಾರೆ ಸಂಯುಕ್ತ ಮತದಾರ ಸಂಸ್ಥೆ ಆಗಿದೆ. ಎರಡನೆಯ ಘಟಕವೆಂದರೆ, ಚುನಾಯಿಸಿ ಬಂದ ಪಂಚಾಯತಿಯು ಸಭಾಸದರು ಇರಿ; ಇವರು ತಮ್ಮೊಳಗಿಂದ ಆರಿಸಿಕೊಟ್ಟವರೇ ನ್ಯಾಯಮಂಡಲದ ಸದಸ್ಯರಾಗಿರುವರು. ಈ ನ್ಯಾಯಮಂಡಲದ ಸಭಾಸದರು ತಮ್ಮೊಳಗಿಂದ ಆಯ್ದುಕೊಟ್ಟ ಸದಸ್ಯನೇ ಮಂಡಲದ ಚೇರಮನ್ನನು.

ಬೆಂಚಿನ ಬರಹ ಮುಂತಾದ ಕಾರಕೂನನ (ಲೆಕ್ಕಿಗನ) ಕೆಲಸ ಮಾಡುವದಕ್ಕಾಗಿ ಪಂಚಾಯತಿಯ ಸೆಕ್ರೆಟರಿಯು ಜ್ಯೂಡಿಸಿಯಲ್ ಕಾರಕೂನನೆಂದು ಕೆಲಸ ಮಾಡತಕ್ಕದ್ದಿರುತ್ತದೆ. ಈ ಸೆಕ್ರೆಟರಿಯು ಸರಕಾರದಿಂದ ನೇಮಿಸಿಸಲ್ಪಡುತ್ತಾನೆ. ಇವರೂ ಅವನ ಮೇಲೆ ಪಂಚಾಯತಿಯ ಅಧಿಕಾರ ನಡೆಯುತ್ತದೆ

## ಈ ನ್ಯಾಯಪಂಚಾಯತಿ ಮುಂದೆ ಯಾವ ಯಾವ ಕೆಲಸಗಳು ಬರುವವು ;

ಕೆಲಸಗಳು

**ದಿವಾಣಿದಾವೆ**

ಸಾಧಾರಣವಾಗಿ ೨೫ ರೂ. ಗಳ ಒಳಗಿನ ದಾವೆಗಳು.
(ವಿಶೇಷ ಪ್ರಸಂಗದಲ್ಲಿ ೧೦೦ ರೂ ಗಳ ವರೆಗೆ ಕೂಡ)
ಕಲಮು ೩೯

**ಈ ಅಧಿಕಾರದ ಮರ್‍ಯಾದೆ.**

ಕ. ೪೦ ರಲ್ಲಿ ಕೊಟ್ಟಿವೆ.

**ಫೌಜದಾರಿಖಟ್ಲೆ**

ಪಿನಲು ಕೋಡದೊಳಗಿನ ಅಗಳೀಕ (ಬಲುಮೆ), ಅಪಮಾನ, ಅಪಕೀರ್ತಿ, ಕಳವು, ಗಾಯ ಗೊಳ್ಳುವದು, ಮುಂತಾದ್ದು.
ಕಲಮು ೪೭ ರಲ್ಲಿ ಹೇಳಿದ ಗುನ್ಹೆಗಳು.

**ಈ ಅಧಿಕಾರದ ಮರ್‍ಯಾದೆ.**

ಕ. ೪೮-೪೯ ರಲ್ಲಿ ಕೊಟ್ಟಿವೆ.

**ಶಿಕ್ಷೆಯ ಮರ್‍ಯಾದೆ.**

ಶರೀರದಂಡನೆಯ ಶಿಕ್ಷೆ ಕೊಡಲಿಕ್ಕೆ ಬರಲಾರದು ;
೧೦ ರೂ. ಗಿಂತ ಹೆಚ್ಚಿನ ದಂಡದ ಅಧಿಕಾರವಿಲ್ಲ ;
ಕಲಮು ೪೫ ನೋಡು.

ನ್ಯಾಯಪಂಚಾಯತಿ ಮೇಲೆ ಕೊಟ್ಟ ದಿವಾಣಿ ಮತ್ತು ಫೌಜದಾರಿ ಖಟ್ಲೆ ಹೇಗೆ ನಡಿಸಬೇಕು, ಇದರ (ಕಾರ್‍ಯಪದ್ಧತಿಯ) ವಿಚಾರ ಮುಂದಿನ ಬಾಬಿನಲ್ಲಿ (ಪ್ರಕರಣದಲ್ಲಿ) ಮಾಡಲಾಗಿದೆ.

---

## ಬಾಬು ೭

# ದಾವೆಯಲ್ಲಿ ಮತ್ತು ಖಟ್ಲೆಯಲ್ಲಿ ನ್ಯಾಯಪಂಚಾಯತವು ಕೆಲಸ ಮಾಡುವ ರೀತಿ

ಈ ಪ್ರಕರಣದೊಳಗಿನ ಪ್ರಮುಖ ವಿಷಯ:— ಕೆಲವು ರಾಯಿಸಿದ ಸ್ವರೂಪದ ದಿವಾಣಿ ಮತ್ತು ಫೌಜದಾರಿ ಕೆಲಸಗಳನ್ನು ನಡೆಸುವ ಅಧಿಕಾರ, ಪಂಚಾಯತಿಯ ನ್ಯಾಯ ಮಂಡಲಕ್ಕೆ ಕೊಟ್ಟ ಮೇಲೆ ಅವರು ಆ ಕೆಲಸಗಳನ್ನು ಹೇಗೆ ನಡಿಸಬೇಕು ಎಂಬ ಪ್ರಶ್ನೆಯು ಸಹಜವಾಗಿಯೇ ಮುಂದೆ ಬರುವದು. ಅದರ ಚರ್ಚೆಯೇ ಈ ಪ್ರಕರಣದಲ್ಲಿ ಕೊಡಲಾಗಿದೆ.

ದಿವಾಣಿ ಕೆಲಸಗಳನ್ನು ನಡಿಸುವದಕ್ಕಾಗಿ ಸಿವ್ಹಿಲ್ ಪ್ರೋಸಿಜರ ಕೋಡು—ದಿವಾಣಿ ದಾವೆ ನಡಿಸುವದರ ನಿಯಮ (ಕಟ್ಟು), ಮತ್ತು ಫೌಜದಾರಿ ಸಲುವಾಗಿ ಕ್ರಿಮಿನಲ್ ಪ್ರೋಸಿಜರ ಕೋಡು ಫೌಜದಾರಿ ಕೆಲಸ ನಡಿಸುವ ನಿಯಮದ ಇವೆರಡು ಸ್ವತಂತ್ರವಾದ ಕಾಯದೆಗಳು ಹಿಂದುಸ್ತಾನ ಸರಕಾರದವರು ಮಾಡಿರುವರು ; ಮತ್ತು ಹಿಂದುಸ್ತಾನದೊಳಗಿನ

ಯಾವತ್ತು ದಿವಾಣಿ-ಫೌಜದಾರಿ ಕೋರ್ಟಿನೊಳಗಿನ ಕೆಲಸಗಳು ಆಯಾ ಕಾಯದೆಗಳಂತೆ ನಡೆಯುತ್ತಿರುತ್ತವೆ. ಇವುಗಳ ಹೊರತು ಪುರಾವೆಯ ಕಾಯದೆ ಬೇರೆಯೇ ಇರುವದು. ನ್ಯಾಯದಾನದ ಕೆಲಸದಲ್ಲಿ ಈ ಕಾಯದೆಗಳ ಜ್ಞಾನದ ವಿಶೇಷ ಉಪಯೋಗವಿದೆ, ಎಂಬ ವಿಷಯದಲ್ಲಿ ಸಂದೇಹವಿಲ್ಲ. ಆದರೆ ಈ ಜ್ಞಾನವು ಎಷ್ಟು ಇಷ್ಟವಾಗಿದ್ದರೂ ಹಳ್ಳಿಯೊಳಗಿನ ನ್ಯಾಯಮಂಡಲದೊಳಗಿನ ಸದಸ್ಯರಲ್ಲಿ ಅದು ಪೂರಾ ನೆಲಸಿರಲಿಕ್ಕೆಬೇಕು. ಇಲ್ಲವೆ ಅವರು ಅದರ ಶಿಕ್ಷಣವನ್ನು ಪಡೆದಿರಲಿಕ್ಕೆಬೇಕು. ಹೀಗೆ ಆಗ್ರಹ ತೊಟ್ಟು ನಡೆಯುವಂತಿಲ್ಲ. ಆದುದರಿಂದ ಈ ಪಂಚಾಯತಿಯ ಕಾಯಿದೆಯಿಂದ, ನ್ಯಾಯಪಂಚಾಯತ ತನ್ನ ದಿವಾಣಿ ದಾವೆ ಮತ್ತು ಫೌಜದಾರಿ ಖಟ್ಲೆ ಹೇಗೆ ನಡಿಸಬೇಕು, ಎಂಬ ವಿಷಯವಾಗಿ ಸ್ವಲ್ಪದರಲ್ಲಿ ನಿಯಮಗಳನ್ನು ಹಾಕಿಕೊಟ್ಟಿರುವರು. ಮತ್ತು ಅದರಂತೆ ನ್ಯಾಯಮಂಡಲಗಳು ನಡೆದು, ಅವರು ತಮ್ಮ ಮುಂದೆ ಬರುವ ಕೆಲಸದೊಳಗಿನ ಸಂಗತಿಗಳ ಮನವರಿಕೆ (ಖಾತ್ರಿ) ಮಾಡಿಕೊಂಡರೆ ಸಾಕು. ಈ ಖಾತ್ರಿ ಅವರು ಸಿವ್ಹಿಲ್ ಇಲ್ಲವೆ ಕ್ರಿಮಿನಲ್ ಪ್ರೋಸಿಜರದ ಇಲ್ಲವೆ ಪುರಾವೆಯ ಕಾಯದೆಯಂತೆಯೇ ಮಾಡಿಕೊಳ್ಳಲಿಕ್ಕೇಬೇಕು; ಹೀಗೆ ಹಿಂದುಗಡೆಯಲ್ಲಿ ಆಗ್ರಹವಿಲ್ಲ.— ಇಷ್ಟೇ ಅಲ್ಲ, ಆದರೆ ಆ ಕಾಯದೆಯ ನಿಯಮಗಳ ಒಂದು ವೇಳೆ ಉಲ್ಲಂಘನೆಯಾದರೂ ಅಡ್ಡಿಯಿಲ್ಲ. ಹೀಗೆ ಈ ಬಾಬಿನೊಳಗಿನ ಕಲಮು ೬೬ರ ಸರಳಾರ್ಥವಿರುವದು.

ಯಾವದೇ ನ್ಯಾಯದಾನಕ್ಕೆ ಅವಶ್ಯವಾದ ೫ ಸಂಗತಿಗಳಿರುವವು. ಅವುಗಳಲ್ಲಿ ಮೊದಲನೇ ಮಹತ್ವದ ಮಾತೆಂದರೆ ವಿರುದ್ಧ ಪಕ್ಷಕ್ಕೆ ಇಲ್ಲವೆ ಪಕ್ಷಕಾರನಿಗೆ ಅವನ ವಿರುದ್ಧವಾಗಿ ಯಾವ ತಕರಾರು ಇರುವದು ಎಂಬುದರ ಮಾಹಿತಿ ಕೊಡುವದು. ಈ ಕೆಲಸದ ವಿರುದ್ಧ ಪಕ್ಷಕಾರನಿಗೆ ಸಮನಸು ತೆಗೆದು ಸಾಧ್ಯವಾಗುತ್ತದೆ.

ಎರಡನೇ ಸಂಗತಿ ಪ್ರತಿ-ಪಕ್ಷದ ಪಕ್ಷಕಾರನ ಉತ್ತರದ ಸಲುವಾಗಿ ಅವನಿಗೆ ಸಂದು— ಅವಕಾಶ ಕೊಡುವದು—ಅದನ್ನು ಕೇಳಿಕೊಳ್ಳುವದು–ನಮೂದಿಸುವದು.

ಮೂರನೇ ಸಂಗತಿ— ಪ್ರತಿಯೊಂದು ಪಕ್ಷಕ್ಕೆ ತಂತಮ್ಮ ಅಂಬೋಣ ಸಿದ್ಧಮಾಡುವದಕ್ಕಾಗಿ ಪುರಾವೆ ದಾಖಲ ಮಾಡುವ ಸವಲತ್ತು (ಅನುವು) ಕೊಡುವದು.

ನಿಕಾಲೆ (ತೀರ್ಪು) ಇದು ೪ನೆಯದು; ಮತ್ತು ಅಮಲಬಜಾವಣಿಯು ೫ನೆಯ ಸಂಗತಿ.

ನ್ಯಾಯದಾನಕ್ಕೆ ಅವಶ್ಯವಾಗಿರುವ ಇವೆಲ್ಲ ಸಂಗತಿಗಳು ನ್ಯಾಯಮಂಡಲದವರು ಹೇಗೆ ಸಾಧ್ಯಮಾಡಿಕೊಳ್ಳಬೇಕು; ಎಂಬ ವಿಷಯವಾಗಿ ಕಲಮುವಾರ ನಿಯಮ ಕೊಡಲಾಗಿವೆ.

**೬೭ ದಾವೆಗಳನ್ನು ಮತ್ತು ಖಟ್ಲೆಗಳನ್ನು ಹ್ಯಾಗೆ ಮಾಡಬೇಕು—ಈ ಆಕ್ಟಿನನ್ವಯ ನ್ಯಾಯಪಂಚಾಯತದ ಮುಂದೆ ದಾವೆಯನ್ನು ಅಥವಾ ಖಟ್ಲೆಯನ್ನು ಮಾಡಲಿಚ್ಛಿಸುವ ಯಾವನೇ ಮನುಷ್ಯನು, ಚೇಅರಮನ್ನನ ಕಡೆಗೆ ಅಥವಾ ಅವನು ಗ್ರಾಮದಲ್ಲಿ ಗೈರಹಾಜರ ಇದ್ದಾಗ್ಗೆ, ಆ ಚೇಅರಮನ್ನನು ಈ ಬಗ್ಗೆ ನೇಮಿಸಬಹುದಾದ ನ್ಯಾಯಪಂಚಾಯತದ ಮತ್ತೊಬ್ಬ ಸಭಾಸದನ ಕಡೆಗೆ, ಬಾಯಿಯಿಂದ ಅಥವಾ ಲೇಖಿಯಾಗಿ ಅರ್ಜಿ ಮಾಡಬೇಕು ಮತ್ತು ಅದೇ ಕಾಲಕ್ಕೆ ಗೊತ್ತುಪಡಿಸಿದ ಫೀಯನ್ನು ಕೊಡಬೇಕು.**

ದಾವೆ:— ದಿವಾಣಿ ದಾವೆ. ಪುಟ ೯, ವ್ಯಾಖ್ಯೆ (೧೩) ನೋಡು.

ಖಟ್ಲೆ:— ಫೌಜದಾರಿ ಖಟ್ಲೆ. ಪುಟ ೭, ವ್ಯಾಖ್ಯೆ (೨) ನೋಡು.

"ಠರಾಯಿಸಿದ ಫೀ"—ನ್ಯಾಯದಾನ ಮಂಡಲದ ಬಗ್ಗೆ ನಿಯಮ—ಫೋಟ ವಿಭಾಗ ಡ ದ ಕೆಳಗೆ, ದಾವೆ ದಾಖಲ ಮಾಡುವ ಬಗ್ಗೆ ಫೀಯ ನಿಯಮ ೧೭, ಪುಟ ೧೧೮ ರ ಮೇಲೆ ನೋಡಿರಿ.

**೬೦. ಅರ್ಜಿಯ ಸಾರಾಂಶವನ್ನು ಬರೆದಿಡಬೇಕು— ಅರ್ಜಿಯ ಸಾರಾಂಶವನ್ನು ಗೊತ್ತುಪಡಿಸಲ್ಪಟ್ಟ ರಜಿಸ್ಟರಿನಲ್ಲಿ ತಡಮಾಡದೆ ಬರೆದಿಡಬೇಕು ಮತ್ತು ಆ ರಜಿಸ್ಟರಿನ ಮೇಲೆ ಅರ್ಜದಾರನ ಸಹಿಯನ್ನು ಅಥವಾ ಹೆಬ್ಬಟ್ಟಿನ ಮುದ್ರೆಯನ್ನು ತೆಗೆದುಕೊಳ್ಳಬೇಕು, ಮತ್ತು ಚೆಅರಮನ್ನನು ಅಥವಾ ಅವನ ಗೈರಹಾಜರಿಯಲ್ಲಿ ೫೫ನೇ ಕಲಮಿನಿಂದ ಅಧಿಕಾರ ಪಡೆದ ಯಾವನೇ ಸಭಾಸದನು ಸದರಿ ರಜಿಸ್ಟರಿಗೆ ಸಹಿ ಮಾಡಬೇಕು**

"ಠರಾಯಿಸಿದ ರಜಿಸ್ಟರದಲ್ಲಿ"— ಠರಾಯಿಸಿದ ರಜಿಸ್ಟರಗಳು (ನಮೂನೆ) ಹಿಂದೆ ಪುಟ ೧೧೪-೧೧೭ ರ ಮೇಲೆ ಕೊಟ್ಟಿವೆ.

**೬೧ ವಾದಿಯು ಅಥವಾ ಫಿರ್ಯಾದಿಯು ನ್ಯಾಯಪಂಚಾಯತದ ಲಗ್ತು ಮುಂದಿನ ಸಭೆಯಲಿ ಹಾಜರ ಆಗಬೇಕು—ಕಲಮು ೫೯ ಇದರ ಠರಾವುಗಳ ಪ್ರಕಾರ ಮಾಡಲ್ಪಟ್ಟ ಪ್ರತಿಯೊಂದು ದಾವೆಯನ್ನು ಅಥವಾ ಖಟ್ಲೆಯನ್ನು ನ್ಯಾಯಪಂಚಾಯತದ ಲಗ್ತು ಮುಂದಿನ ಸಭೆಯಲ್ಲಿ ಅದರ ಮುಂದೆ ತರಬೇಕು, ಮತ್ತು ಪ್ರಸಂಗದ ಪ್ರಕಾರ ವಾದಿಗೆ ಅಥವಾ ಫಿರ್ಯಾದಿಗೆ, ಸದರಿ ಅರ್ಜಿಯು ಮಾಡಲ್ಪಟ್ಟ ಕಾಲದಲ್ಲಿ, ಇಂಥ ಸಭೆಯ ಬಗ್ಗೆ ನೇಮಿಸಲ್ಪಟ್ಟ ವೇಳೆಯನ್ನು ಮತ್ತು ಸ್ಥಳವನ್ನು ತಿಳಿಸಬೇಕು, ಮತ್ತು ಆ ಕಾಲಕ್ಕೆ ಮತ್ತು ಆ ಸ್ಥಳದಲ್ಲಿ ಹಾಜರ ಆಗಲಿಕ್ಕೆ ಅವನಿಗೆ ಹೇಳಬೇಕು**

**೬೨. ಪ್ರತಿವಾದಿಗೆ ಅಥವಾ ಆರೋಪಿಗೆ ಸಮನ್ಸು ತೆಗೆಯುವದು— ನ್ಯಾಯಪಂಚಾಯತವು ಅರ್ಜಿಯನ್ನು ಕೇಳಿಕೊಂಡ ಬಳಿಕ, ಪ್ರಸಂಗದ ಪ್ರಕಾರ ಪ್ರತಿವಾದಿಗೆ ಅಥವಾ ಆರೋಪಿಗೆ ಗೊತ್ತುಪಡಿಸಲ್ಪಟ್ಟ ನಮೂನೆಯಲ್ಲಿ ಒಂದು ಲೇಖಿ ಸಮನ್ಸನ್ನು ಬಜಾಯಿಸಬೇಕು, ಮತ್ತು ಸಮನ್ಸಿನಲ್ಲಿ ಹೇಳಿದ ವೇಳೆಗೆ ಮತ್ತು ಸ್ಥಳದಲ್ಲಿ ಹಾಜರ ಆಗಿ ತನ್ನ ಪುರಾವೆಯನ್ನು ಹಾಜರ ಮಾಡಲಿಕ್ಕೆ ಅವನಿಗೆ ಹೇಳಬೇಕು, ಮತ್ತು ಅದೇ ಕಾಲಕ್ಕೆ ವಾದಿಗೆ ಅಥವಾ ಫಿರ್ಯಾದಿಗೆ ಅಂಥ ವೇಳೆಗೆ ಮತ್ತು ಸ್ಥಳದಲ್ಲಿ ಹಾಜರ ಆಗಿ ತನ್ನ ಪುರಾವೆಯನ್ನು ಹಾಜರ ಮಾಡಲಿಕ್ಕೆ ಹೇಳಬೇಕು**

**ಆದರೆ ಗೊತ್ತುಪಡಿಸುವದೇನೆಂದರೆ ನ್ಯಾಯಪಂಚಾಯತವು ಅರ್ಜಿಯನ್ನು ಕೇಳಿಕೊಂಡು ವಾದಿಯನ್ನು ಅಥವಾ ಫಿರ್ಯಾದಿಯನ್ನು ಪರೀಕ್ಷಿಸಿದ ಬಳಿಕ, ಸಮನ್ಸನ್ನು ತೆಗೆಯಲಿಕ್ಕೆ ನಾಕಾರಿಸಬಹುದು, ಮತ್ತು ದಾವೆ**

ಯನ್ನು ಅಥವಾ ಫಿರ್ಯಾದನ್ನು ತೆಗೆದುಹಾಕಬಹುದು. ಆದರೆ ಅದು ಇದರಬಗ್ಗೆ ಕಾರಣಗಳನ್ನು ಬರೆದಿಡಬೇಕು

ಪಕ್ಷಕಾರನ ಅರ್ಜಿಯ ಮೇಲಿಂದ ಮತ್ತು ಅವನ ಜವಾಬಿನ ಮೇಲಿಂದ ಕೆಲಸ ಮುಂದೆ ನಡೆಸುವ ಕಾರಣವಿಲ್ಲೆಂದು ಕಂಡು ಬಂದರೆ, ಕೆಲಸ ತೆಗೆದು ಹಾಕುವ ಸಂಭವವಿದೆ. ಆದರೆ ಆ ಬಗೆಯ ಕಾರಣಗಳು ನಮೂದಿಸಲಿಕ್ಕೆಬೇಕು. ಅವು ವರಿಷ್ಠರ ಮಾಹಿತಿಗಾಗಿ ಅವಶ್ಯವಿರುತ್ತವೆ.

**೬೩. ಸಮನ್ಸನ್ನು ಯಾರು ಬಜಾಯಿಸಬೇಕು** — ಇಂಥ ಸಮನ್ಸನ್ನು ಸಾಮಾನ್ಯವಾಗಿ ಪಟೇಲನಿಂದ ಅಥವಾ ಗ್ರಾಮದ ಗೌಡನಿಂದ ಬಜಾಯಿಸುವಂತೆ ಮಾಡಬೇಕು ಯಾವದೊಂದು ಗ್ರಾಮದಲ್ಲಿ ಒಬ್ಬ ಮುಲಕೀ ಗೌಡನ ಮತ್ತು ಒಬ್ಬ ಪೋಲೀಸ ಗೌಡನು ಹೀಗೆ ಇಬ್ಬರು ಗೌಡರಿದ್ದಾಗ್ಗೆ ಸಮನ್ಸು ದಾವೆಯ ವಿಷಯದ್ದಿದ್ದರೆ ಮುಲಕೀ ಗೌಡನಿಂದ ಮತ್ತು ಖಟ್ಲೆಯ ವಿಷಯದ್ದಿದ್ದರೆ ಪೋಲೀಸ ಗೌಡನಿಂದ ಸಾಮಾನ್ಯವಾಗಿ ಬಜಾಯಿಸಲ್ಪಡಬೇಕು.

ಆದರೆ ಗೊತ್ತುಪಡಿಸುವದೇನಂದರೆ, ನ್ಯಾಯಪಂಚಾಯತವು ಆ ಸಮನ್ಸನ್ನು ಬೇರೆ ಯಾವನೇ ಮನುಷ್ಯನು ಬಜಾಯಿಸುವಂತೆ ಮಾಡಬಹುದು.

**೬೪ ಸಮನ್ಸನ್ನು ಬಜಾಯಿಸುವ ರೀತಿ** — ಸಮನ್ಸು ಎರಡು ಪ್ರತಿಯಲ್ಲಿ ಇದು ನ್ಯಾಯಪಂಚಾಯತದ ಅಧ್ಯಕ್ಷನಾದ ಸಭಾಸದನಿಂದ ಸಹಿ ಮಾಡಲ್ಪಟ್ಟಿರಬೇಕು, ಮತ್ತು ಅದಷ್ಟು ಮಟ್ಟಿಗೆ, ಪ್ರಸಂಗದ ಪ್ರಕಾರ ಸ್ವತಃ ಪ್ರತಿವಾದಿಯು ಅಥವಾ ಆರೋಪಿಯು ಮೇಲೆ ಬಜಾಯಿಸಲ್ಪಡಬೇಕು ಮತ್ತು ಬಜಾಯಿಸಲ್ಪಟ್ಟ ಬಗ್ಗೆ ಅವನ ಸಹಿಯನ್ನು ಅಥವಾ ಹೆಬ್ಬಟ್ಟಿನ ಮುದ್ರೆಯನ್ನು ತಕ್ಕೊಳ್ಳಬೇಕು. ಪ್ರತಿವಾದಿಯು ಅಥವಾ ಆರೋಪಿಯು ಸಿಗದಿದ್ದರೆ ಮತ್ತು ಅವನು ಸಮನ್ಸನ್ನು ತಪ್ಪಿಸುತ್ತಿದ್ದಾನೆಂದು ನ್ಯಾಯಪಂಚಾಯತಿಗೆ ಖಾತ್ರಿಯಾದರೆ ಅಥವಾ ಅವನು ಸಮನ್ಸನ್ನು ತೆಗೆದುಕೊಳ್ಳಲಿಕ್ಕೆ ನಾಕಾರಿಸಿದರೆ, ಅವನ ಕೂಡ ವಾಸಿಸುತ್ತಿರುವ ಅವನ ಕುಟುಂಬದಲ್ಲಿಯ ಯಾವನೇ ಪ್ರೌಢ ಗಂಡಸಿನ ಮೇಲೆ ಬಜಾಯಿಸಲಿಕ್ಕೆ ಅಥವಾ ಅವನು ಸಾಮಾನ್ಯವಾಗಿ ವಾಸಿಸುತ್ತಿರುವ ಮನೆಯ ಯಾವದೇ ಪ್ರಮುಖ ಸ್ಥಳದಲ್ಲಿ ಅದರ ನಕಲನ್ನು ಹಚ್ಚಲಿಕ್ಕೆ ನ್ಯಾಯಪಂಚಾಯತವು ಹುಕುಮು ಮಾಡಬಹುದು.

"ಸಮನಸಿನ ಎರಡು ಪ್ರತಿ ಮಾಡಲಿಕ್ಕೆಬೇಕು. .. .... .. ಬೇಕು "—

೧ (ಒಂದು ಪ್ರತಿ ಆರೋಪಿಗೆ ಇಲ್ಲವೆ ಪ್ರತಿವಾದಿಗೆ ಕೊಡತಕ್ಕದ್ದು ಮತ್ತು ಎರಡನೆಯದು, ಇಂಥ ಆರೋಪಿಯ ಇಲ್ಲವೆ ಪ್ರತಿವಾದಿಯ ಸಹಿ (ಅಂಕಿತ) ಇಲ್ಲವೆ ಹೆಬ್ಬೆರಳಿನ ಗುರುತು. ಸಮನಸು ಜಾಗೂ ಮಾಡಿದ ಗುರುತು ಎಂದು ತೆಗದುಕೊಳ್ಳತಕ್ಕದ್ದು.)

(೧) (ಅ) ಸದರಿ ಪ್ರತಿವಾದಿ ಇಲ್ಲವೆ ಆರೋಪಿ ಇಸಮು ದೊರೆಯದಿದ್ದಲ್ಲಿ, ಮತ್ತು
(ಬ) ಸದರೀ ಇಸಮು ಸಮನ್ಸು ಲಾಗೂ ಮಾಡಿಕೊಳ್ಳುವದನ್ನು ತಪ್ಪಿಸಿಕೊಳ್ಳುತ್ತಾನೆ, ಹೀಗೆ ನ್ಯಾಯಪಂಚಾಯತಿಗೆ ಮನವರಿಕೆಯಾದರೆ, ಇಲ್ಲವೆ

(೨) ಸದರಿ ಇಸಮು ಸಮನಸು ತಕ್ಕೊಳ್ಳಲಿಕ್ಕೆ ನಾಕರಿಸು (ಅಲ್ಲಗಳೆಯು) ತಿದ್ದರೆ

೨ ಅವನ ಸಂಗಡ ಇರುವ ಆತನ ಕುಟುಂಬದೊಳಗಿನ ತಿಳುವಳಿಕೆಯಿದ್ದ ಮನುಷ್ಯನ ಮೇಲೆ ಇಲ್ಲವೆ,

೩ ಅವನು ಸಾಧಾರಣವಾಗಿ ಯಾವ ಮನೆಯಲ್ಲಿ ಇರುತ್ತಿರುವನೋ ಆ ಮನೆಯ ಯಾವದೊಂದು ಸಹಜವಾಗಿ ಕಾಣುವಂಥ ಸ್ಥಳದಲ್ಲಿ ಸಮನಸಿನ ಒಂದು ನಕಲನ್ನು ಅಂಟಿಸಿ (ಹಚ್ಚಿ) ಸದರೀ ಇಸಮಿಗೆ ಸಮನಸು ಲಾಗೂ ಮಾಡುವ ಹುಕುಮು ಕೊಡುವ ಅಧಿಕಾರ ನ್ಯಾಯದಾನ ಮಂಡಲಕ್ಕಿರುವದು.

**೬೫. ಗ್ರಾಮದ ಹೊರಗೆ ಸಮನ್ಸನ್ನು ಬಜಾಯಿಸುವ ರೀತಿ:—** ಸಮನ್ಸನ್ನು ತೆಗೆದಾಗ್ಗೆ ಯಾವನೇ ಪ್ರತಿವಾದಿಯು ಅಥವಾ ಆರೋಪಿಯು ಪಂಚಾಯತದ ಗ್ರಾಮದ ಹೊರಗೆ ಇದ್ದರೆ, ನ್ಯಾಯಪಂಚಾಯತವು ಆ ಸಮನ್ಸನ್ನು ಕಲೆಕ್ಟರನ ಕಡೆಗೆ ಅಥವಾ ಕಲೆಕ್ಟರನಿಂದ ಈ ಬಗ್ಗೆ ಅಧಿಕಾರ ಪಡೆದ ಮಾಮಲೇದಾರನಿಗಿಂತ ಕಡಿಮೆಯಲ್ಲದ ದರ್ಜೆಯ ಯಾವನೇ ಅಮಲದಾರನ ಕಡೆಗೆ ಕಳುಹಿಸಬಹುದು, ಮತ್ತು ಕಲೆಕ್ಟರನು ಅಥವಾ ಇಂಥ ಅಮಲದಾರನು ಆ ಸಮನ್ಸು ತನ್ನ ಕೋರ್ಟಿನದು ಇದ್ದಂತೆಯೇ ಅದನ್ನು ಬಜಾಯಿಸುವಂತೆ ಮಾಡಬೇಕು.

**೬೬. ಕೆಲವು ಜನರಿಗೆ ದಾವೆಗಳಲ್ಲಿ ಹಾಜರ ಆಗುವದರಿಂದ ಮಾಫಿಯು:—** (೧) ದೇಶದ ರೂಢಿಗಳ ಮತ್ತು ರೀತಿಗಳ ಪ್ರಕಾರ ಸಾರ್ವಜನಿಕ ಸ್ಥಳದಲ್ಲಿ ಹಾಜರ ಆಗಲಿಕ್ಕೆ ಒತ್ತಾಯಪಡಿಸಲ್ಪಡಬಾರದಂಥ ಹೆಂಗಸರಿಗೆ, ಯಾವದೇ ದಾವೆಯಲ್ಲಿ ನ್ಯಾಯಪಂಚಾಯತದ ಮುಂದೆ ಸ್ವತಃ ಹಾಜರ ಆಗುವದರಿಂದ ಮಾಫಿ ಇರುವದು.

(೨) ಸನ್ ೧೯೦೮ನೇ ಇಸವಿಯ ಸಿವಿಲ್ ಪ್ರೊಸೀಜರ ಕೋಡಿನ ೧೩೩ನೇ ಕಲಮಿನನ್ವಯ ಯಾವದೇ ಕೋರ್ಟಿನಲ್ಲಿ ಸ್ವತಃ ಹಾಜರ ಆಗುವದರಿಂದ ಮಾಫು ಮಾಡಲ್ಪಟ್ಟ ಮನುಷ್ಯರಿಗೆ, ಯಾವದೇ ದಾವೆಯಲ್ಲಿ ನ್ಯಾಯಪಂಚಾಯತದ ಮುಂದೆ ಸ್ವತಃ ಹಾಜರ ಆಗುವದರಿಂದ ಸಹ ಮಾಫಿ ಇರುವದು

(೧) ಇದರಲ್ಲಿ ಪಡದಾನಶೀರ (ಬುರುಕಿಯ) ಸ್ತ್ರೀಯರ ಸಮಾವೇಶವಾಗುತ್ತದೆ. ಆದರೆ ಬಿಚ್ಚು ಕೋರ್ಟಿನಲ್ಲಿ ಅವರ ಪುರಾವೆಯನ್ನು ತೆಗೆದುಕೊಳ್ಳದೆ, ಚೇಂಬರಿನಲ್ಲಿ ಅದನು ತೆಗೆದುಕೊಳ್ಳಲಿಕ್ಕೆ ಬರುವದೆಂದು ಸಿವ್ಹಿಲ್ ಪ್ರೊಸಿಜರ ಕಲಮು ೧೩೨ ರಂತೆ ಅನ್ನಲಿಕ್ಕೆ ಬರುವದು.

೬೭. ಸಾಕ್ಷಿದಾರರಿಗೆ ಸಮುನ್ಸನ್ನು ತೆಗೆಯುವದು: – (೧) ಯಾವನೇ ಮನುಷ್ಯನ ಸಾಕ್ಷಿಯು ಅಥವಾ ಅವನು ಯಾವದೊಂದು ದಸ್ತೈವಜನ್ನು ಹಾಜರ ಮಾಡುವದು ಯಾವದೇ ದಾವೆಯಲ್ಲಿ ಅಥವಾ ಖಟ್ಲೆಯಲ್ಲಿ ಅವಶ್ಯವಿರುವದೆಂದು ನ್ಯಾಯಪಂಚಾಯತಿಗೆ ತೋರಿದಾಗ್ಗೆ, ಅದು, ಇಂಥ ಮನುಷ್ಯನಿಗೆ ಹಾಜರ ಆಗಲಿಕ್ಕೆ ಅಥವಾ ಇಂಥ ದಸ್ತೈವಜನ್ನು ಹಾಜರ ಮಾಡಲಿಕ್ಕೆ ಅಥವಾ ಮಾಡಿಸಲಿಕ್ಕೆ ಒತ್ತಾಯ ಪಡಿಸುವದಕ್ಕೆ ಅವನಿಗೆ ಒಂದು ಸಮುನ್ಸನ್ನು ತೆಗೆಯಬಹುದು, ಮತ್ತು ಇಂಥ ಮನುಷ್ಯನು ಆ ಸಮುನ್ಸಿನಲ್ಲಿ ಇದ್ದ ಹುಕುಮುಗಳನ್ನು ಪಾಲಿಸಲಿಕ್ಕೆ ಬದ್ಧನಿರುವನು. ಇಂಥ ಸಮುನ್ಸು ಇದರಲ್ಲಿ ಹಿಂದೆ ಠರಾಯಿಸಿದ ನಮೂನೆಯಲ್ಲಿರಬೇಕು ಮತ್ತು ಅಂಥ ರೀತಿಯಿಂದ ಬಜಾಯಿಸಲ್ಪಡಬೇಕು.

(೨) ಯಾವನೊಬ್ಬ ಸಾಕ್ಷಿದಾರನನ್ನು ಹಾಜರ ಪಡಿಸುವದು, ಆಯಾ ಪರಿಸ್ಥಿತಿಯಲ್ಲಿ ಅಯೋಗ್ಯವಿರುವ ತಡ, ಖರ್ಚು ಅಥವಾ ಅನನುಕೂಲತೆಯ ಹೊರ್ತು ಸಾಧ್ಯವಿರುವದಿಲ್ಲವೆಂದು ನ್ಯಾಯಪಂಚಾಯತದ ಅಭಿಪ್ರಾಯವಿದ್ದಾಗ್ಯೆ, ಅದು, ಆ ಸಾಕ್ಷಿದಾರನಿಗೆ ಸಮುನ್ಸು ತೆಗೆಯಲಿಕ್ಕೆ ಅಥವಾ ಆ ಸಾಕ್ಷಿದಾರನ ವಿರುದ್ಧ ಮೊದಲೇ ತೆಗೆಯಲ್ಪಟ್ಟ ಸಮುನ್ಸನ್ನು ಅಮಲಿನಲ್ಲಿ ತರಲಿಕ್ಕೆ ನಾಕಾರಿಸಬಹುದು.

(೩) ಯಾವದೇ ನ್ಯಾಯಪಂಚಾಯತವು ಗ್ರಾಮದ ಹೊರಗೆ ಇರುವ ಯಾವನೇ ಮನುಷ್ಯನಿಗೆ ಅವನ ಯೋಗ್ಯ ಖರ್ಚನ್ನು ತೀರಿಸಲಿಕ್ಕೆ ಯೋಗ್ಯವೆಂದು ನ್ಯಾಯಪಂಚಾಯತಿಗೆ ತೋರುವಷ್ಟು ಹಣವು ನ್ಯಾಯಪಂಚಾಯತದ ಕಡೆಗೆ ಠೇವು ಇಡಲ್ಪಟ್ಟ ಹೊರ್ತು, ಹಾಜರ ಆಗಲಿಕ್ಕೆ ಒತ್ತಾಯಪಡಿಸಬಾರದು, ಮತ್ತು ಪ್ರಸಂಗದ ಪ್ರಕಾರ, ಕಲೆಕ್ಟರನ ಅಥವಾ ೬೫ನೇ ಕಲಮಿನನ್ವಯ ಅಧಿಕಾರ ಪಡೆದ ಅಮಲದಾರನ ಅಭಿಪ್ರಾಯದಂತೆ, ಸದರಿ ದಾವೆಯ ಅಥವಾ ಖಟ್ಲೆಯ ಯೋಗ್ಯ ತೀರ್ಮಾನದ ಬಗ್ಗೆ ಇಂಥ ಯಾವನೇ ಮನುಷ್ಯನ ಹಾಜರಿಯು ಅವಶ್ಯವಿಲ್ಲವಾದರೆ, ಇಂಥ ಕಲೆಕ್ಟರನು ಅಥವಾ ಅಮಲದಾರನು ಹಾಗೆ ಶರಾ ಬರೆದು ಸದರಿ ಸಮುನ್ಸನ್ನು ನ್ಯಾಯಪಂಚಾಯತದ ಕಡೆಗೆ ತಿರಿಗಿ ಕಳುಹಿಸಬೇಕು.

(೪) ಸನ್ ೧೮೭೨ನೇ ಇಸವಿಯ ಹಿಂದುಸ್ಥಾನದ ಪುರಾವೆಯ ಆಕ್ಟಿನ ಠರಾವುಗಳನ್ವಯ ಅಥವಾ ಆಯಾ ಕಾಲಕ್ಕೆ ಅಮಲಿನಲ್ಲಿರುವ ಇತರ ಯಾವದೇ ಕಾಯದೆಯನ್ವಯ ಯಾವ ಸಾಕ್ಷಿಯನ್ನು ಕೊಡಲಿಕ್ಕೆ ಯಾವನೇ ಮನುಷ್ಯನಿಗೆ ಪರವಾನಗಿ ಇರುವದಿಲ್ಲವೋ ಅಥವಾ ಯಾವ

**ಪತ್ರವ್ಯವಹಾರವನ್ನು ಹೊರಗೆಡವಲಿಕ್ಕೆ ಒತ್ತಾಯಪಡಿಸಬಾರದೋ ಅಂಥ ಸಾಕ್ಷಿಯನ್ನು ಕೊಡಲಿಕ್ಕೆ ಅಥವಾ ಅಂಥ ಪತ್ರವ್ಯವಹಾರವನ್ನು ಹೊರಗೆಡವಲಿಕ್ಕೆ ಅಂಥ ಮನುಷ್ಯನಿಗೆ ಯಾವದೇ ನ್ಯಾಯಪಂಚಾಯತವು ಒತ್ತಾಯಪಡಿಸಬಾರದು.**

"ಸಾಕ್ಷಿದಾರನಿಗೆ ಸಮನ್ಸು" ಇದರ ನಮೂನೆ ಹಿಂದೆ ಪುಟ ೧೧೩ ರಲ್ಲಿ ಕೊಟ್ಟಿದೆ.

ಸಮನ್ಸಿನಂತೆ ಹಾಜರಾಗದೆ ಇರುವದರಿಂದಾಗುವ ಆಜ್ಞಾ-ಭಂಗದ (ಅಪ್ಪಣೆ ಮುರಿದ) ಅಪರಾಧಕ್ಕಾಗಿ ಪಿನಲ ಕೋಡಿನ ಕಲಮು ೧೭೪ ರಲ್ಲಿ ಶಿಕ್ಷೆ ಮತ್ತು ದಂಡ ಹೇಳಲಾಗಿದೆ.

(೧) ಸಮನಸಿನಂತೆ ಹಾಜರಾಗದ ಸಾಕ್ಷಿದಾರನ ಮೇಲೆ ಯಾವ ಇಲಾಜು (ಉಪಾಯ) ಮಾಡಲಿಕ್ಕೆ ಬರುವದು ಎಂಬದರ ಬಗ್ಗೆ ಈ ಕಾಯದೆಯಲ್ಲಿ ಯಾವದೇ ಉಲ್ಲೇಖವು ಇರುವದಿಲ್ಲ. ಸಿವ್ಹಿಲ್ ಮತ್ತು ಕ್ರಿಮಿನಲ್ ಪ್ರೋಸಿಜರಗಳಲ್ಲಿ ಇಂಥ ಸಾಕ್ಷಿದಾರನನ್ನು ವಾರಂಟಿನಿಂದ ಹಿಡಿದು ಕೋರ್ಟಿನ ಮುಂದೆ ತರಿಸುವ ಅಧಿಕಾರ ಕೋರ್ಟಿಗಿರುವದು.

(೨) "ಗೈರವಾಜವಿ"—ವಾಜವಿ (ಯೋಗ್ಯ) ಇಲ್ಲವೆ ಗೈರವಾಜವಿ (ಅಯೋಗ್ಯ) ಎಂಬದನ್ನು ಠರಾಯಿಸುವ ಅಧಿಕಾರ ನ್ಯಾಯದಾನ ಮಂಡಲದ ಸಾರಾಸಾರ ಬುದ್ಧಿಯನ್ನು ವಲಂಬಿಸಿ ಇಡಲಾಗಿದೆ.

(೩) ಈ ಪೋಟ-ಕಲಮು ಸ್ಪಷ್ಟವಾಗಿದೆ.

(೪) ಈ ಸ್ಥಳದಲ್ಲಿ ಉಲ್ಲೇಖಿಸಿದ ಪುರಾವೆಯ ಕಾಯದೆಯ ಕಲಮುಗಳು—

**೧೨೧. ಜಡ್ಜರೂ ಮ್ಯಾಜಿಸ್ಟ್ರೇಟರೂ:—** ಯಾವನಾದರೂ ಜಡ್ಜನಾಗಲಿ ಮ್ಯಾಜಿಸ್ಟ್ರೇಟನಾಗಲಿ ತನ್ನ ಮೇಲಿನ ಅಧಿಕಾರವುಳ್ಳ ಕೋರ್ಟಿನಿಂದ ವಿಶೇಷವಾದ ಹುಕುಮು ಕೊಡಲ್ಪಟ್ಟ ಹೊರ್ತು ಕೋರ್ಟಿನಲ್ಲಿ ತನ್ನ ಅಧಿಕಾರವನ್ನು ನಡಿಸುವದರಲ್ಲಿ ತಾನು ಮಾಡಿದ ವರ್ತನಕ್ಕೆ ಸಂಬಂಧವಾಗಿರುವಂಥವು ಇಲ್ಲದಿದ್ದರೆ ಕೋರ್ಟಿನಲ್ಲಿ ಅಧಿಕಾರವನ್ನು ನಡಿಸುವದರಲ್ಲಿ ತನಗೆ ತಿಳಿಯ ಬಂದ ಯಾವದೊಂದು ಮಾತಿಗೆ ಸಂಬಂಧವಾಗಿರುವಂಥ ಆದ ಯಾವದಾದರೂ ಪ್ರಶ್ನೆಗಳಿಗೆ ಉತ್ತರವನ್ನು ಕೊಡುವ ಬಗ್ಗೆ ನಿರ್ಬಂಧಿಸಲ್ಪಡಕೂಡದು; ಆದರೆ ಅಂಥಾ ಜಡ್ಜನಾಗಲಿ ಮ್ಯಾಜಿಸ್ಟ್ರೇಟನಾಗಲಿ ಅಂಥಾ ಅಧಿಕಾರವನ್ನು ನಡಿಸುತ್ತಿದ್ದಾಗ ತನ್ನ ಸಮಕ್ಷದಲ್ಲಿ ಘಟಿಸಿದ ಎರಡನೇ ಯಾವದಾದರೂ ಮಾತಿನ ಬಗ್ಗೆ ಅವನಿಗೆ ಪ್ರಶ್ನೆಗಳನ್ನು ಮಾಡಬಹುದು.

**೧೨೨. ಮದುವೆಯ ಸಂಬಂಧವು ನಡೆಯುವ ಕಾಲದೊಳಗೆ ಮಾಡಲ್ಪಟ್ಟ ಜ್ಞಾಪನೆಗಳು:—** ತ್ವರಿತಕ್ಕೆ ಮದುವೆಯ ಸಂಬಂಧವುಳ್ಳ ಇಲ್ಲವೆ ಹಿಂದಕ್ಕೆ ಮದುವೆಯ ಸಂಬಂಧವು ಹೊಂದಿದ್ದ ಯಾವನಾದರೂ ಗಂಡಸು ಇಲ್ಲವೆ ಯಾವಳಾದರೂ ಹೆಂಗಸು ತಾನು ಮದುವೆಯ ಮಾಡಿಕೊಂಡಿದ್ದ ಯಾವಳಾದರೂ ಹೆಂಗಸಿನಿಂದ ಇಲ್ಲವೆ ಯಾವನಾದರೂ ಗಂಡಸಿನಿಂದ ಆ ಮದುವೆಯ ಸಂಬಂಧವು ನಡಿಯುವ ಕಾಲದೊಳಗೆ ತನಗೆ ಮಾಡಲ್ಪಟ್ಟ ಯಾವದಾದರೂ ಜ್ಞಾಪನೆಯನ್ನು

ಪ್ರಕಟ ಮಾಡುವ ಬಗ್ಗೆ ನಿರ್ಬಂಧಿಸಲ್ಪಡಕೂಡದು ; ಮತ್ತು ಮದುವೆಯ ಸಂಬಂಧ ವುಳ್ಳವರೊಳಗೆ ನಡೆಯುವ ವ್ಯಾಜ್ಯಗಳೂ ಮದುವೆಯ ಸಂಬಂಧವುಳ್ಳ ಯಾವ ನಾದರೂ ಗಂಡಸಿನ ಮೇಲೆಯಾಗಲಿ ಹೆಂಗಸಿನ ಮೇಲೆಯಾಗಲಿ ಅವನು ಇಲ್ಲವೆ ಅವಳು ತನ್ನ ಹೆಂಡತಿಗಾಗಲಿ ಗಂಡನಿಗಾಗಲಿ ಪ್ರತಿಕೂಲವಾಗಿ ಕೆಲವೊಂದು ಅಪರಾಧವನ್ನು ಮಾಡಿದ ಬಗ್ಗೆ ನಡೆಯುವ ಖಟ್ಲೆಗಳೂ ಹೊರ್ತಾಗಿ ಬೇರೆ ಯಾವದಾದರೂ ಪ್ರಕರಣದಲ್ಲಿ, ಅಂಥಾ ಜ್ಞಾಪನೆಯನ್ನು ಮಾಡಿದವನು ಇಲ್ಲವೆ ಮಾಡಿದವಳು ಇಲ್ಲದಿದ್ದರೆ ಸ್ವಾರ್ಥಸಂಬಂಧದಿಂದ ಅವನ ಪ್ರತಿನಿಧಿಯಾದವ ನಾಗಲಿ ಅವಳ ಪ್ರತಿನಿಧಿಯಾದವನಾಗಲಿ ಸಮ್ಮತಿಸಿದ ಹೊರ್ತು, ಅಂಥಾ ಜ್ಞಾಪನೆ ಯನ್ನು ಪ್ರಕಟ ಮಾಡುವದಕ್ಕೋಸರ ಆ ಜ್ಞಾಪನೆಯು ಮಾಡಲ್ಪಟ್ಟವನಿಗಾಗಲಿ ಮಾಡಲ್ಪಟ್ಟವಳಿಗಾಗಲಿ ಅಪ್ಪಣೆಯನ್ನು ಕೊಡಕೂಡದು.

**೧೨೩ ರಾಜ್ಯಕಾರ್ಯಗಳ ಬಗ್ಗೆ ಸಾಕ್ಷಿಯು.—** ಪ್ರಸಿದ್ಧಿಸಲ್ಪಡದಂಥ ವುಗಳಾಗಿ ರಾಜ್ಯಕಾರ್ಯಗಳಿಗೆ ಸಂಬಂಧವಾಗಿರುವಂಥವುಗಳಾದ ಸರಕಾರಿ ಲೇಖ ಗಳಿಂದ ಸಂಪಾದಿಸಿದ ಸಾಕ್ಷಿಯನ್ನು, ನಡೆಯುವ ಪ್ರಕರಣದಲ್ಲಿ ಸಂಬಂಧಿಸಿದ ಖಾತೆಯ ಮುಖ್ಯಸ್ಥನ ಅಪ್ಪಣೆಯ ಹೊರ್ತು ಯಾರಿಗೂ ಕೊಡಗೊಡಕೂಡದು ; ಅಂಥಾ ಖಾತೆಯ ಮುಖ್ಯಸನು ತನಗೆ ಯೋಗ್ಯ ತೋರಿದಂತೆ ಅಂಥಾ ಅಪ್ಪಣೆ ಯನು ಕೊಡಬಹುದು ಇಲ್ಲವೆ ನಾಕಾರಿಸಬಹುದು

**೧೨೪. ಸರಕಾರಿ ರೀತಿಯಿಂದ ಮಾಡಲ್ಪಟ್ಟ ಜ್ಞಾಪನೆಗಳು:—** ಯಾವನಾದರೂ ಸಾರ್ವಜನಿಕವಾದ ಅಧಿಕಾರಸ್ಥನನ್ನು, ಅವನು ತನ್ನ ಕೆಲಸದ ಸಂಬಂಧದ ನಿಶ್ವಾಸದಿಂದ ತನಗೆ ಮಾಡಲ್ಪಟ್ಟ ಜ್ಞಾಪನೆಗಳನ್ನು ಪ್ರಕಟ ಮಾಡು ವದರಿಂದ ಸಾರ್ವಜನಿಕವಾದ ಸ್ವಾರ್ಥಸಂಬಂಧಕ್ಕೆ ಅಪಾಯವಾದೀತೆಂದು ಎಣಿಸಿದರೆ ಅಂಥಾ ಜ್ಞಾಪನೆಗಳನ್ನು ಪ್ರಕಟ ಮಾಡುವ ಬಗ್ಗೆ ನಿರ್ಬಂಧಿಸ ಕೂಡದು

**೧೨೫. 'ಅಪರಾಧವನ್ನು ಮಾಡಿದ್ದರ ಸುದ್ದಿಯು: —** ಯಾವನಾದರೂ ಮ್ಯಾಜಿಸ್ಟ್ರೇಟನಿಗೆ ಅಥವಾ ಪೋಲೀಸು ಅಮಲದಾರನಿಗೆ ಯಾವದಾದರೂ ಅಪರಾಧವು ಆದ ವಿಷಯದಲ್ಲಿ ಯಾವದಾದರೂ ಮಾಹಿತಿಯು ಅವನಿಗೆ ಎಲ್ಲಿಂದ ದೊರಕಿತು ಅದನ್ನು ಹೇಳುವದಕ್ಕೆ ಭಾಗವಾಗುವಂತೆ ಮಾಡಬಾರದು, ಮತ್ತು ಯಾವ ಮುಲಕೀ ಅಮಲದಾರನಿಗೂ ಸಾರ್ವಜನಿಕ ಮಹಸೂಲಿನ ವಿರುದ್ಧ ಮಾಡಿದ ಅಪರಾಧಗಳ ವಿಷಯದಲ್ಲಿ ಮಾಹಿತಿ ಎಲ್ಲಿಂದ ದೊರಕಿತು ಎಂಬುದನ್ನು ಹೇಳುವ ದಕ್ಕಾಗಿ ಅವನಿಗೆ ಭಾಗವಾಗುವಂತೆ ಮಾಡಬಾರದು.

೧೨೬. ಬ್ಯಾರಿಸ್ಟರರು ಮುಂತಾದವರ ಕಸಬಿನ ಕೆಲಸಗಳ ಸಂಬಂಧದ ಜ್ಞಾಪನೆಗಳು:— ಕಳವು ಸ್ಪಷ್ಟವಾಗಿ ಸಂಮತಿಸಿದ ಹೊರತು, ಯಾವನಾದರೂ ಬ್ಯಾರಿಸ್ಟರನು ಇಲ್ಲವೆ ಆಟರ್ನಿಯು ಇಲ್ಲವೆ ಪ್ಲೀಡರನು ಇಲ್ಲವೆ ವಕೀಲನು ತನ್ನ ಕಸಬಿನ ಕೆಲಸವನ್ನು ನಡಿಸುವಾಗ ಆ ಕೆಲಸದ ಸಲುವಾಗಿ ಅವನಿಗೆ ಅವನ ಕುಳದಿಂದಾಗಲಿ ಕುಳದ ಸಲುವಾಗಿಯಾಗಲಿ ಮಾಡಲ್ಪಟ್ಟ ಯಾವದಾದರೂ ಜ್ಞಾಪನೆಯನ್ನು, ಇಲ್ಲದಿದ್ದರೆ ಅವನು ತನ್ನ ಕಸಬಿನ ಕೆಲಸವನ್ನು ನಡಿಸುವಾಗ ಆ ಕೆಲಸದ ಸಲುವಾಗಿ ಆವನಿಗೆ ತಿಳಿದ ಯಾವದಾದರೂ ದಸ್ತಾವೈಜಿನ ಮಜಕೂರನ್ನು ಇಲ್ಲವೆ ಸ್ಥಿತಿಯನ್ನು ಇಲ್ಲದಿದ್ದರೆ ಅವನು ತನ್ನ ಕಸಬಿನ ಕೆಲಸವನ್ನು ನಡಿಸುವಾಗ ಆದರ ಸಲುವಾಗಿ ಅವನು ತನ್ನ ಕುಳಕ್ಕೆ ಹೇಳಿದ ಆಲೋಚನೆಯನ್ನು ಪ್ರಕಟ ಮಾಡಲಿಕ್ಕೆ ಅವನಿಗೆ ಅಪ್ಪಣೆಯನ್ನು ಯಾವಾಗಲೂ ಕೊಡಕೂಡದು.

ಆದರೆ ವಿಧಿಸಲ್ಪಡುವದೇನಂದರೆ:— ಈ ಕಲಮಿನೊಳಗಿನ ಯಾವ ಸಂಗತಿಯಿಂದಲೂ ಕೆಳಗೆ ಬರೆದ ಮಾತುಗಳ ಪ್ರಕಟನೆಗೆ ಅಡ್ಡಿಯಾಗಕೂಡದು

(೧) ಕಾಯಿದೆಗೆ ವಿರುದ್ಧವಾದ ಉದ್ದೇಶವನ್ನು ಕಡೆಗಾಣಿಸುವ ಇರಾದೆಯಿಂದ ಮಾಡಲ್ಪಟ್ಟ ಯಾವದಾದರೂ ಜ್ಞಾಪನೆಯು;

(೨) ತಾನು ತನ್ನ ಕಸಬಿನ ಕೆಲಸವನ್ನು ಆರಂಭಿಸದ ಬಳಿಕ ಯಾವದೊಂದು ಅಪರಾಧವು ಇಲ್ಲವೆ ಕಪಟವು ಆಯಿತೆಂದು ತೋರಿಸುವಂಥಾದಾಗಿ ಅಂಥಾ ಬ್ಯಾರಿಸ್ತರನಾಗಲಿ ಪ್ಲೀಡರನಾಗಲಿ ಆಟರ್ನಿಯಾಗಲಿ ವಕೀಲನಾಗಲಿ ತನ್ನ ಕಸಬಿನ ಕೆಲಸವನ್ನು ನಡಿಸುವಾಗ ಅರಿತದ್ದಾದ ಯಾವದಾದರೂ ಕೃತಿಯು.

ಕುಳದಿಂದಾಗಲಿ ಅವನ ಸಲುವಾಗಿಯಾಗಲಿ ಅಂಥಾ ಬ್ಯಾರಿಸ್ತರನ ಪ್ಲೀಡರನ ಇಲ್ಲವೆ ಆಟರ್ನಿಯ ಇಲ್ಲವೆ ವಕೀಲನ ಲಕ್ಷ್ಯವು ಅಂಥಾ ಕೃತಿಗೆ ಕೊಡಿಸಲ್ಪಟ್ಟಿದ್ದರೂ ಚಿಂತೆ ಇಲ್ಲ.

ಟಿಪ್ಪಣಿಯು:-- ಈ ಕಲಮಿನಲ್ಲಿ ಹೇಳಲ್ಪಟ್ಟ ಬದ್ಧತೆಯು ಕಸಬಿನ ಕೆಲಸವು ಮುಗಿದ ಬಳಿಕಾದರೂ ನಡೆಯುತ್ತದೆ

೬೮. ವಕೀಲ ಮುಂತಾದವರಿಗೆ ಹಾಜರ ಆಗಲಿಕ್ಕೆ ಮನಾಯಿ.— ನ್ಯಾಯಪಂಚಾಯತದ ಮುಂದಿನ ಯಾವದೇ ದಾವೆಯಲ್ಲಿಯ ಅಥವಾ ಖಟ್ಲೆಯಲ್ಲಿಯ ಯಾವನೇ ಪಕ್ಷಕಾರನ ವತಿಯಿಂದ ಹಾಜರ ಆಗಲಿಕ್ಕೆ ಯಾವನೇ ಪ್ಲೀಡರನಿಗೆ- ವಕೀಲನಿಗೆ ಅಥವಾ ಮುಖ್ತ್ಯಾರನಿಗೆ ಮತ್ತು ಹಾಯಕೋರ್ಟಿನ ಯಾವನೇ ಅಡ್ವೊಕೇಟನಿಗೆ ಆಟರ್ನಿಗೆ ಪರವಾನಗಿ ಇರುವದಿಲ್ಲ.

ಆದರೆ ಗೊತ್ತುಪಡಿಸುವದೇನಂದರೆ, ನ್ಯಾಯಪಂಚಾಯತದ ಖಾತ್ರಿಯಾಗುವಂತೆ ಯೋಗ್ಯ ಕಾರಣವನ್ನು ತೋರಿಸಿದ ಬಳಿಕ, ಇಂಥ ದಾವೆಯಲ್ಲಿಯು ಅಥವಾ ಖಟ್ಲೆದಲ್ಲಿಯು ಯಾವನೇ ಪಕ್ಷಕಾರನಿಗೆ, ಪ್ಲೀಡರ, ವಕೀಲ, ಮುಖತ್ಯಾರ ಅಥವಾ ಹಾಯಕೋರ್ಟಿನ ಅಡ್ವೋಕೇಟ ಅಥವಾ ಅಟರ್ನಿ ಇರದಿರುವ ಮತ್ತು ಈ ಮೊದಲು ಆಗಿರದಿದ್ದ ಯಾವನೇ ಆಪ್ತನನ್ನು ನೌಕರನನ್ನು ಆಶ್ರಿತನನ್ನು, ಅಥವಾ ಸ್ನೇಹಿತನನ್ನು ಇಂಥ ಪಕ್ಷಕಾರನ ಸಂಗಡ ಅಥವಾ ಅವನ ಬದಲಾಗಿ ಹಾಜರ ಆಗುವದಕ್ಕಾಗಿ ನೇಮಿಸುವದಕ್ಕೆ ಪರವಾನಗಿ ಕೊಡಬಹುದು.

ಯಾವನೊಬ್ಬ ಪಕ್ಷಕಾರನ ಬದಲಾಗಿ ಯಾವನೇ ಆಪ್ತನು, ನೌಕರನು ಆಶ್ರಿತನು ಅಥವಾ ಸ್ನೇಹಿತನು ಹಾಜರ ಆದಾಗ್ಗೆ, ಅವನು ಎಷ್ಟರ ಮಟ್ಟಿಗೆ ಕೆಲಸ ನಡಿಸಲಿಕ್ಕೆ ಅಧಿಕಾರ ಪಡೆದಿರುವನೋ ಅಂಥ ಮರ್ಯಾದೆಯನ್ನು ವಿವರಿಸುವ ಒಂದು ಲೇಖೀಅಧಿಕಾರವನ್ನು ಅವನಿಗೆ ಇಂಥ ಪಕ್ಷಕಾರನು ಕೊಡಬೇಕು.

ನ್ಯಾಯಪಂಚಾಯತದ ಎದುರಿನಲ್ಲಿ ವಕೀಲರಿಗೆ ಕೆಲಸ ನಡಿಸಲಿಕ್ಕೆ ಬರಲಾರದು. ಆದರೂ ನ್ಯಾಯಪಂಚಾಯತದ ಮುಂದಿನ ಅದೇ ಕೆಲಸವು ಡಿಸ್ಟ್ರಿಕ್ಟ ಕೋರ್ಟು ಇಲ್ಲವೆ ಡಿಸ್ಟ್ರಿಕ್ಟ ಮ್ಯಾಜಿಸ್ಟ್ರೇಟರ ಮುಂದೆ ಬಂದರೆ, ಅದೇ ಆ ಕಾಲಕ್ಕೆ ವಕೀಲರಿಗೆ ಕೆಲಸ ನಡಿಸಲಿಕ್ಕೆ ಬರುತ್ತದೆ.

೩೯ ಖಾತ್ರಿ ಮಾಡಿಕೊಂಡ ಸಂಗತಿಗಳ ಮೇಲಿಂದ ದಾವೆಯ ಅಥವಾ ಖಟ್ಲೆಯ ನಿರ್ಣಯ ಮಾಡುವದು— (೧) ನ್ಯಾಯಪಂಚಾಯತವು ಈ ಆಕ್ಟಿನ ಮತ್ತು ಕಾನೂನುಗಳ ಮೇರೆಗೆ ಒಂದು ಚೌಕಶಿಯನ್ನು ಮಾಡಿದ ತರುವಾಯ, ತನ್ನ ಮುಂದೆ ಬಂದ ದಾವೆಯ ಅಥವಾ ಖಟ್ಲೆಯ ನಿಜವಾದ ಸಂಗತಿಗಳನ್ನು ಖಾತ್ರಿಪೂರ್ವಕ ತಿಳಕೊಳ್ಳುವದು ಅದರ ಕರ್ತವ್ಯವಿರುತ್ತದೆ

(೨) ಪುರಾವೆಯ ಅಥವಾ ಕೆಲಸ ನಡಿಸುವ ರೀತಿಯ ಸಂಬಂಧದಿಂದ ಯಾವದೇ ಕಾಯದೆಯಲ್ಲಿ ಇರುವ ಯಾವದೇ ಮಜಕೂರಿನಿಂದ, ಇಂಥ ಚೌಕಶಿಯನ್ನು ಮಾಡಲಿಕ್ಕೆ ನ್ಯಾಯಪಂಚಾಯತಿಗೆ ಇರುವ ಅಧಿಕಾರಿಗಳಿಗೆ ಯಾವದೇ ರೀತಿಯಿಂದ ಬಾಧೆ ಬರಲಿಕ್ಕಿಲ್ಲ

(೩) ನ್ಯಾಯಪಂಚಾಯತವು ಇಂಥ ಚೌಕಶಿಯನ್ನು ಮಾಡಿದ ತರುವಾಯ, ಈ ಆಕ್ಟಿನ ಠರಾವುಗಳಿಗೆ ಒಳಪಟ್ಟು, ತನಗೆ ನ್ಯಾಯವಾದದ್ದು ಮತ್ತು ಸಮತೆಯದೆಂದು ತೋರುವಂಥ ಹುಕುಮನಾಮೆಯನ್ನು ಅಥವಾ ಹುಕುಮನ್ನು ಠರಾಯಿಸಿದ ಫೀಯ ಸಹಿತ ಅಥವಾ ಠರಾಯಿಸಿದ ಫೀ

ಇಲ್ಲದೆ, ಮಾಡಬಹುದು ಇಂಥ ಹುಕುಮನಾಮೆಯಲ್ಲಿ ಅಥವಾ ಹುಕುಮಿನಲ್ಲಿ ಚೌಕಸಿಯ ಪರಿಣಾಮವನ್ನು ಮತ್ತು ಅದರ ಕಾರಣಗಳ ಒಂದು ಸಂಕ್ಷಿಪ್ತ ನಿರೂಪಣೆಯನ್ನು ಕೊಟ್ಟಿರಬೇಕು.

(೧) ಮನವರಿಕೆ (ಖಾತ್ರಿ) ಮಾಡಿಕೊಳ್ಳುವದು . .ಕೆಲಸವದೆ.—

ಈ ಖಾತ್ರಿ ಈ ಕಾಯದೆಯ ಕಲಮಿಗೆ ಅನುಸಾರವಾಗಿ ಮತ್ತು ಸರಕಾರದವರು ಮಾಡಿದ ನಿಯಮಿನಂತೆ ತೆಗೆದುಕೊಂಡರೆ ಸಾಕು. ಸಿವ್ಹಿಲ್ ಪ್ರೋಸಿಜರ ಇಲ್ಲವೆ ಕ್ರಿಮಿನಲ್ ಪ್ರೋಸಿಜರ ಇಲ್ಲವೆ ಪುರಾವೆಯ ಕಾಯದೆ ಇವುಗಳ ಕಲಮುಗಳನ್ನನುಸರಿಸಿಯೇ ದಿವಾಣಿ ದಾವೆಯ ಇಲ್ಲವೆ ಫೌಜದಾರಿ ಖಟ್ಲೆಯ ಕೆಲಸ ನ್ಯಾಯಪಂಚಾಯತವು ನಡಿಸಲಿಕ್ಕೆಬೇಕು, ಎಂಬ ಆಗ್ರಹ ವಿರುವದಿಲ್ಲ ಈ ಪೋಟ ಕಲಮು (೨)ರ ನೆರವಿಂದ ಸ್ಪಷ್ಟವಾಗುತ್ತದೆ.

(೨) ಈ ಪೋಟ ಕಲಮು ಸ್ಪಷ್ಟವಿದೆ.

(೩) 'ಈ ಆಕ್ಟಿನ ರಣಾವಕ್ಕೆ ಪಾತ್ರನಾಗಿ' ಈ ಆಕ್ಟಿನ ರಣಾನಾನುಸಾರ · ರಣಾವಿನಂತೆ.

'ಹುಕುಮನಾಮೆ'——ದಿವಾಣಿದಾವೆಯೊಳಗಿನದು.

'ಹುಕುಮು'— ಫೌಜದಾರಿ ಖಟ್ಲೆಯೊಳಗಿನದು.

ಪ್ರತಿಯೊಂದು ನಿಕಾಲೆಯಲ್ಲಿ ಎರಡು ಭಾಗಗಳಿರುತ್ತವೆ. (೧) ಕಾರಣಗಳ ನಿರೂಪಣೆ (೨) ಕೊನೆಯ ನಿರ್ಣಯ—ನಿರ್ಣಯ ಮತ್ತು ಅದರ ಕಾರಣಗಳು.

೨೦. ನ್ಯಾಯಪಂಚಾಯತದ ನಿರ್ಣಯವು— ನ್ಯಾಯಪಂಚಾಯತದ ನಿರ್ಣಯವು, ಸಭೆಯಲ್ಲಿ ಹಾಜರ ಇರುವ ನ್ಯಾಯಪಂಚಾಯತದ ಸಭಾಸದರ ಮತದ ಪ್ರಕಾರ ಅಥವಾ ಇಂಥ ಸಭಾಸದರ ಬಹುಮತದ ಮತದ ಪ್ರಕಾರ ಇರಬೇಕು, ಸಭಾಸದರ ಮತಗಳು ಸಮಾನವಾಗಿ ಬಿದ್ದರೆ, ಅಧ್ಯಕ್ಷನಾಗಿರುವ ಮನುಷ್ಯನಿಗೆ ಒಂದು ಎರಡನೇ ಅಥವಾ ನಿರ್ಣಾಯಕ ಮತವಿರುವದು

೨೧. ಮುಂದೆ ಹಾಕುವದು —ನ್ಯಾಯಪಂಚಾಯತ ಕಾಲಕಾಲಕ್ಕೆ ಯಾವದೇ ದಾವೆಯ ಅಥವಾ ಖಟ್ಲೆಯ ಸುನಾವಣಿಯನ್ನು ಮುಂದೆ ಹಾಕಬಹುದು

ಆದರೆ ಗೊತ್ತುಪಡಿಸುದೇನಂದರೆ, ಇಂಥ ಮುಂದೆ ಹಾಕೋಣವು, ಆದರ ಅಭಿಪ್ರಾಯದ ಪ್ರಕಾರ, ಆ ದಾವೆಯ ಅಥವಾ ಖಟ್ಲೆಯ ನ್ಯಾಯ್ಯವಾದ ನಿರ್ಣಯದ ಸಲುವಾಗಿ ಅನಿವಾರ್ಯವಿರಬೇಕು ಅಥವಾ ಅವಶ್ಯವಿರಬೇಕು

ಅಪರಿಹಾರ್ಯದ ಉದಾಹರಣೆ— ನ್ಯಾಯಪಂಚಾಯತದ ಸದಸ್ಯರ ಅವಶ್ಯಕವಾದ ಸಂಖ್ಯೆಯ ಕೋರಮ್ಮಿನ) ಅಭಾವ.

ಅವಶ್ಯಕತೆಯ ಉದಾಹರಣೆ—ಅವಶ್ಯವಿರುವ ಸಾಕ್ಷಿದಾರನಿಗೆ ಸಮನಸು ಲಾಗೂ ಆಗದೆ ಇರೋಣ, ಇಲ್ಲವೆ ಬೇನೆಯ ಮೂಲಕ ಪಕ್ಷಕಾರನಾಗಲಿ, ಸಾಕ್ಷಿದಾರನಾಗಲಿ ಗೈರಹಾಜರ ಇರುವದು.

ಈ ವಿಷಯದ ನಿಯಮ ೧೩—ದಾವೆ ಇಲ್ಲವೆ ಖಟ್ಲೆ ಇವುಗಳ ಸುನಾವಣೆ ( ವಿಚಾರ ) ಮತ್ತು ತಹಕೂಬತೆ ( ತಡೆಹಿಡಿಯೋಣ ) ಈ ವಿಷಯಗಳ ಮೇಲಿನ ಪುಟ ೧೧೧ ಮೇಲೆ ಕೊಟ್ಟದ್ದನ್ನು ನೋಡಬೇಕು.

**೭೨ ಸಂಬಂಧವಿದ್ದ ಪಕ್ಷಕಾರನು ಗೈರಹಾಜರ ಇದ್ದಾಗ್ಗೆ ದಾವೆಯ ಅಥವಾ ಖಟ್ಲೆಯ ವ್ಯವಸ್ಥೆ ಮಾಡುವದು— (೧) ವಾದಿಗೆ ಅಥವಾ ಫಿರ್ಯಾದಿಗೆ ಸುನಾವಣೆಯ ಬಗ್ಗೆ ನೇಮಿಸಲ್ಪಟ್ಟ ವೇಳೆಯು ಮತ್ತು ಸ್ಥಳವು ತಿಳಿಸಲ್ಪಟ್ಟ ತರುವಾಯ ಅವನು ಹಾಜರ ಆಗಲಿಕ್ಕೆ ತಪ್ಪಿದರೆ, ನ್ಯಾಯಪಂಚಾಯತವು ಅವನ ಗೈರಹಾಜರಿಯಲ್ಲಿ ಆ ದಾವೆಯ ಅಥವಾ ಖಟ್ಲೆಯ ಸುನಾವಣೆಯನ್ನು ಮಾಡಬಹುದು ಮತ್ತು ಅದರ ನಿರ್ಣಯವನ್ನು ಕೊಡಬಹುದು.**

**(೨) ಪ್ರತಿವಾದಿಯ ಅಥವಾ ಆರೋಪಿಯ ಮೇಲೆ ಇದರಲ್ಲಿ ಹಿಂದೆ ಗೊತ್ತುಪಡಿಸಿದ ರೀತಿಯಿಂದ ಸಮನ್ಸು ಬಜಾಯಿಸಲ್ಪಟ್ಟಿದ್ದರೆ ಅಥವಾ ಸುನಾವಣೆಯ ಬಗ್ಗೆ ನೇಮಿಸಲ್ಪಟ್ಟ ವೇಳೆಯು ಮತ್ತು ಸ್ಥಳವು ಅವನಿಗೆ ತಿಳಿಸಲ್ಪಟ್ಟಿದ್ದರೆ, ನ್ಯಾಯಪಂಚಾಯತವು ದಾವೆಯ ಅಥವಾ ಖಟ್ಲೆಯ ಸುನಾವಣೆಯನ್ನು ಅವನ ಗೈರಹಾಜರಿಯಲ್ಲಿ ಮಾಡಬಹುದು ಮತ್ತು ಅದರ ನಿರ್ಣಯವನ್ನು ಕೊಡಬಹುದು**

**ಆದರೆ ಗೊತ್ತುಪಡಿಸುವದೇನಂದರೆ, ಯಾವನೇ ಆರೋಪಿಯು ತಾನು ಸ್ವತಃ ಇಲ್ಲವೆ ಪ್ರತಿನಿಧಿಯ ಮುಖಾಂತರ ನ್ಯಾಯಪಂಚಾಯತದ ಮುಂದೆ ಹಾಜರ ಆದ ಹೊರ್ತು ಮತ್ತು ಅವನ ಜಬಾನಿಯ ಸಾರಾಂಶವು ಗೊತ್ತುಪಡಿಸಲ್ಪಟ್ಟ ರಜಿಸ್ಟರಿನಲ್ಲಿ ನೋಂದಿಸಲ್ಪಟ್ಟ ಹೊರ್ತು, ನ್ಯಾಯ ಪಂಚಾಯತವು ಅವನಿಗೆ ಯಾವದೇ ಶಿಕ್ಷೆಯನ್ನು ಕೊಡಬಾರದು.**

**(೩) ಆರೋಪಿಯ ಮೇಲೆ ಸಮನ್ಸು ಬಜಾಯಿಸಿದ ತರುವಾಯ, ಅವನು ಸ್ವತಃ ಆಗಲಿ ಪ್ರತಿನಿಧಿಯ ಮುಖಾಂತರವಾಗಿ ಆಗಲಿ ಹಾಜರ ಆಗಲಿಕ್ಕೆ ತಪ್ಪಿದರೆ, ನ್ಯಾಯಪಂಚಾಯತವು ಅಥವಾ ಸೆಶನ್ಸ ಜಜ್ಜನಿಗೆ ಅವನಿಂದ ಈ ಬಗ್ಗೆ ಅಧಿಕಾರ ಪಡೆದ ಯಾವನೇ ಎರಡನೇ ವರ್ಗದ ಮ್ಯಾಜಿಸ್ಟ್ರೇಟನ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಅಮಲದಾರನಿಗೆ ಅರ್ಜಿಮಾಡಬಹುದು, ಮತ್ತು ಇಂಥ ಸೆಶನ್ಸಜಜ್ಜನು ಅಥವಾ**

ಅಮಲದಾರನು, ತಾನು ಆ ಖಟ್ಲೆಯ ಇನಸಾಫು ಮಾಡುವ ಕೋರ್ಟು ಇದ್ದಂತೆಯೇ ಆ ಆರೋಪಿಗೆ ನ್ಯಾಯಪಂಚಾಯತದ ಮುಂದೆ ಸ್ವತಃ ಅಥವಾ ಪ್ರತಿನಿಧಿಯ ಮುಖಾಂತರ ಹಾಜರ ಆಗಲಿಕ್ಕೆ ಒತ್ತಾಯಪಡಿಸಬೇಕು.

(೪) ಆರೋಪಿಗೆ (೩) ನೇ ಪೋಟ-ಕಲಮಿನನ್ವಯ ನ್ಯಾಯಪಂಚಾಯತದ ಮುಂದೆ ಹಾಜರ ಆಗಲಿಕ್ಕೆ ಒತ್ತಾಯಪಡಿಸಿದಾಗ್ಗೆ, ನ್ಯಾಯಪಂಚಾಯತವು ಕೂಡಲೇ ಅವನ ಜಬಾನಿಯನ್ನು ತೆಗೆದುಕೊಳ್ಳಬೇಕು, ಮತ್ತು ಆನಂತರ ಆ ಖಟ್ಲೆಯ ಸುನಾವಣಿಯಲ್ಲಿ ಅವನಿಗೆ ಹಾಜರ ಆಗಲಿಕ್ಕೆ ಒತ್ತಾಯವಿರಕ್ಕಿಲ್ಲ.

(೧) ವಾದಿಯಾಗಲಿ ಫಿರ್ಯಾದಿಯಾಗಲಿ ಗೈರಹಾಜರಿದ್ದರೆ? ಇದಕ್ಕೆ ಉತ್ತರವಿದೆ.

(೨) ಪ್ರತಿವಾದಿ ಇಲ್ಲವೆ ಆರೋಪಿತನು ಗೈರಹಾಜರಿದ್ದರೆ? ಇದಕ್ಕೆ ಉತ್ತರವಿದೆ.

"ಅವನ ಜಬಾಬಿನ ಸಾರಾಂಶ. ಆ ಪ್ರಸಂಗ ಹೊರ್ತುಪಡಿಸಿ" ಬರೆದುಕೊಂಡ ಹೊರತು

(೩) ಆರೋಪಿತನಾಗಲಿ ಅವನ ಪ್ರತಿನಿಧಿಯಾಗಲಿ ಆತನ ಜವಾಬಿನ ಪೂರ್ತೆಯಾದರೂ ಹಾಜರಿರಲಿಕ್ಕೆ ಸಕ್ತಿ (ಒತ್ತಾಯ) ಇರುವದು.

(೪) ಈ ಪೋಟ ಕಲಮು ಸ್ಪಷ್ಟವಿದೆ.

"೭೩ ದಾವೆಗಳಲ್ಲಿ ರಾಜಿ ಆಗೋಣ ಮತ್ತು ಖಟ್ಲೆಗಳಲ್ಲಿ ರಾಜಿ ಆಗೋಣ:— (೧) ಯಾವದೊಂದು ದಾವೆಯು, ಪೂರ್ಣವಾಗಿಯಾಗಲಿ ಅಂಶತಃವಾಗಿಯಾಗಲಿ ಆಣೆಯ ಮೂಲಕ ಅಥವಾ ಯಾವದೇ ಕಾಯದೆ ಶೀರ ಕರಾರಿನ ಅಥವಾ ರಾಜಿಯ ಮೂಲಕ ಅಥವಾ ಹಣ ಕೊಟ್ಟ ಮೂಲಕ ರಾಜಿಪಡಿಸಲಾಗಿರುತ್ತದೆಂದು ನ್ಯಾಯಪಂಚಾಯತಿಗೆ ಖಾತ್ರಿಯಾಗುವಂತೆ ಸಿದ್ಧಮಾಡಿ ಕೊಟ್ಟ ಬಾಬತಿನಲ್ಲಿ, ಸದರಿ ನ್ಯಾಯಪಂಚಾಯತಿ ಇಂಥ ಕರಾರನ್ನು, ರಾಜಿಯನ್ನು ಅಥವಾ ಹಣ ಕೊಟ್ಟದ್ದನ್ನು ಬರೆದಿಡಬೇಕೆಂದು ಹುಕುಮು ಮಾಡತಕ್ಕದ್ದು, ಮತ್ತು ಆ ಮೇರೆಗೆ, ಅದು ಆ ದಾವೆಗೆ ಸಂಬಂಧಪಡುವ ಮಟ್ಟಿಗೆ, ಒಂದು ಹುಕುಮುನಾಮೆಯನ್ನು ಮಾಡಬೇಕು.

(೨) ಯಾವದೊಂದು ನ್ಯಾಯಪಂಚಾಯತವು ಯಾವದೇ ಖಟ್ಲೆಯನ್ನು ರಾಜಿಪಡಿಸಿಕೊಳ್ಳುವದಕ್ಕೆ ಪರವಾನಗಿ ಕೊಡಬಹುದು

ಆದರೆ ಗೊತ್ತುಪಡಿಸುವದೇನಂದರೆ, ೧)ನೇ ಪೋಟ-ಕಲಮಿನನ್ವಯ ಯಾವದೊಂದು ನ್ಯಾಯಪಂಚಾಯತವು ಸದರಿ ಕರಾರಿಗೆ, ರಾಜಿಗೆ ಅಥವಾ ಹಣಕೊಟ್ಟದ್ದಕ್ಕೆ ಅನುಸಾರವಾಗಿ ಹುಕುಮುನಾಮೆಯನ್ನು ಮಾಡದಿದ್ದಾಗ, ಅಥವಾ (೨ ನೇ ಪೋಟ-ಕಲಮಿನನ್ವಯ ಯಾವದೊಂದು ಖಟ್ಲೆಯನ್ನು ರಾಜಿಮಾಡಿಕೊಳ್ಳಲಿಕ್ಕೆ ಪರವಾನಗಿ ಕೊಡದಿದ್ದಾಗ ಅದು ತನ್ನ ಕಾರಣಗಳನ್ನು ಬರೆದಿಡತಕ್ಕದ್ದು."

(೧) ದಿವಾಣಿ ದಾವೆಯೊಳಗಿನ ಮತ್ತು (೨) ಫೌಜದಾರಿ ಖಟ್ಲೆಯೊಳಗಿನ ರಾಜಿಯು (ತಡಜೋಡಿಯ) ಬಗ್ಗೆ ಈ ಕಲಮು ಇರುವದು.

ಯಾವದೊಂದು ದಾವೆಯು ರಾಜಿ ೧ ಅಣಿಯ ಮೇಲೆ, ಇಲ್ಲವೆ ೨ ಯಾವದೊಂದು ಕಾಯದೇಶೀರ ಕಬುಲಾಯತಿ ಮೇಲಿಂದ, ೩ ರಾಜಿಯ ಮೇಲಿಂದ ಅಥವಾ ತೀರಿಸುವಿಕೆ (ಫೇಡ) ಮೇಲಿಂದ—ಎಲ್ಲ ರೀತಿಯಿಂದ ಇಲ್ಲವೆ— ಅಲ್ಪಾಂಶದಿಂದ ಮಾಡುವದರಲ್ಲಿ ಬಂದಿದೆ. ಹೀಗೆ—ಗ್ರಾಮದ ನ್ಯಾಯದಾನ ಮಂಡಲದ (ನ್ಯಾಯಪಂಚಾಯತದ) ಸಮಾಧಾನವಾಗುವ ರೀತಿಯಿಂದ ಶಾಬಿತವಾಗಿದ್ದರೆ, ಆಗ—ಈ ಬಗೆಯ (೧) ಕಬುಲಾಯತಿ (೨) ರಾಜಿ ಇಲ್ಲವೆ (೩) ಫೇಡ— ನಮೂದಿಸುವ ಬಗ್ಗೆ—ಗ್ರಾಮದ ನ್ಯಾಯದಾನಮಂಡಲವು ಹುಕುಮು ಮಾಡಿ ಆ (೧) ಕಬುಲಾಯತಿಯು (೨) ರಾಜಿಯ ಇಲ್ಲವೆ (೩) ಫೇಡಿಯು—ದಾವೆಯುಸಂಬಂಧವಿದ್ದ ಮಟ್ಟಿಗೆ—ಅವುಗಳಿಗೆ (ಕಬುಲಾಯತಿ—ರಾಜಿ—ಫೇಡ) ಅನುಸಾರವಾಗಿ ಹುಕುಂನಾಮೆ ಮಾಡಲಿಕ್ಕೆ ಬೇಕು.

ಪಕ್ಷಕಾರರು ನ್ಯಾಯಪಂಚಾಯತದ ಎದುರಿನಲ್ಲಿ ಕೆಲಸವನ್ನು ಹೇಗೆ ತೀರಿಸಿಕೊಂಡ ರೆಂಬದು ಕಾಗದ ಪತ್ರಗಳಲ್ಲಿ ನಮೂದ ಇರಲಿಕ್ಕೆ ಬೇಕು

**೭೪. ಪಕ್ಷಕಾರರ ಮರಣ—** ದಾವೆಯಲ್ಲಿಯ ಯಾವನೇ ಪಕ್ಷಕಾರನು ಹುಕುಮುನಾಮೆಯಾಗುವ ಮೊದಲು ಸತ್ತರೆ, ಆ ದಾವೆಯು ತಹಕೂಬ ಉಳಿಯಬೇಕು. ಆದರೆ ಅದೇ ಇಲಾಜಿನ ಕಾರಣದ ಮೇಲೆ ಹೊಸದೊಂದು ದಾವೆಯು ಮಾಡಲ್ಪಡಬಹುದು, ಮತ್ತು ಹೊಸ ದಾವೆಯ ಬಗ್ಗೆ ೫೩ ನೇ ಕಲಮಿನನ್ವಯ ಠರಾಯಿಸಿದ ಮುದತಿನ ಲೆಖ್ಖವನ್ನು ಮಾಡುವಾಗ್ಗೆ ಆ ದಾವೆಯು ಚಾಲು ಇರುವ ವೇಳೆಯನ್ನು ಲೆಖ್ಖದಲ್ಲಿ ಹಿಡಿಯಬಾರದು.

ಕಲಮು ೫೩ ರಲ್ಲಿ ದಾವೆ ಮಾಡಲಿಕ್ಕೆ, ದಾವೆಯ ಕಾರಣದಿಂದ ೧ ವರ್ಷದ ಮುದ್ದತ್ತು, ಹೇಳಲಾಗಿದೆ.

**೭೫.** ನ್ಯಾಯಪಂಚಾಯತವು ತನ್ನ ನಿರ್ಣಯವನ್ನು ತಿದ್ದಬಾರದು ಅಥವಾ ಬದಲಿಸಬಾರದು— (೧) ಪೋಟ-ಕಲಮು (೨) ಇದರಲ್ಲಿ ಠರಾಯಿಸಿದ್ದನ್ನು ಹೊರ್ತುಪಡಿಸಿ, ನ್ಯಾಯಪಂಚಾಯತಿಗೆ ತಾನು ಕೊಟ್ಟ ಯಾವದೇ ಹುಕುಮುನಾಮೆಯನ್ನು ಅಥವಾ ಹುಕುಮುನ್ನು ರದ್ದ ಮಾಡಲಿಕ್ಕೆ, ತಿದ್ದಲಿಕ್ಕೆ ಅಥವಾ ಬದಲಿಸಲಿಕ್ಕೆ ಅಧಿಕಾರವಿರುವದಿಲ್ಲ

(೨) ನ್ಯಾಯಪಂಚಾಯತದ ಹುಕುಮುನಾಮೆಯ ಅಥವಾ ಹುಕುಮಿನ ತಾರೀಖಿನಿಂದ ಒಂದು ತಿಂಗಳೊಳಗಾಗಿ ಅರ್ಜಿಯು ಮಾಡಲ್ಪಟ್ಟರೆ, ಆ ನ್ಯಾಯಪಂಚಾಯತವು ಕಾರಣಗಳನ್ನು ಬರೆದಿಟ್ಟು, ತಪ್ಪಿನ ಬಗ್ಗೆ ತೆಗೆದು ಹಾಕಲ್ಪಟ್ಟ ಯಾವದೇ ದಾವೆಯನ್ನು, ಅಥವಾ ಯಾತರಲ್ಲಿ ಪ್ರತಿವಾದಿಯ ವಿರುದ್ಧ ಏಕತರ್ಫಿ ಹುಕುಮುನಾಮೆಯು ಕೊಡಲ್ಪಟ್ಟಿರುವದೋ ಅಂಥ ದಾವೆಯನ್ನು ತಿರುಗಿ ವಿಚಾರಕ್ಕೆ ತೆಗೆದುಕೊಳ್ಳಬಹುದು.

(೨) ಈ ಪೋಟ-ಕಲಮು ಫಕ್ತ (ಬರಿ) ದಿವಾಣಿ ದಾವೆಗಷ್ಟೇ ಲಾಗೂ ಅದೆ.

ವಾದಿ ಇಲ್ಲವೆ ಪ್ರತಿವಾದಿ-ಯಾರಿಗಾದರೂ ಈ ಕೆಲಸದಲ್ಲಿ ದಾವೆ ಫೈಲಿನ ಮೇಲೆ (ನಡಿಸಲಿಕ್ಕೆ) ತೆಗೆದುಕೊಳ್ಳಬೇಕೆಂದು ಅರ್ಜಿ ಮಾಡಲಿಕ್ಕೆ ಬರುತ್ತದೆ. ನ್ಯಾಯಮಂಡಲವು ಫೈಲಿನ ಮೇಲೆ ತೆಗೆದುಕೊಳ್ಳುವಾಗ ಕಾರಣಗಳನ್ನು ಬರಹದಲ್ಲಿ (ಲೇಖೀ)ನಮೂದಿಸಲಿಕ್ಕೆಬೇಕು.

**೭೬.** ಬಡ್ಡಿ ಮತ್ತು ಹಪ್ತೆಗಳು— ಹಣದ ವಿಷಯದ ದಾವೆಗಳಲ್ಲಿ ನ್ಯಾಯಪಂಚಾಯತವು ತನ್ನ ಮರ್ಜಿಯ ಪ್ರಕಾರ, ಹುಕುಮನಾಮೆಯಾದ ರಕಮಿನ ಮೇಲೆ ಹುಕುಮನಾಮೆಯ ತಾರೀಖಿನಿಂದ ಹಣ ಕೊಡುವ ತಾರೀಖಿನ ವರೆಗೆ ನೂರಕ್ಕೆ ವರ್ಷಕ್ಕೆ ಆರಕ್ಕಿಂತ ಹೆಚ್ಚಿಲ್ಲದ ದರದಂತೆ ಬಡ್ಡಿಯನ್ನು ಮತ್ತು ಠರಾಯಿಸಲ್ಪಡಬಹುದಾದ ಯಾವನೇ ಫೀಗಳನ್ನು ಕೊಡಬೇಕೆಂದು ಹುಕುಮು ಮಾಡಬಹುದು.

ನ್ಯಾಯಪಂಚಾಯತವು ಯಾವದೇ ದಾವೆಯಲ್ಲಿ ಹಣವನ್ನು ಕೊಡುವ ಬಗ್ಗೆ ಹುಕುಮನಾಮೆಯನ್ನು ಮಾಡಿದಾಗ್ಗೆ, ಅದು ಆ ಹಣವನ್ನು, ಬಡ್ಡಿ ಇಲ್ಲವೆ ಅಥವಾ ಮೇಲೆ ಹೇಳಿದ ದರಕ್ಕಿಂತ ಹೆಚ್ಚಿಲ್ಲದಷ್ಟು ಬಡ್ಡಿಯ ಸಹಿತವಾಗಿ, ಹಪ್ತೆಯಿಂದ ಕೊಡಬೇಕೆಂದು ಹುಕುಮು ಮಾಡಬಹುದು.

"ಠರಾಯಿಸಲ್ಪಡಬಹುದಾದ"—ಅಂದರೆ ಸರಕಾರದ ನಿಯಮಗಳಂತೆ ಠರಾಯಿಸಿದ.

ಫೀಯ ಸಲುವಾಗಿ "ನ್ಯಾಯದಾನಮಂಡಲ (ಬೆಂಚು) ನಿಯಮ" ೧೭, ಪುಟ ೧೧೮ ನೋಡು.

**೭೭.** ನ್ಯಾಯಪಂಚಾಯತವು ಜಿಲ್ಹಾ ಕೋರ್ಟಿನ ಅಥವಾ ಸೆಶನ್ಸ ಕೋರ್ಟಿನ ಕಡೆಗೆ ಬರೆದು ಕಳಿಸುವದು— (೧) ಯಾವದೇ ನ್ಯಾಯಪಂಚಾಯತವು ತನ್ನ ಮುಂದೆ ಬಂದ ದಾವೆಯು ಅಥವಾ ಖಟ್ಲೆಯು ಕೋರ್ಟಿನಿಂದ ವಿಚಾರಿಸಲ್ಪಡತಕ್ಕಂಥ ಪ್ರಕಾರದ್ದು ಅಥವಾ ಅಷ್ಟು ಗೊಂದಲವುಳ್ಳದ್ದು ಅಥವಾ ಮಹತ್ವವುಳ್ಳದ್ದು ಅಥವಾ ಯಾವದೊಂದು ಖಟ್ಲೆಯಲ್ಲಿಯ ಆರೋಪಿತನು, ಇಂಥ ನ್ಯಾಯಪಂಚಾಯತಕ್ಕೆ ವಿಧಿಸಲಿಕ್ಕೆ ಅಧಿಕಾರವಿರುವ ಸ್ವರೂಪದ ಶಿಕ್ಷೆಯಿಂದ ಬೇರೆಯಾದ ಅಥವಾ ಅದಕ್ಕಿಂತ ಹೆಚ್ಚು ಕಠಿಣವಾದ ಯಾವದೊಂದು ಶಿಕ್ಷೆಯನ್ನು ಪಡೆಯತಕ್ಕದ್ದೆಂದು ಇರುವದೆಂದು ಅಭಿಪ್ರಾಯಪಟ್ಟಾಗ್ಗೆ, ಅದು ಕೆಲಸವನ್ನು ನಿಲ್ಲಿಸಬೇಕು, ಮತ್ತು ಸದರಿ ದಾವೆಯನ್ನು ಡಿಸ್ಟ್ರಿಕ್ಟ ಕೋರ್ಟಿನ ಕಡೆಗೆ, ಅಥವಾ ಸದರಿ ಖಟ್ಲೆಯನ್ನು ಸೆಶನ್ಸ ಕೋರ್ಟಿನ ಕಡೆಗೆ, ಹುಕುಮಿನ ಸಲುವಾಗಿ ಬರೆದು ಕಳುಹಿಸಬೇಕು.

(೨) ಪ್ರಸಂಗವಿದ್ದಂತೆ ಡಿಸ್ಟ್ರಿಕ್ಟ ಕೋರ್ಟು ಅಥವಾ ಸೆಶನ್ಸ ಕೋರ್ಟು ಸದರಿ ದಾವೆಯು ಅಥವಾ ಖಟ್ಲೆಯು ನ್ಯಾಯಪಂಚಾಯತಿಯಿಂದ ವಿಚಾರಿಸಲ್ಪಡಬಾಗದಂಥ ಪ್ರಕಾರದ್ದು, ಅಥವಾ ಅಷ್ಟು ಗೊಂದಲವುಳ್ಳದ್ದು ಅಥವಾ ಮಹತ್ವವುಳ್ಳದ್ದು ಇರುವದೆಂದು ಅಥವಾ ಯಾವದೊಂದು ಖಟ್ಲೆ

ಯಲ್ಲಿ ಆರೋಪಿತನು ಇಂಥ ನ್ಯಾಯಪಂಚಾಯತಕ್ಕೆ ವಿಧಿಸಲಿಕ್ಕೆ ಅಧಿಕಾರವಿರುವ ಸ್ವರೂಪದ ಶಿಕ್ಷೆಯಿಂದ ಬೇರೆಯಾದ ಅಥವಾ ಅದಕ್ಕಿಂತ ಹೆಚ್ಚು ಕಠಿಣವಾದ ಯಾವದೊಂದು ಶಿಕ್ಷೆಯನ್ನು ಪಡೆಯತಕ್ಕದ್ದೆಂದು ಅಭಿಪ್ರಾಯಪಟ್ಟರೆ, ಇಂಥ ಕೋರ್ಟು ಇಂಥ ದಾವೆಯ ಅಥವಾ ಖಟ್ಲೆಯ ವಿಚಾರ ಮಾಡಲಿಕ್ಕೆ ಅಧಿಕಾರವಿರುವ, ಪ್ರಸಂಗದ ಪ್ರಕಾರ, ದಿವಾಣಿ ಅಥವಾ ಫೌಜದಾರೀ ಕೋರ್ಟಿಗೆ ಅರ್ಜಿ ಮಾಡಲಿಕ್ಕೆ ವಾದಿಗೆ ಅಥವಾ ಫಿರ್ಯಾದಿಗೆ ಫರ್ಮಾಯಿಸುವ ಹುಕುಮು ಮಾಡಬೇಕು

(೩) ಪ್ರಸಂಗವಿದ್ದಂತೆ ಡಿಸ್ಟ್ರಿಕ್ಟ ಕೋರ್ಟು ಅಥವಾ ಸೆಶನ್ಸ ಕೋರ್ಟು ಸದರಿ ದಾವೆಯು ಅಥವಾ ಖಟ್ಲೆಯು ಯಾವದೊಂದು ಕೋರ್ಟಿನಿಂದ ವಿಚಾರಿಸಲ್ಪಡತಕ್ಕಂಥ ಪ್ರಕಾರದ್ದು ಅಥವಾ ಅಷ್ಟು ಗೊಂದಲವುಳ್ಳದ್ದು ಅಥವಾ ಮಹತ್ವವುಳ್ಳದ್ದು ಅಥವಾ ಯಾವದೊಂದು ಖಟ್ಲೆಯಲ್ಲಿಯ ಆರೋಪಿತನು ಇಂಥ ನ್ಯಾಯಪಂಚಾಯತಕ್ಕೆ ವಿಧಿಸಲಿಕ್ಕೆ ಅಧಿಕಾರವಿರುವ ಸ್ವರೂಪದ ಶಿಕ್ಷೆಯಿಂದ ಬೇರೆಯಾದ ಅಥವಾ ಅದಕ್ಕಿಂತ ಹೆಚ್ಚು ಕಠಿಣವಾದ ಯಾವದೊಂದು ಶಿಕ್ಷೆಯನ್ನು ಪಡೆಯತಕ್ಕದ್ದಲ್ಲವೆಂದು ಇರುವದಿಲ್ಲವೆಂದು ಅಭಿಪ್ರಾಯಪಟ್ಟರೆ, ಇಂಥ ಕೋರ್ಟು ಸದರಿ ದಾವೆಯನ್ನು ಅಥವಾ ಖಟ್ಲೆಯನ್ನು, ಬರೆದು ಕೇಳಿದ ನ್ಯಾಯಪಂಚಾಯತದ ಕಡೆಗೆ, ನಿಕಾಲೆಗಾಗಿ ತಿರಿಗಿ ಕಳುಹಿಸಬೇಕು.

ಯಾವದೇ ಪಕ್ಷಕಾರನಿಗೆ ನ್ಯಾಯಮಂಡಲದ ಎದುರಿನಲ್ಲಿ ದಿವಾಣಿ ಕೆಲಸದಲ್ಲಿ ಡಿಸ್ಟ್ರಿಕ್ಟ ಕೋರ್ಟಿನ ಮುಂದೆ (ಡಿಸ್ಟ್ರಿಕ್ಟ ಜಜ್ಜ ಕೋರ್ಟಿನ ಮುಂದೆ) ಮತ್ತು ಫೌಜದಾರಿ ಕೆಲಸದಲ್ಲಿ ಡಿಸ್ಟ್ರಿಕ್ಟ ಮ್ಯಾಜಿಸ್ಟ್ರೇಟ ಸಾಹೇಬನ ಮುಂದೆ ಕೆಲಸದ ಕಠಿಣ ಸ್ವರೂಪದ ಬಗ್ಗೆ ಅರ್ಜಿಮಾಡಿ ದಾದು ಪಚ್ಚಿಕೊಳ್ಳಬಹುದು.

೭೮ ಅಪೀಲುಗಳು— (೧) ಯಾವದೇ ದಾವೆಯ ಸಂಬಂಧದಿಂದ್ದ ನ್ಯಾಯಪಂಚಾಯತದಿಂದ ಮಾಡಲ್ಪಟ್ಟ ಹುಕುಮನಾಮೆಯ ವಿರುದ್ಧವಾಗಿ ಡಿಸ್ಟ್ರಿಕ್ಟ ಕೋರ್ಟಿಗೆ, ಮತ್ತು ಯಾವದೇ ಖಟ್ಲೆಯ ಸಂಬಂಧದ ಹುಕುಮಿನ ವಿರುದ್ಧವಾಗಿ ಸೆಶನ್ಸ ಕೋರ್ಟಿಗೆ ಅಪೀಲು ನಡೆಯತಕ್ಕದ್ದು

(೨) ಇಂಥ ಅಪೀಲುಗಳನ್ನು ದಾಖಲ ಮಾಡುವದರ ಸಲುವಾಗಿರುವ ಅವಧಿಯು ಪ್ರಸಂಗವಿದ್ದಂತೆ ಹುಕುಮನಾಮೆಯ ಅಥವಾ ಹುಕುಮಿನ ತಾರೀಖಿನಿಂದ ಮೂವತ್ತು ದಿವಸಗಳಾಗಿರತಕ್ಕದ್ದು

೭೯. ಹುಕುಮನಾಮೆಗಳು ಮತ್ತು ಹುಕುಮಗಳು ಕೊನೆಯವಾಗಿರಬೇಕು —೭೭ನೇ ೭೮ನೇ ೮೭ನೇ ಅಥವಾ ೮೭ (ಅ)ನೇ ಕಲಮಿನನ್ವಯ ಯಾವದೊಂದು ಜಿಲ್ಹಾ ಕೋರ್ಟು ಅಥವಾ ಸೆಶನ್ಸ ಕೋರ್ಟು ಮಾಡಿದ

**ಪ್ರತಿಯೊಂದು ಹುಕುಮು ಕೊನೆಯದಾಗಿರತಕ್ಕದ್ದು ಹಾಗೂ ಅದರ ಮೇಲೆ ಯಾವದೇ ಅಪೀಲಾಗಲಿ, ತಿದ್ದುಪಡಿಯಾಗಲೀ, ಪುನರ್ವಿಚಾರಣೆಯಾಗಲೀ ನಡೆಯತಕ್ಕದ್ದಲ್ಲ.**

## ಪಂಚಾಯತಿಯ ನ್ಯಾಯದಾನ ಪದ್ಧತಿಯ ವಿಶೇಷಗಳು

೧ ಊರೊಳಗಿನ ನ್ಯಾಯವು ಊರಲ್ಲಿಯೇ

೨ ಕಡಿಮೆ ಖರ್ಚು, ಕಡಿಮೆ ಆಯಾಸ ಮತ್ತು ವೇಳೆಯ ಲುಕಸಾನು ಕಡಿಮೆ.

೩ ವಕೀಲನ ಹೊರತಾಗಿ—ವಕೀಲ ಫೀಯ ಉಳತಾಯ (ಲಾಭ)

೪ ಸಿವ್ಹಿಲ್ ಪ್ರೋಸಿಜರ ಇಲ್ಲವೆ ಕ್ರಿಮಿನಲ್ ಪ್ರೋಸಿಜರ ಇಲ್ಲವೆ ಪುರಾವೆಯ ಕಾಯದೆ ಇವುಗಳ ತಂತ್ರ ಕಾದುಕೊಳ್ಳುವದರ ಹೊರತಾಗಿ, ತೊಡಕಿಲ್ಲದ, ಸರಳವಾದ ಸಾದಾ ನ್ಯಾಯ.

೫ ಬರೆ (ಫಕ್ತ) ಒಂದೇ ಅಪೀಲು—ವಾದವು (ಜಗಳ) ಪೂರಾ ಮುಗಿಯಲಿಕ್ಕೆ ಕೆಳಕೋರ್ಟಿನಿಂದ ಮೇಲು ಕೋರ್ಟಿಗೆ ಹೋಗಲಿಕ್ಕೆ ಬೇಡ-ಬಹಳ ದಿನಗಳಾದರೂ ಬೇಡ.

೬ ಸಾಧಾರಣವಾಗಿ ನ್ಯಾಯದಾನವು ಪಕ್ಷಪಾತವಿಲ್ಲದೆ ಆಗಬೇಕೆಂದು, ನ್ಯಾಯದಾನದ ಅಧಿಕಾರಿಗಳು ಸರಕಾರದಿಂದ ಸ್ವತಂತ್ರವಾಗಿ ನೇಮಿಸಲ್ಪಡುತ್ತಾರೆ. ಬೇರೆ ಬೇರೆ ದೇಶಗಳಲ್ಲಿ ನಡೆಯುತ್ತ ಬಂದ ಈ ಪದ್ಧತಿಯು ಅವಲಂಬನವನ್ನು ಇಲ್ಲಿ ಮಾಡಿರುವದಿಲ್ಲ. ನ್ಯಾಯಪಂಚಾಯತದ ಸದಸ್ಯರು ಚುನಾಯಿಸಿಯೇ ಬರಲಿಕ್ಕೆಬೇಕು, ಎಂಬದು, ಈ ಕಾಯದೆಯ ಎಲ್ಲಕ್ಕಿಂತ ಮಹತ್ವದ ವಿಶೇಷವಿರುವದು.

ನ್ಯಾಯಪಂಚಾಯತದ ನ್ಯಾಯ ಮಂಡಲವು ತನ್ನ ಕೆಲಸವನ್ನು ಪಕ್ಷಪಾತವಿಲ್ಲದೆ ಮತ್ತು ಸರಳ ರೀತಿಯಿಂದ ಮಾಡಿದರೆ, ಹಳ್ಳಿಯೊಳಗಿನ ಕಾಯದೆ ಬಾಜಿಗೆ (ಬೆದರಿಕೆ) ಕೋರ್ಟು ಕಚೇರಿಗಳ ಹುಚ್ಚಿಗೆ ಮತ್ತು ಇವುಗಳಿಂದಾಗುವ ಒಕ್ಕಲತನ, ಮಿಕ್ಕ ಉದ್ಯೋಗ—ದಂದುಗಗಳ ಲುಕಸಾನಿಗೆ ಅಡ್ಡಿಯಾಗುವದರಲ್ಲಿ ಸಂಶಯವಿಲ್ಲ.

---

# ಬಾಬು ೮

# ಅಮಲಬಜಾವಣಿ

ಪ್ರಕರಣದ ರೂಪರೇಖೆ—ನ್ಯಾಯಪಂಚಾಯತಿಗೆ ದಿವಾಣಿ ಮತ್ತು ಫೌಜದಾರಿ ಹೀಗೆ ಇಬ್ಬಗೆಯ ಕೆಲಸದಲ್ಲಿ ನಿಕಾಲೆ ಕೊಡುವ ಅಧಿಕಾರವಿರುವದೆಂದು ಹಿಂದೆ ಹೇಳಿಯೇ ಇದೆ. ಈ ಎರಡು ಬಗೆಯ ಕೆಲಸದ ನಿಕಾಲೆಯ ಅಮಲಬಜಾವಣಿ ಬೇರೆ ಬೇರೆ ಪದ್ಧತಿಯಿಂದ ಮಾಡುವ ಯೋಜನೆ ಈ ಪ್ರಕರಣದಲ್ಲಿ ಕೊಡಲಾಗಿದೆ.

ದಿವಾಣಿ ನಿಕಾಲೆಯ (ಹುಕುಮುನಾಮೆಯ) ಅಮಲಬಜಾವಣಿಯ ನಿಯಮಗಳು ಕಲಮು ೮೦ ರಿಂದ ೮೩ ರ ವರೆಗೆ ಕೊಡಲಾಗಿವೆ; ಮತ್ತು ಫೌಜದಾರಿ ನಿಕಾಲೆಯ (ದಂಡ ಇಲ್ಲವೆ ಲುಕಸಾನ ಮೋಬದಲೆಯ—ಬದಲಾಗಿ) ಅಮಲಬಜಾವಣಿಯ ವಿಷಯಗಳು ಕ. ೮೪ ರಿಂದ ೮೬ ರ ವರೆಗೆ ಕೊಡಲಾಗಿವೆ.

ದಿವಾಣಿ ನಿಕಾಲೆಯ ಅಮುಲಬಜಾವಣಿ ಕಲೆಕ್ಟರನ ಮುಖಾಂತರವೇ (ಮಾರ್ಫತ) ಆಗಲಿಕ್ಕೆಬೇಕು. ಇದನ್ನು ನ್ಯಾಯಪಂಚಾಯತಿಗೆ ಸ್ವಂತ ಮಾಡಲಿಕ್ಕೆ ಬರಲಾರದು.

ಫೌಜದಾರ ನಿಕಾಲೆಯ ಅಮುಲಬಜಾವಣಿ ಮಾಡುವ ಅಧಿಕಾರ ಮಾತ್ರ ನ್ಯಾಯಪಂಚಾಯತಿಗೆ ಕೊಡಲಾಗಿದೆ. ಆ ಅಧಿಕಾರದ ಸ್ವರೂಪ ಮತ್ತು ಮರ್ಯಾದೆ ಕ. ೮೪ (೨) ರಲ್ಲಿ ಕೊಡಲಾಗಿದೆ.

**೮೦. ಹುಕುಮನಾಮೆಯು ಪೂರ್ಣ ಮಾಡಲ್ಪಟ್ಟ ಅಥವಾ ಸರಿಪಡಿಸಲ್ಪಟ್ಟ ಸಂಗತಿಯನ್ನು ಬರೆದಿಡಬೇಕು—ಹುಕುಮನಾಮೆ ಧಾರಣಮಾಡುವವನ ಅಥವಾ ಫೈಸಲಿನ ಋಣಿಯ ಅರ್ಜಿಯ ಮೇಲಿಂದ ನ್ಯಾಯಪಂಚಾಯತಿಯು ಚೌಕಸಿ ಮಾಡಿದ ಬಳಿಕ ಅದಕ್ಕೆ ಹುಕುಮನಾಮೆಯು ಸಂಪೂರ್ಣವಾಗಿ ಅಥವಾ ಅಂಶತಃ ಪೂರ್ಣಮಾಡಲ್ಪಟ್ಟಿದೆ ಅಥವಾ ಸರಿಪಡಿಸಲ್ಪಟ್ಟದೆ ಎಂದು ಖಾತ್ರಿಯಾದರೆ, ಆ ನ್ಯಾಯಪಂಚಾಯತವು ಆ ಸಂಗತಿಯನ್ನು ಗೊತ್ತುಪಡಿಸಲ್ಪಟ್ಟ ರಜಿಸ್ಟರಿನಲ್ಲಿ ಬರೆದಿಡಬೇಕು.**

"ಹುಕುಮನಾಮೆ ಧಾರಣ ಮಾಡುವವ"—ಧನಕೋ.

"ದರೋಬಸ್ತ"—ಪೂರ್ಣವಾಗಿ.

"ಠರಾಯಿಸಿದ ರಜಿಸ್ಟರದಲ್ಲಿ"— ಪುಟ ೧೧೬ ರಲ್ಲಿಯ ರಜಿಸ್ಟರ ಕಲಮು ೯ ನೋಡು.

ಯಾವದೇ ಫೇಡು ಇಲ್ಲವೆ ಉಲಗಡೆ—ಖುಲಾಸಾ—ಪೂರ್ಣವಾಗಿ ಇಲ್ಲವೆ ಸಲ್ಪಾಂಶದಿಂದ ಆಗಿದ್ದರೆ—ಋಣಕೋ ಅರ್ಜಿಮಾಡಿ ಅದ ಖುಲಾಸೆ ನ್ಯಾಯಪಂಚಾಯತದ ರಜಿಸ್ಟರದಲ್ಲಿ ನಮೂದ ಮಾಡಿಸಿಕೊಳ್ಳುವದು ಆತನ ಹಿತದ ಹಾಗು ಸಂರಕ್ಷಣದ ಮತ್ತು ಪುರಾವೆ ದೃಷ್ಟಿಯಿಂದ ಇಷ್ಟವಾಗಿದೆ.

**೮೧ ಕಲೆಕ್ಟರನ ಮುಖಾಂತರ ಅಮುಲಬಜಾವಣಿ— (೧) ಹುಕುಮನಾಮೆಯು ತಾರೀಖಿನಿಂದ ಒಂದು ತಿಂಗಳ ಮುದತಿನ ನಂತರ ಆ ಹುಕುಮನಾಮೆಯು ಸಂಪೂರ್ಣವಾಗಿ ಅಥವಾ ಅಂಶತಃ ಪೂರ್ಣ ಮಾಡಲ್ಪಡದೆ ಅಥವಾ ಸರಿಪಡಿಸಲ್ಪಡದೆ ಉಳಿದರೆ, ಆ ಹುಕುಮನಾಮೆಯನ್ನು ಧಾರಣ ಮಾಡುವವನು, ಆ ಹುಕುಮನಾಮೆಯ ತಾರೀಖಿನಿಂದ ಒಂದು ವರ್ಷದೊಳಗೆ, ನ್ಯಾಯಪಂಚಾಯತದ ಕಡೆಗೆ ಅಮುಲ ಬಜಾವಣಿಯ ಸಲುವಾಗಿ ಅರ್ಜಿ ಮಾಡಬಹುದು**

**(೨) ಅಮುಲಬಜಾವಣಿಯ ಬಗ್ಗೆ ಹೀಗೆ ಅರ್ಜಿಮಾಡಲ್ಪಟ್ಟ ಮೇಲೆ ಆ ಹುಕುಮನಾಮೆಯು ಸಂಪೂರ್ಣವಾಗಿ ಅಥವಾ ಅಂಶತಃ ಪೂರ್ಣ ಮಾಡಲ್ಪಡದೆ ಅಥವಾ ಸರಿಪಡಿಸಲ್ಪಡದೆ ಉಳಿದದೆಯೆಂದು ಆ ನ್ಯಾಯಪಂಚಾಯತದ ಕಲೆಕ್ಟರನಿಗೆ ದಾಖಲೆ ಕೊಡಬೇಕು, ಮತ್ತು ಅಮುಲಬಜಾವಣಿಯ ಬಗ್ಗೆ ಮಾಡಲ್ಪಟ್ಟ ಅರ್ಜಿಯ ತಾರೀಖಿನಿಂದ ಒಂದು ವರ್ಷದೊಳಗಾಗಿ ಆ ನ್ಯಾಯಪಂಚಾಯತವು ಕಲೆಕ್ಟರನಿಗೆ ದಾಖಲೆ ಕೊಟ್ಟಿದ್ದರೆ, ಇಂಥ ದಾಖಲೆಯು ಮುಟ್ಟಿದ ಮೇಲೆ ಕಲೆಕ್ಟರನು,—**

(ಅ) ಹುಕುಮನಾಮೆಯು ಹಣದ ಸಲುವಾಗಿ ಇದ್ದರೆ, ಅದನ್ನು ಭೂಮಿಯ ಮುಹಸೂಲಿನ ಬಾಕಿಯಂತೆಯೇ ವಸೂಲು ಮಾಡಲಿಕ್ಕೆ ಕೆಲಸ ನಡೆಯಿಸಬೇಕು ; ಅಥವಾ.

(ಬ) ಹುಕುಮನಾಮೆಯು ಯಾವದೊಂದು ವಿಶಿಷ್ಟ ಜಂಗಮ ಆಸ್ತಿಯ ವಿಷಯಕ್ಕೆ ಇದ್ದರೆ, ಆ ಹುಕುಮನಾಮೆಯು ದಿವಾಣಿ ಕೋರ್ಟಿನ ಹುಕುಮನಾಮೆ ಇದ್ದಂತೆಯೇ ಅದರ ಅಮುಲಬಜಾವಣಿ ಮಾಡಿಸಬೇಕು. ಮತ್ತು ಹೀಗೆ ಮಾಡು ವಾಗ ಅವನು ದಿವಾಣಿ ಕೋರ್ಟಿನ ಎಲ್ಲ ಅಧಿಕಾರಗಳನ್ನು ನಡಿಸಬಹುದು.

ಹುಕುಮನಾಮೆಯ ಫೇಡ ಇಲ್ಲವೆ ಖುಲಾಸೆ ( ಉಲಗಡೆ) ಆಗದೆ ಇದ್ದರೆ.

ಹುಕುಮನಾಮೆಯ ತಾರೀಖಿನಿಂದ ೧ ತಿಂಗಳ ಮುದ್ದತ್ತಿನ ತರುವಾಯ ಮತ್ತು ಒಂದು ವರುಷದ ಒಳಗೆ,

ಬಜಾವಣಿ ಸಲುವಾಗಿ ಗ್ರಾಮದ ನ್ಯಾಯದಾನಮಂಡಲದ ಕಡೆಗೆ ಅರ್ಜಿ ಮಾಡುವ ಅಧಿಕಾರ ಧನಕೋನಿಗೆ ಇರುತ್ತದೆ.

ಹುಕುಮನಾಮೆಯ ಪೂರಾ ಫೇಡ (ಕೊಡೋಣ) ಇಲ್ಲವೆ ಉಲಗಡೆ (ಖುಲಾಸೆ) ಆಗಿಲ್ಲ ಎಂಬ ದಾಖಲೆ ನ್ಯಾಯಪಂಚಾಯತವು ಕಲೆಕ್ಟರನ ಕಡೆಗೆ ಕಳಿಸಲಿಕ್ಕೆ ಬೇಕು.

ಆ ಮೇಲೆ “ ಕಲೆಕ್ಟರನು—ಬಜಾವಣಿ ಸಲುವಾಗಿ ಮಾಡಿದ ಅರ್ಜಿಯ ತಾರೀಖಿನಿಂದ. ...... .ಇದ್ದರೆ. ”

(ಅ) ಲ್ಯಾಂಡ ರೆವ್ಹಿನ್ಯೂ ಕೋಡ ಕ. ೧೫೦ ರಲ್ಲಿ, ಜಮೀನು ಮುಹಸೂಲಿನ ನಿಂತ ಬಾಕಿ ವಸೂಲು ಮಾಡುವ ಆರು ಪ್ರಕಾರ ( ಬಗೆ )ಗಳು ಹೇಳಲಾಗಿವೆ. ಅವು ಯಾವವೆಂದರೆ–

(೧) ಮೈಗಳ್ಳತನ (ಕಸೂರ) ಮಾಡುವವರ ಮೇಲೆ ಮಾಗಣಿಯ (ಬೇಡಿಕೆಯ) ಲೇಖೀ ನೋಟೀಸು ಬಜಾಯಿಸಿ ಲಾಗೂ ಮಾಡಿ ( ಕ. ೧೫೨ ) ;

(೨) ರೈತವಾರಿ ಇಲ್ಲವೆ ಇನಾಮು ಜಮೀನಿಯೊಳಗಿನ ಮಾಲೀಕನ ಹಿತಸಂಬಂಧ ಗಳನ್ನು ಜಪ್ತಮಾಡಿ ( ಕ. ೧೫೩ ) ;

(೩) ಕಸೂರ ಮಾಡುವವನ ಜಂಗಮ ಮಾಲು ಜಪ್ತಮಾಡಿ ಮತ್ತು ಮಾರಿ (ಕ.೧೫೪);

(೪) ಕಸೂರ ಮಾಡುವವನ ಸ್ಥಾವರ ಆಸ್ತಿಯನ್ನು ಮಾರಿ ( ಕ. ೧೫೫ ) ;

(೫) ಕಸೂರ ಮಾಡುವವನಿಗೆ ಕೈಸೆರೆ ಹಿಡಿದು, ಸೆರೆಯಲ್ಲಿಟ್ಟು ( ಕ. ೧೫೭, ೧೫೮ ) ;

(೬) ಇನಾಮು ಊರು ಇದ್ದರೆ, ಅದನ್ನೆಲ್ಲ ಜಪ್ತಮಾಡಿ ( ಕ. ೧೫೯, ೧೬೩ ) ;

(ಬ) ಈ ಕೆಲಸದಲ್ಲಿ ಜಂಗಮ ಮಾಲು ಹಿಡಿದು ಅದನ್ನು ದನಕೋನಿಗೆ ಕೊಡುವ ಇಲ್ಲವೆ ಋಣಕೋನ ಆಸ್ತಿ–ಪಾಸ್ತಿ ( ಮಾಲಮತ್ತೆ ) ಜಪ್ತಮಾಡುವ ಇಲ್ಲವೆ ಅವನನು ದಿವಾಣಿ ತುರಂಗದ ಸೆರೆಯಲ್ಲಿಡುವ ಅಧಿಕಾರ ದಿವಾಣಿ ಕೋರ್ಟಿಗಿರುವದು.

೮೨. ಕಲೆಕ್ಟರನ ಮುಖಾಂತರ ಹಪ್ತೆಯ ಹುಕುಮನಾಮೆಯ ಅಮಲಬಜಾವಣಿ — (೧) ನ್ಯಾಯಪಂಚಾಯತವು ೭೬ನೇ ಕಲಮಿನನ್ವಯ ಹುಕುಮನಾಮೆ ಮಾಡಿದ ಹಣದ ರಕಮಿನ ಯಾವದೇ ಹಪ್ತೆಯನ್ನು ಕೊಡುವ ಬಗ್ಗೆ ನೇಮಿಸಲ್ಪಟ್ಟ ತಾರೀಖಿನಿಂದ ಒಂದು ತಿಂಗಳ ಮುದತಿನ ನಂತರ ಯಾವದೊಂದು ಹಪ್ತೆಯು ಅಥವಾ ಅದರ ಭಾಗವು ಕೊಡಲ್ಪಡದೆ ಉಳಿದರೆ, ಆ ಹುಕುಮನಾಮೆ ಧಾರಣ ಮಾಡುವವನು, ಅದು ಕೊಡಲ್ಪಡ ಬೇಕಾದ ತಾರೀಖಿನಿಂದ ಒಂದು ವರ್ಷದೊಳಗಾಗಿ, ಅಮಲಬಜಾವಣಿಯ ಸಲುವಾಗಿ ನ್ಯಾಯಪಂಚಾಯತದ ಕಡೆಗೆ ಅರ್ಜಿ ಮಾಡಬಹುದು.

(೨) ಅಮಲಬಜಾವಣಿಯ ಬಗ್ಗೆ ಹೀಗೆ ಅರ್ಜಿ ಮಾಡಲ್ಪಟ್ಟ ಮೇಲೆ, ಆ ಹಪ್ತೆಯು ಅಥವಾ ಅದರ ಭಾಗವು ಇನ್ನೂ ಕೊಡಲ್ಪಡದೆ ಉಳಿದಿರುವದೆಂದು ಆ ನ್ಯಾಯಪಂಚಾಯತವು ಕಲೆಕ್ಟರನಿಗೆ ದಾಖಲ ಕೊಡಬೇಕು, ಮತ್ತು ಅಮಲಬಜಾವಣಿಯ ಬಗ್ಗೆ ಮಾಡಲ್ಪಟ್ಟ ಅರ್ಜಿಯ ತಾರೀಖಿನಿಂದ ಒಂದು ವರ್ಷದೊಳಗಾಗಿ ಆ ನ್ಯಾಯಪಂಚಾಯತವು ಕಲೆಕ್ಟರನಿಗೆ ದಾಖಲೆ ಕೊಟ್ಟಿದ್ದರೆ, ಇಂಥ ದಾಖಲೆಯು ಮುಟ್ಟಿದ ಮೇಲೆ ಕಲೆಕ್ಟರನು, ಹೀಗೆ ಕೊಡಲ್ಪಡದೆ ಉಳಿದಿದ್ದ ಹಪ್ತೆಯ ರಕಮನ್ನು, ಅದು ಭೂಮಿಯ ಮಹಸೂಲಿನ ಬಾಕಿ ಇದ್ದಂತೆಯೇ ವಸೂಲ ಮಾಡಲಿಕ್ಕೆ ಕೆಲಸ ನಡೆಯಿಸಬೇಕು.

ಹುಕುಮನಾಮೆಗಳು ಬೇರ ಬೇರೆ ಬಗೆಯಾಗಿರುವದು ಶಕ್ಯವಿದೆ. ಉದಾ—೧ ಎಲ್ಲ ರಕಮು ಒಮ್ಮೆಲೇ ತೆಗೆದುಕೊಳ್ಳುವ ಬಗ್ಗೆ, ೨ ಹಪ್ತೆಗಳಿಂದ—ಗೊತ್ತಾದ ಹಪ್ತೆಗಳಿಂದ, ಯಾವ ದೊಂದು ಜಂಗಮಾಲು ಕೊಡುವ ಬಗ್ಗೆ.

ಹಪ್ತೆಯ ವಸೂಲಿಗಾದರೂ ಮೇಲಿನ ಕಲಮು ೫೧ ನೇದ್ದರ ನಿಯಮಗಳೇ ಲಾಗೂ ಇರುತ್ತವೆ; ಮತ್ತು ಅವುಗಳನ್ನೇ ಈ ಕಲಮಿನಲ್ಲಿ ನಮೂದಿಸಲಾಗಿವೆ.

೮೩. ದಾಖಲೆ ಕೊಡಲ್ಪಟ್ಟ ನಂತರ ಹುಕುಮನಾಮೆಯನ್ನು ಅಥವಾ ಹಪ್ತೆಯನ್ನು ಪೂರ್ಣ ಮಾಡುವದು — ಕಲಮು ೮೧ ಅಥವಾ ೮೨ ಇದರ ನ್ವಯ ಕಲೆಕ್ಟರನಿಗೆ ದಾಖಲೆ ಕೊಟ್ಟ ನಂತರ, ಆದರೆ ಆ ಹುಕುಮನಾಮೆಯು ಕಲೆಕ್ಟರನ ಮುಖಾಂತರ ಅಮಲಬಜಾವಣಿ ಮಾಡಲ್ಪಡುವ ಪೂರ್ವ ದಲ್ಲಿ ಆ ಹುಕುಮನಾಮೆಯು ಅಥವಾ ಹಪ್ತೆಯು ಸಂಪೂರ್ಣವಾಗಿ ಪೂರ್ಣ ಮಾಡಲ್ಪಟ್ಟು ಅದು ೮೧ನೇ ಕಲಮಿನನ್ವಯ ನೊಂದಿಸಲ್ಪಟ್ಟರೆ, ನ್ಯಾಯ ಪಂಚಾಯತವು ಪೂರ್ಣ ಮಾಡಲ್ಪಟ್ಟಿದ್ದರ ದಾಖಲೆಯನ್ನು ಕೂಡಲೆ ಕಲೆಕ್ಟರನಿಗೆ ಕೊಡಬೇಕು, ಮತ್ತು ಕಲೆಕ್ಟರನು ಆನಂತರ ಅಮಲ

ಬಜಾವಣಿಯ ಕಾರ್ಯವನ್ನು ನಿಲ್ಲಿಸಬೇಕು. ಕಲೆಕ್ಟರನ ಮುಖಾಂತರದ ಅನುಲಬಜಾವಣಿಯಿಂದ ವಸೂಲಾದ ಹಣದ ಎಲ್ಲ ರಕಮುಗಳು, ಹುಕುಮುನಾಮೆಯು ಪೂರ್ಣ ಮಾಡಲ್ಪಟ್ಟನಂತರ, ಫೈಸಲಿನ ಋಣಿಗೆ ತಿರಿಗಿ ಕೊಡಲ್ಪಡಬೇಕು

೪೪ ದಂಡ ಮತ್ತು ಲುಕಸಾನ ಭರಪಾಯಿಯನ್ನು ಯಾವಾಗ್ಗೆ ಕೊಡಬೇಕು— (೧) ಲುಕಸಾನ ಭರಪಾಯಿಯೆಂದು ಕೊಡುವ ಬಗ್ಗೆ ಹುಕುಮು ಆದ ಪ್ರತಿಯೊಂದು ರಕಮು, ಮತ್ತು ೪೫ನೇ ೪೬ನೇ ೪೭ನೇ ಮತ್ತು ೪೮ನೇ ಕಲಮುಗಳನ್ವಯ ನ್ಯಾಯಪಂಚಾಯತಿಯಿಂದ ಹೊರಿಸಲ್ಪಟ್ಟ ಪ್ರತಿಯೊಂದು ದಂಡವು ಕೂಡಲೆ ಕೊಡಲ್ಪಡತಕ್ಕದ್ದು,

ಆದರೆ ಗೊತ್ತುಪಡಿಸುವದೇನಂದರೆ, ನ್ಯಾಯಪಂಚಾಯತವು ತಾನು ಲುಕಸಾನ ಭರಪಾಯಿಯನ್ನು ಅಥವಾ ದಂಡವನ್ನು ಕೊಡುವದಕ್ಕೆ ಹುಕುಮು ಮಾಡಿದ ಯಾವನೇ ಮನುಷ್ಯನಿಗೆ ಅದನ್ನು ೧೫ ದಿವಸಗಳಿಗಿಂತ ಹೆಚ್ಚಲ್ಲದ ಯಾವ ವೇಳೆಯು ಅದಕ್ಕೆ ಯೋಗ್ಯ ತೋರುವದೋ ಅಂಥ ವೇಳೆಯಲ್ಲಿ ಮತ್ತು ತಾರಣದ ಸಲುವಾಗಿ ಯಾವ ಶರ್ತುಗಳನ್ನು ಹಾಕುವದು ಯೋಗ್ಯವೆಂದು ಆ ನ್ಯಾಯಪಂಚಾಯತಿಗೆ ತೋರುವದೋ ಅಂಥ ಶರ್ತುಗಳ ಮೇಲೆ, ಕೊಡಲಿಕ್ಕೆ ಪರವಾನಗಿ ಕೊಡಬಹುದು

(೨) ವಸೂಲ ಮಾಡುವ ವಿಧಾನವು—ದಂಡದ ಅಥವಾ ಲುಕಸಾನ ಭರಪಾಯಿಯ ರಕಮು ಹುಕುಮಿನ ತಾರೀಖಿನಿಂದ ಹದಿನೈದು ದಿವಸಗಳ ವರೆಗೆ ಕೊಡಲ್ಪಡದೆ ಉಳಿದರೆ, ನ್ಯಾಯಪಂಚಾಯತವು ತಪ್ಪು ಮಾಡಿದವನ ಜಂಗಮ ಆಸ್ತಿಯನ್ನು ಜಪ್ತುಮಾಡಿ ಮಾರಿ ವಸೂಲ ಮಾಡಬೇಕು.

(೩) ದಂಡದ ಅಥವಾ ಲುಕಸಾನ ಭರಪಾಯಿಯ ರಕಮು ಪೂರ್ಣವಾಗಿ ವಸೂಲ ಆಗಿದ್ದರೆ ನ್ಯಾಯಪಂಚಾಯತವು ಕಲೆಕ್ಟರನಿಗೆ ಆ ಪ್ರಕಾರ ದಾಖಲೆ ಕೊಡಬೇಕು, ಮತ್ತು ಆ ರಕಮು ನ್ಯಾಯಪಂಚಾಯತಿನಿಂದ (೨)ನೇ ಪೋಟ-ಕಲಮಿನನ್ವಯ ವಸೂಲ ಮಾಡಲ್ಪಡಲಿಕ್ಕೆ ಪಾತ್ರವಾದ ತಾರೀಖಿನಿಂದ ಒಂದು ವರ್ಷದ ಮುದತಿನೊಳಗೆ ನ್ಯಾಯಪಂಚಾಯತವು ಕಲೆಕ್ಟರನಿಗೆ ದಾಖಲೆ ಕೊಟ್ಟಿದ್ದರೆ, ಇಂಥ ದಾಖಲೆಯು ಮುಟ್ಟಿದ ಬಳಿಕ ಕಲೆಕ್ಟರನು, ಅದನ್ನು ಭೂಮಿಯ ಮಹಸೂಲಿನ ಬಾಕಿಯಂತೆಯೇ ವಸೂಲ ಮಾಡಲಿಕ್ಕೆ ಕೆಲಸ ನಡಿಸಬೇಕು ಮತ್ತು ಹೀಗೆ ವಸೂಲಾದ ರಕಮನ್ನು ನ್ಯಾಯಪಂಚಾಯತಿಯ ಕಡೆಗೆ ಕಳುಹಿಸಬೇಕು.

ಫಿರ್ಯಾದಿಗೆ ಖಟ್ಲೆಯ ವೆಚ್ಚವೆಂದು ಇಲ್ಲವೆ ಬೇರೆ ಲುಕ್ಸಾನು ಭರಪಾಯಿ ಸಲುವಾಗಿ ಆರೋಪಿಗೆ ಆದ ದಂಡದಲ್ಲಿಯ ಕೆಲವು ರಕಮು ಕೊಡಿಸುವ ಯೋಜನೆ ಕಲಮು ೪೭ ರಲ್ಲಿ ಕೊಡಲಾಗಿದೆ.

ಆರೋಪಿಗೆ ಅವನ ವಿರುದ್ಧ ಖೊಟ್ಟಿ ಖಟ್ಲೆ ಮಾಡಿದ ಬಗ್ಗೆ ಲುಕಸಾನಿಯ ಮೋಬದಲೆ (ಭರಪಾಯಿ) ಫಿರ್ಯಾದಿ ಕಡೆಯಿಂದ ಕೊಡಿಸುವ ಯೋಜನೆ ಕ. ೪೮ ರಲ್ಲಿ ಕೊಡಲಾಗಿದೆ.

ಕ. ೪೫ ಮತ್ತು ೪೬ ರಲ್ಲಿ ನ್ಯಾಯಮಂಡಲದ ದಂಡ ಮಾಡುವ ಅಧಿಕಾರ ಕೊಡಲಾಗಿದೆ.

ದಂಡ ಇಲ್ಲವೆ ಲುಕಸಾನಿ ತುಂಬುವ ಮುದ್ದತು

೧ ನ್ಯಾಯ-ನಾಜವಿ-ಸರಿ ತೋರುವಂಥ -೧೫ ದಿನಕ್ಕಿಂತ ಹೆಚ್ಚಾಗದ ಅವಧಿಯಲ್ಲಿ ಮತ್ತು

೨ ಅವಶ್ಯವಾದ ಜಮೀನಿಯ ಶರ್ತಿನ ಮೇಲೆ

ಮುದ್ದತಿಯಲ್ಲಿ ಕೊಡದಿದ್ದರೆ— (೧) ನ್ಯಾಯಮಂಡಲವು ಜಂಗಮ ಮಾಲನ್ನು ಜಪ್ತ ಮಾಡಿ ಇಲ್ಲವೆ ಅದನ್ನು ಮಾರಿ, ವಸೂಲ ಮಾಡಲಿಕ್ಕೆಬೇಕು.

(೨) ಈ ರೀತಿಯಿಂದ ಪೂರಾ ವಸೂಲಾಗದಿದ್ದರೆ. ಬಾಕಿ ಉಳಿದ ವಸೂಲು ಕಲೆಕ್ಟರನಿಂದ ಆಗುವದು.

**೪೫. ದಂಡವು ಅಥವಾ ಲುಕಸಾನಭರಪಾಯಿಯು ವಸೂಲ ಆದಾಗ್ಗೆ ನೋಂದಿಸಲ್ಪಡಬೇಕು —ಕಲಮು ೪೪. ಇದರಲ್ಲಿ ಹೇಳಲ್ಪಟ್ಟ ದಂಡದ ಅಥವಾ ಲುಕಸಾನಭರಪಾಯಿಯ ರಕಮು ನ್ಯಾಯಪಂಚಾಯತಿಯಿಂದ ಪ್ರತ್ಯಕ್ಷವಾಗಿ ಅಥವಾ ಕಲೆಕ್ಟರನ ಮುಖಾಂತರವಾಗಿ ವಸೂಲ ಮಾಡಲ್ಪಟ್ಟ ಕೂಡಲೇ, ಹೀಗೆ ವಸೂಲ ಆದ ರಕಮು ಗೊತ್ತುಪಡಿಸಲ್ಪಟ್ಟ ರಜಿಸ್ಟರಿನಲ್ಲಿ ಬರೆಯಲ್ಪಡಬೇಕು**

ಫಾನು ಖಟ್ಲೆಯ (ಫೌಜದಾರಿ) ರಜಿಸ್ಟರ ಕ. ೮ ನೋಡು.

**೪೬. ಲುಕಸಾನ ಭರಪಾಯಿಯ ಹಣವನ್ನು ಗ್ರಾಮದ ಫಂಡಿನೊಳಗಿಂದ ಕೊಡುವದು—ಖರ್ಚು ಎಂದು ಅಥವಾ ಲುಕಸಾನಭರಪಾಯಿಯೆಂದು ಕೊಡಲ್ಪಡಬೇಕೆಂದು ನ್ಯಾಯಪಂಚಾಯತಿಯಿಂದ ೪೭ನೇ ಕಲಮಿನನ್ವಯ ಅಥವಾ ೪೮ನೇ ಕಲಮಿನನ್ವಯ ಹುಕುಮು ಮಾಡಲ್ಪಟ್ಟ ಯಾವದೇ ಹಣವು, ೪೫ನೇ ಮತ್ತು ೪೬ನೇ ಕಲಮುಗಳನ್ವಯ ವಸೂಲ ಆದ ರಕಮಿನೊಳಗಿಂದ ಕೊಡಲ್ಪಡಬೇಕು.**

ಕ. ೪೫ ಮತ್ತು ೪೬ ರುತೆ ಆದ ದಂಡದ ರಕಮುಗಳು ವಸೂಲಾದ ಮೇಲೆಯೇ, ಆ ರಕಮಿನೊಳಗಿಂದ (ಹಾಗೆ ಹುಕುಮು ಆಗಿದ್ದರೆ) ಖಟ್ಲೆಯ ವೆಚ್ಚವೆಂದು ಇಲ್ಲವೆ ಲುಕಸಾನ ಭರಪಾಯಿಯೆಂದು, ರಜಾವಿನಲ್ಲಿ ನಮೂದ ಇರುವ ರಕಮು ಪಕ್ಷಕಾರನಿಗೆ ಕೊಡಲಿಕ್ಕೆಬೇಕು

ಹೆಡಿಂಗ (ತಲೆಬರಹ) ದೊಳಗಿನ ಗ್ರಾಮ ಫಂಡ ಎಂಬ ಶಬ್ದವು ಅನವಶ್ಯಕವೂ ಭ್ರಮೆ ಹುಟ್ಟಿಸುವಂಥದೂ ಇರುತ್ತದೆ. ಅದನ್ನು ವಿಚಾರದಲ್ಲಿ ತೆಗೆದುಕೊಳ್ಳುವ ಕಾರಣವಿಲ್ಲ.

೮೭ ಜಿಲ್ಲಾ ಕೋರ್ಟು ಅಥವಾ ಸೆಶನ್ಸ ಕೋರ್ಟು ಹುಕುಮುತನ್ನು ರದ್ದು ಮಾಡಬಹುದು ಅಥವಾ ನಡೆಯಿಸಿದ ಕೆಲಸವನ್ನು ತೆಗೆದುಹಾಕ ಬಹುದು. (೧) ಯಾವದೇ ದಾವೆಯಲ್ಲಿ ಡಿಸ್ಟ್ರಿಕ್ಟ ಕೋರ್ಟು ಮತ್ತು ಯಾವದೇ ಖಟ್ಲೆಯಲ್ಲಿ ಸೆಶನ್ಸ ಕೋರ್ಟು ಯಾವದೇ ಕಾಲಕ್ಕೆ, ಲುಕ್ಸಾನು ಪಡೆದ ಪಕ್ಷಕಾರನು ಅರ್ಜಿ ಮಾಡಲಾಗಿ ಅಥವಾ ಇತರ ರೀತಿಯಿಂದ ಅಥವಾ ನ್ಯಾಯಪಂಚಾಯತವು ೭೭ನೇ ಕಲಮಿನನ್ವಯ ಬರೆದು ಕಳುಹಿಸಿದ್ದರ ಮೇಲಿಂದ, ಲೇಖೀ ಹುಕುಮು ಕೊಟ್ಟು ಯಾವದೇ ಪರ್ಯಾಯದಲ್ಲಿ ನ್ಯಾಯಪಂಚಾಯತವು ನಡೆಯಿಸಿದ ಯಾವದೇ ಕೆಲಸವನ್ನು ತೆಗೆದು ಹಾಕಬಹುದು, ಅಥವಾ ನ್ಯಾಯಪಂಚಾಯತಿಯಿಂದ ಮಾಡಲ್ಪಟ್ಟ ಯಾವದೇ ಹುಕುಮುನ್ನು ರದ್ದು ಮಾಡಬಹುದು.

(೨) ಡಿಸ್ಟ್ರಿಕ್ಟ ಕೋರ್ಟು ಯಾವದೇ ದಾವೆಯ ಸಂಬಂಧದಿಂದ (೧) ನೇ ಪೋಟ-ಕಲಮಿನನ್ವಯ ಯಾವದೊಂದು ಹುಕುಮುನ್ನು ಕೊಟ್ಟಾಗ್ಗೆ ವಾದಿಯು ಅದೇ ನ್ಯಾಯಾಶ್ರಯದ ಸಲುವಾಗಿ ದಿವಾಣಿ ಕೋರ್ಟಿನಲ್ಲಿ ಹೊಸದೊಂದು ದಾವೆಯನ್ನು ಮಾಡಬಹುದು, ಮತ್ತು ಆ ಹೊಸ ದಾವೆಯ ಮುದತಿನ ಲೆಖ್ಖ ಮಾಡುವಾಗ್ಗೆ, ನ್ಯಾಯಪಂಚಾಯತಿಯ ಮುಂದೆ ದಾವೆ ಮಾಡದ ತಾರೀಖಿನಿಂದ ಇಂಥ ಹುಕುಮಿನವರೆಗಿನ ಮುದತನ್ನು ಎಣಿಸಬಾರದು

(೩) ಸೆಶನ್ಸ ಕೋರ್ಟು ಯಾವದೇ ಖಟ್ಲೆಯ ಸಂಬಂಧದಿಂದ (೧)ನೇ ಪೋಟ-ಕಲಮಿನನ್ವಯ ಯಾವದೊಂದು ಹುಕುಮುನ್ನು ಕೊಟ್ಟಾಗ್ಗೆ ಹುಕುಮುತುಳ್ಳ ಮ್ಯಾಜಿಸ್ಟ್ರೇಟನ ಕೋರ್ಟಿನಲ್ಲಿ ಅದೇ ಅಪರಾಧದ ಸಂಬಂಧ ದಿಂದ ಕೆಲಸವನ್ನು ನಡೆಯಿಸಬಹುದು

ಯಾವ ಕೆಲಸಗಳು ಸಾಧಾರಣವಾಗಿ ನ್ಯಾಯಪಂಚಾಯತದ ಮುಂದೇ ದಾಖಲನಾಗ ಲಿಕ್ಕ ಬೇಕು, ಅವನ್ನು ಎರಡನೇ ಕೋರ್ಟಿನವರು ಸ್ವೀಕರಿಸಬಾರದು ಹೀಗೆ ಕ. ೫೭ ರಲ್ಲಿ ಪ್ರತಿ-ಬಂಧ ಹೇಳಲಾಗಿದೆ.

ಆದರೆ ಯಾವಾಗ್ಗೆ ಈ ಕಲಮಿನ ಕೆಳಗೆ ಕೆಲಸ ತೆಗೆದು ಹಾಕಲಾಗುತ್ತದೋ ಇಲ್ಲವೆ ಹುಕುಮುನಾಮೆ ಇಲ್ಲವೆ ಹುಕುಮು ರದ್ದು ಮಾಡುವದರಲ್ಲಿ ಬರುತ್ತದೋ, ಆಗ ಪಕ್ಷಕಾರನಿಗೆ ಇತರ ದಿವಾಣಿ ಇಲ್ಲವೆ ಫೌಜದಾರಿ ಕೋರ್ಟಿನಲ್ಲಿ ದಾದ ಬೇಡುವ ಮೋಕಳೀಕ (ಅನುವು) ಪ್ರಾಪ್ತವಾಗುತ್ತದೆ.

ಸಂಬಂಧಿಸಿದ ಕಲಮುಗಳು— ಕ. ೫೬, ೫೭, ೭೭, ೮೭. ಹೆಡಿಂಗದೊಳಗಿನ "ಕಲೆಕ್ಟರನು" ಈ ಶಬ್ದ, ಮೊದಲಿನ ಕಾಯದೆಯೊಳಗಿನದು, ತಪ್ಪಿ ಹಾಗೇ ಇದಲಾಗಿದೆ. ಆ ಸ್ಥಳದಲ್ಲಿ "ಜಿಲ್ಹಾ ಮ್ಯಾಜಿಸ್ಟ್ರೇಟ" ಹೀಗೆ ಶಬ್ದ ಪ್ರಯೋಗವಾಗಬೇಕಾಗಿತ್ತು. ಕಲಮು ಓದುವದರಿಂದ ಈ ಮಾತು ಒಡೆದು ಕಾಣುವದು.

"೮೭. ಅ. ಜಿಲ್ಲಾ ಕೋರ್ಟು ಅಥವಾ ಸೆಶನ್ಸ ಕೋರ್ಟು ದಾವೆಯನ್ನು ಅಥವಾ ಖಟ್ಲೆಯನ್ನು ವರ್ಗಾಯಿಸೋಣ— (೧) ಯಾವದೇ ದಾವೆಯನ್ನು ಡಿಸ್ಟ್ರಿಕ್ಟ ಕೋರ್ಟು ಮತ್ತು ಯಾವದೇ ಖಟ್ಲೆಯನ್ನು ಸೆಶನ್ಸ ಕೋರ್ಟು ಯಾವದೇ ಕಾಲಕ್ಕೆ, ಉಕ್ತಾನು ಹೊಂದಿದ ಪಕ್ಷಕಾರನ ಅರ್ಜಿಯ ಮೇಲಿಂದ ಅಥವಾ ಇತರ ರೀತಿಯಿಂದ, ಲೇಖೀ ಹುಕುಮಿನ ಮೂಲಕ, ಪ್ರಸಂಗವಿದ್ದಂತೆ, ಅದರ ಇನಸಾಫ ಮಾಡಲಿಕ್ಕೆ ಹುಕುಮತುಳ್ಳ ಯಾವದೊಂದು ದಿವಾಣೀ ಅಥವಾ ಫೌಜದಾರೀ ಕೋರ್ಟಿಗೆ ವರ್ಗಾಯಿಸಬಹುದು.

(೨) ಇಂಥ ದಾವೆಯು ಅಥವಾ ಖಟ್ಲೆಯು ವರ್ಗಾಯಿಸಲ್ಪಟ್ಟ ನಂತರ, ಯಾವ ಕೋರ್ಟಿಗೆ ಅದು ವರ್ಗಾಯಿಸಲ್ಪಟ್ಟದೆಯೋ ಆ ಕೋರ್ಟು ಇಂಥ ದಾವೆಯು ಅಥವಾ ಖಟ್ಲೆಯು ಸದರಿ ಕೋರ್ಟಿನ ಮುಂದೆ ದಾಖಲ ಮಾಡಲ್ಪಟ್ಟದ್ದರೆ ಹ್ಯಾಗೋ ಹಾಗೆಯೇ, ಇಂಥ ದಾವೆಯನ್ನು ಅಥವಾ ಖಟ್ಲೆಯನ್ನು ಹೊಸತಾಗಿ ಸುನಾವಣಿ ಮಾಡತಕ್ಕದ್ದು.

೮೭ ಬ ಡಿಸ್ಟ್ರಿಕ್ಟ ಕೋರ್ಟಿನ ಮತ್ತು ಸೆಶನ್ಸ ಕೋರ್ಟಿನ ಮುಂದಿರುವ ವ್ಯವಹರಣೆಗಳ ಕೆಲಸ ನಡಿಸುವ ರೀತಿಯು— ಈ ಆಕ್ಟಿನನ್ವಯದ ಯಾವತ್ತು ವ್ಯವಹರಣಗಳಿಗೆ ಸಂಬಂಧಪಡುವ ಈ ಆಕ್ಟಿನ ಠರಾವುಗಳಿಗೆ ಒಳಪಟ್ಟು ಡಿಸ್ಟ್ರಿಕ್ಟ ಕೋರ್ಟುಗಳಿಗೆ ಮತ್ತು ಸೆಶನ್ಸ ಕೋರ್ಟಿಗೆ, ತಮ್ಮ ಸಾಮಾನ್ಯ ಹುಕುಮತಿನಲ್ಲಿ ತಮ್ಮ ಕೈಕೆಳಗಿರುವ ಕೋರ್ಟುಗಳ ಹುಕುಮನಾಮೆಗಳ ಅಥವಾ ಹುಕುಮುಗಳ ಸಂಬಂಧದ ವ್ಯವಹರಣೆಗಳ ವಿಷಯದಲ್ಲಿ ಅನುಕ್ರಮವಾಗಿ, ಯಾವ ಅಧಿಕಾರಗಳಿರುವವೋ ಅವೇ ಅಧಿಕಾರಗಳಿರತಕ್ಕದ್ದು ಮತ್ತು ಅವುಗಳು ಅಥವಾ ಅವರು ಅದೇ ಕೆಲಸ ನಡಿಸುವ ರೀತಿಯನ್ನನುಸರಿಸತಕ್ಕದ್ದು."

ಕ ೬೮ ರ ಮೂಲಕ ನ್ಯಾಯಪಂಚಾಯತದ ಮುಂದೆ ವಕೀಲರಿಗೆ ಕೆಲಸ ನಡಿಸಲಿಕ್ಕೆ ಪ್ರತಿಬಂಧವುಂಟಾಗುತ್ತದ, ಆ ಪ್ರತಿಬಂಧವು ಡಿಸ್ಟ್ರಿಕ್ಟ ಕೋರ್ಟಿನಲ್ಲಿ ಇಲ್ಲವೆ ಮ್ಯಾಜಿಸ್ಟ್ರೇಟನ ಎದುರಿನಲ್ಲಿ ನಿಲ್ಲಲಾರದು, ಯಾಕಂದರೆ ಈ ಕೋರ್ಟುಗಳು ವಾಡಿಕೆಯ ರೀತಿ ಅನುಸರಿಸಲಿಕ್ಕೆ ಬೇಕು.

೮೮. ಹುಕುಮನಾಮೆಯ ಅಮಲಬಜಾವಣಿಯಲ್ಲಿ ದಸ್ತಗಿರು ಮಾಡುವದಕ್ಕೆ ಮತ್ತು ಕೈದಿನಲ್ಲಿಡುವದಕ್ಕೆ ಪ್ರತಿಬಂಧವು— ಈ ಆಕ್ಟಿನ ಠರಾವುಗಳನ್ವಯದ ಹುಕುಮನಾಮೆಯ ಅಮಲಬಜಾವಣಿಯಲ್ಲಿ ಯಾವನೊಬ್ಬ ಮನುಷ್ಯನನ್ನು ದಸ್ತಗಿರು ಮಾಡಬಾರದು ಅಥವಾ ಕೈದಿನಲ್ಲಿಡಬಾರದು.

---

## ಬಾಬು ೯

# ಕರ ಕೂಡ್ರಿಸೋಣ ಮತ್ತು ಹಕ್ಕುಗಳ ವಸೂಲಿ ಮಾಡೋಣ

ಪ್ರಕರಣದ ರೂಪರೇಷೆ—ಮೊದಲಿನ ೮ ಪ್ರಕರಣಗಳಲ್ಲಿ ಪಂಚಾಯತಿಯ ಸ್ಥಾಪನೆಯ ವಿಷಯದಲ್ಲಿ ಸಾಧಾರಣವಾಗಿದೆ. ಪಂಚಾಯತಿಯ ಯಂತ್ರಸಿದ್ಧವಾದ ಮೇಲೆ ಅದು ಯಾರ ಆಧಾರದ ಮೇಲೆ ನಡೆಯತಕ್ಕದ್ದೆಂಬ ವಿಚಾರವು ಪಾಡಿಕೆಯಾಗಿಯೇ ಮುಂದೆ ಬರುತ್ತದೆ. ಪಂಚಾಯತಿಯ ಆನಿ ( ಮಿಳಕತ್ತು ) ಯ ವಿಚಾರ ೪ನೇ ಬಾಬಿನಲ್ಲಿ ಬಂದದೆ ಈ ಆಸ್ತಿಯ ಮುಖ್ಯ ಭಾಗವೆಂದರೆ, ಪಂಚಾಯತಿ ಕೂಡಿಸಿದ ಕರದಿಂದ ಬರುವ ಉತ್ಪನ್ನವೇ ಸರಿ. ಈ ಕರಗಳನ್ನು (೧) ಯಾವ ಯಾವದರ ಮೇಲೆ ಕೂಡಿಸತಕ್ಕದ್ದು, ಯಾವ ಪ್ರಸಂಗದಲ್ಲಿ ಕೂಡಿಸ ತಕ್ಕದ್ದು. ಮತ್ತು (೨) ಕೂಡಿಸಿದ ಕರಗಳನ್ನು ಹೇಗೆ ವಸೂಲು ಮಾಡತಕ್ಕದ್ದು ಎಂಬ ವಿಷಯ ಗಳನ್ನು ಈ ಪ್ರಕರಣವು ಒಳಗೊಂಡಿದೆ. ಈ ವಿಷಯದಲ್ಲಿ ಸಹಜವಾಗಿ ಎರಡು ಭಾಗಗಳಾಗು ತ್ತವೆ. (೧) ಯಾವ ಕರಗಳನ್ನು ಕೂಡಿಸತಕ್ಕದ್ದು, ( ಕ. ೮೯–೯೦ ) ಮತ್ತು (೨) ಕೂಡಿಸಿದ ಕರಗಳನ್ನು ಹೇಗೆ ವಸೂಲ ಮಾಡಬೇಕು. ( ಕ. ೯೧ ಮತ್ತು ೯೨ ) ಈ ವಿಷಯದ ಎರಡೂ ಭಾಗಗಳ ಮೇಲೆ ಸರಕಾರದವರು ಮಹತ್ವದ ನಿಯಮಗಳನ್ನು ಮಾಡಿರುವರು ಅವುಗಳನ್ನು ಆಯಾ ಕಲಮುಗಳ ಕೆಳಗೆ ಕೊಡಲಾಗಿದೆ.

ಕ. ೮೯ ಪ್ರತಿಯೊಂದು ಪಂಚಾಯತವು ಕರಗಳನ್ನು ಮತ್ತು ಫೀ ಗಳನ್ನು ಕೂಡ್ರಿಸುವದು. (೧) ಪ್ರತಿಯೊಂದು ಪಂಚಾಯತವು, ಗ್ರಾಮದ ಹದ್ದುಗಳಲ್ಲಿರುವ ಒಕ್ಕಲತನದ ಆಕರಣೆಯನ್ನು ಕೊಡಲಿಕ್ಕೆ ಪಾತ್ರವಿದ್ದ ಅಥವಾ ಪಾತ್ರವಿರದಿದ್ದ ಮನೆಗಳ ಹೊಲದಲ್ಲಿರುವ ಇಮಾರತುಗಳನ್ನೊಳ ಗೊಂಡು ಮತ್ತು ಒಕ್ಕಲತನದ ಆಕರಣೆಯನ್ನು ಕೊಡಲಿಕ್ಕೆ ಪಾತ್ರವಿರದಿದ್ದ ಭೂಮಿಗಳ ಮಾಲಕರ ಅಥವಾ ಭೋಗವಟೆದಾರರ ಮೇಲೆ, ಠರಾಯಿಸ ಲ್ಪಡಬಹುದಾದಂಥ ರೀತಿಯಿಂದ ದರಗಳಂತೆ ಹಾಗೂ ಮಾಫಿಗಳಿಗೊಳಪಟ್ಟು ಕರವನ್ನು ಕೂಡ್ರಿಸತಕ್ಕದ್ದು.

(೧ ಅ) ಯಾವದೊಂದು ಮನೆಯ ಅಥವಾ ಭೂಮಿಯ ಮಾಲಕನು ಗ್ರಾಮವನ್ನು ಬಿಟ್ಟುಹೋಗಿದ್ದರೆ ಅಥವಾ ಅವನು ಇತರ ರೀತಿಯಿಂದ ಸಿಗದಿದ್ದರೆ, ಯಾವ ಮನುಷ್ಯನಿಗೆ ಇಂಥ ಮನೆಯು ಅಥವಾ ಭೂಮಿಯು ತಬದಿಲಿ ಮಾಡಿ ಕೊಡಲ್ಪಟ್ಟಿದೆಯೋ ಅಂಥ ಯಾವನೇ ಮನುಷ್ಯನು, ಇಂಥ ಮಾಲಕನ ಕಡೆಯಿಂದ (೧)ನೇ ಪೋಟ-ಕಲಮಿನನ್ವಯ ವಸೂಲು ಮಾಡ ಲ್ಪಟ್ಟ ಕರವನ್ನು ಕೊಡಲಿಕ್ಕೆ ಪಾತ್ರನಿರತಕ್ಕದ್ದು.

(೧ ಬ) (೧)ನೇ ಪೋಟ-ಕಲಮಿನಲ್ಲಿ ನಿರ್ದಿಷ್ಟ ಮಾಡಿದ ಕರವನ್ನು ಕೂಡ್ರಿಸುವ ಬಗ್ಗೆ ಮಾಡಲಾದ ಕಾನೂನುಗಳಲ್ಲಿ, ಇಂಥ ಕರವನ್ನು ನಗದು ಹಣದ ರೂಪದಿಂದ ಅಥವಾ ಕೆಲಸವನ್ನು ಅಥವಾ ಕೂಲಿಯನ್ನು ಮಾಡಿ ಕೊಡಬಹುದೆಂಬ ಬಗ್ಗೆ ಠರಾಯಿಸಬಹುದು.

ಹಿಂದಿನ ಆಕ್ಟಿನಲ್ಲಿದ್ದ ಈ ಕಲಮಿನಲ್ಲಿ ಎರಡು ಸುಧಾರಣೆಗಳನ್ನು ಮಾಡಲಾಗಿದೆ. ೧. ಗಾವಠಾಣೆಯಲ್ಲಿರುವ ಮನೆ ಮತ್ತು ಜಮೀನು ಇವುಗಳ ಕರ ಆವಶ್ಯಕ ಮಾಡಲಾಗಿದೆ. ಮತ್ತು ೨. ಈ ಕರವನ್ನು ಶ್ರಮದ ಮೂಲಕ ಮುಟ್ಟಿಸುವ ಅನುವು ಮಾಡಿಕೊಟ್ಟಿದೆ.

ಶ್ರಮಮಾಡಿ ಕರ ಕೊಡುವ ಸವಲತಿಯು ಈ ಕಾಯದೆಯ ವೈಶಿಷ್ಟ್ಯವಾಗಿದೆ.

ಸನ್ ೧೯೩೯ ರಲ್ಲಿ ಈ ಕಾಯದೆಯಲ್ಲಿ ಯಾವ ಸುಧಾರಣೆಗಳು ಆದವೋ, ಅವುಗಳಿಂದ ಶಾರೀರಿಕ ಶ್ರಮದ ರೂಪದಿಂದ ಕೂಡ ಕರ ಕೊಡುವ ಅನುವು (ಮೋಕಳೀಕ) ಜನತೆಗೆ ಕೊಡಲಾಗಿದೆ. ಈ ತತ್ವ ಮುಂಬೈ ಇಲಾಖೆಯಲ್ಲಿ ಇಂದು ಹೊಸದಾಗಿ ಕಂಡರೂ ಅದು ಹಿಂದುಸ್ತಾನದಲ್ಲಿ ಹೊಸದಾಗಿರುವದಿಲ್ಲ. ಮೈಸೂರು ಸಂಸ್ಥಾನದ ಯಾವ ಹಳ್ಳಿಗಳಲ್ಲಿ ಪಂಚಾಯಿತಿಗಳಿರುವವೋ, ಆ ಹಳ್ಳಿಯೊಳಗಿನ ಗ್ರಾಮವಾಸಿಗಳು ವಾರದಲ್ಲಿ ಒಂದುಸಾರೆ ಯಾದರೂ ಊರೊಳಗಿನ ಕೆಲಸ ಮಾಡಲಿಕ್ಕೆ ಬರಲಿಕ್ಕೆ ಬೇಕು, ಹೀಗೆ ರೂಢಿಯಿರುವದು. ಮತ್ತು ಯಾರು ಹೀಗೆ ಬರಲಿಕ್ಕೆ ತಪ್ಪುವರೋ, ಅವರ ಮೇಲೆ ಕರದ ರೂಪದಿಂದ ಅಷ್ಟು ಕೂಲಿಯ ರಕಮು ಹೇರುವದರಲ್ಲಿ ಬರುತ್ತದೆ.

**(೨) ಈ ಕೆಳಗಿನ ಯಾವತ್ತು ಅಥವಾ ಯಾವದಾದರೂ ಕರಗಳನ್ನು ಅಥವಾ ಫೀಗಳನ್ನು ಠರಾಯಿಸಲ್ಪಡಬಹುದಾದ ರೀತಿಯಿಂದ ಮತ್ತು ವರ ಗಳಂತೆ ಹಾಗೂ ಮಾಫಿಗಳಗೊಳಪಟ್ಟು ಕೂಡಿಸಲಿಕ್ಕೆ ಯಾವದೊಂದು ಪಂಚಾಯತಕ್ಕೆ ಅಧಿಕಾರವಿರತಕ್ಕದ್ದು, ಅಂದರೆ:—**

(೧) [ ಈ ಪೋಟ-ಕಲಮು ತೆಗೆದುಹಾಕಿದೆ. ]

(೨) ಜಾತ್ರೆಗಳ, ಹಬ್ಬಗಳ ಮತ್ತು ಮನೋರಂಜನೆಗಳ ಮೇಲಿನ ಕರವು.

(೩) ಜಾತ್ರೆಗಳ ಮತ್ತು ಹಬ್ಬಗಳ ಮೇಲಿನ ಕರವು ;

(೪) ಸಾಮಾನುಗಳ ಮಾರಾಟಗಳ ಮೇಲಿನ ಕರವು ;

(೫) ಆಕ್ಟ್ರಾಯ ;

(೬) ವಿವಾಹ, ದತ್ತಕ ಮತ್ತು ಸುಖಭೋಜನಗಳ ಮೇಲಿನ ಕರವು ;

(೬ ಅ) ಅಂಗಡಿಗಳ ಮತ್ತು ಖಾನಾವಳಿಗಳ ಮೇಲಿನ ಕರವು.

(೬ ಬ) ಒಕ್ಕಲುತನದ ಅಥವಾ ಮನೆತನದ ಉದ್ದೇಶದ ಸಲುವಾಗಿರದ ಯಾವದೇ ವ್ಯಾಪಾರದ ಅಥವಾ ಧಂದೆಯ ಸಲುವಾಗಿ ಉಗಿಯಿಂದ, ಎಣ್ಣೆಯಿಂದ, ವಿದ್ಯುಚ್ಛಕ್ತಿಯಿಂದ ಅಥವಾ ಶಾರೀರಿಕ ಶ್ರಮದಿಂದ ಯಾವ ನಿವೇಶನಗಳಲ್ಲಿ ಯಂತ್ರಸಾಮಗ್ರಿಯು ನಡಿಸಲ್ಪಡುತ್ತದೆಯೋ ಅಂಥ ನಿವೇಶನಗಳ ಮೇಲಿನ ಕರವು.

(೬ ಕ) ಪೇಟೆಗಳ ಹಾಗೂ ಸಂತೆಗಳ ಮೇಲಿನ ಫೀಯು.

(೬ ಡ) ಚಕ್ಕಡಿ ನಿಲ್ಲುವ ಸ್ಥಳಗಳ ಮೇಲಿನ ಫೀಯು

(೬ ಇ) ಮನೆತನದ ಉಪಯೋಗದ ಸಲುವಾಗಿ ಅಲ್ಲದೆ ಇತರ ಉದ್ದೇಶಗಳ ಸಲುವಾಗಿ ತನ್ನಲ್ಲಿ ನಿವಿಷ್ಟವಾಗಿರುವ ಬಾವಿಗಳಿಂದ ಹಾಗೂ ಕೆರೆಗಳಿಂದ ನೀರನ್ನು ಪೂರೈಸುವ ಬಗ್ಗೆ ಫೀಯು

(೭) ಸನ್ ೧೯೩೫ನೇ ಇಸವಿಯ ಗವರ್ನಮೆಂಟ ಆಫ್ ಇಂಡಿಯಾ ಆಕ್ಟಿನನ್ವಯ ಕೊಟ್ಟ ಅಧಿಕಾರದಿಂದ ಪ್ರಾಂತಿಕ ಕಾಯದೆ ಮಂಡಳವು ಪ್ರಾಂತದಲ್ಲಿ ಹೊರಿಸುವ, ಮತ್ತು ಜಿಲ್ಹಾ ಲೋಕಲ ಬೋರ್ಡಿನಿಂದ ಪಸಂದು ಮಾಡಲ್ಪಟ್ಟು ಪ್ರಾಂತಿಕ ಸರಕಾರದವರಿಂದ ಮಂಜೂರು ಮಾಡಲ್ಪಟ್ಟ ( ಸನ್ ೧೯೩೫ನೇ ಇಸವಿಯ ಮುಂಬಯಿಯ ಮೋಟಾರ ವಾಹನಗಳ ಕರದ ವಿಷಯದ ಆಕ್ಟಿನ ೧೪ನೇ ಕಲಮಿನಿಂದ ಠರಾಯಿಸಿದ್ದನ್ನು ಹೊರ್ತುಪಡಿಸಿ, ಮೋಟಾರ ವಾಹನಗಳ ಅಥವಾ ಟ್ರೇಲರಗಳ ಮೇಲಿನ ಜಕಾತಿಯಲ್ಲದ ಇತರ ಯಾವದೇ ಕರವು.

(೨ ಅ) (೨)ನೆಯ ಪೋಟ-ಕಲಮಿನಲ್ಲಿ ಯಾವದೇ ಮಜಕೂರು ಇದ್ದಾಗ್ಯೂ ಪ್ರತಿಯೊಂದು ಪಂಚಾಯತವು ಸದರಿ ಪಂಚಾಯತದ ಸಂಬಂಧದಿಂದ ಠರಾಯಿಸಲ್ಪಡಬಹುದಾದಂತೆ (೨)ನೇ ಪೋಟ-ಕಲಮಿನಲ್ಲಿ ನಮೂದಿಸಲಾದ ಕರಗಳ ಅಥವಾ ಫೀಗಳ ಪೈಕಿ ಯಾವದೇ ಒಂದು ಕರವನ್ನು ಅಥವಾ ಫೀಯನ್ನು ಕೂಡ್ರಿಸತಕ್ಕದ್ದು.

(೩) ಇಂಥ ಯಾವದೇ ಕರದ ಅಥವಾ ಫೀಯ ಆಕಾರಣಿಯಿಂದ ಕೂಡ್ರಿಸೋಣದರಿಂದ ಅಥವಾ ಹೊರಿಸೋಣದರಿಂದ ಲುಕ್ಸಾನ ಹೊಂದಿದ ಯಾವನೇ ಮನುಷ್ಯನು ಜಿಲ್ಹಾ ಲೋಕಲ ಬೋರ್ಡಿನ ಸ್ಥಾಯೀ ಸಮಿತಿ ಕಡೆಗೆ ಅಪೀಲ ಮಾಡಬಹುದು. ಆ ಸಂಗತಿಯಲ್ಲಿ ಜಿಲ್ಹಾ ಲೋಕಲ ಬೋರ್ಡಿನ ಸ್ಥಾಯೀ ಸಮಿತಿ ಕೊಟ್ಟ ನಿರ್ಣಯವು ಕೊನೆಯದಾಗುವದು.

(೪) ಪ್ರಾಂತಿಕ ಸರಕಾರದವರು ಯಾವದೇ ಕರವನ್ನು ಅಥವಾ ಫೀಯನ್ನು ಕೂಡ್ರಿಸುವದನ್ನು ಅಥವಾ ಹೊರಿಸುವದನ್ನು ತಹಕೂಬ ಇಡಬಹುದು, ಮತ್ತು ಯಾವದೇ ಕಾಲಕ್ಕೆ ಇಂಥ ತಹಕೂಬಿಯನ್ನು ತೆಗೆದು ಹಾಕಬಹುದು.

(೫) ಮಧ್ಯವರ್ತಿ ಕಾಯದೆಮಂಡಳದಿಂದ ಇದರ ವಿರುದ್ಧ ತಜವೀಜು ಮಾಡಲ್ಪಡುವ ವರೆಗೆ ಸನ್ ೧೯೩೫ನೇ ಇಸವಿಯ ಗವರ್ನಮೆಂಟ ಆಫ್ ಇಂಡಿಯಾ ಆಕ್ಟಿನ ೩ನೇ ಭಾಗವು ಪ್ರಾರಂಭವಾಗುವದಕ್ಕಿಂತ ಲಗತು ಮುಂಚೆ, ಯಾವ ಪಂಚಾಯತವು, ಆ ಕಾಲಕ್ಕೆ ಅಮಲಿನಲ್ಲಿದ್ದ

**ಈ ಕಲಮಿನನ್ವಯ, (೨)ನೇ ಪೋಟ-ಕಲಮಿನಲ್ಲಿ ಹೇಳಿದ ಕರಗಳ ಹೊರ್ತು ಇತರ ಯಾವದೇ ಕರವನ್ನು ಕಾಯದೇಶೀರವಾಗಿ ಹೊರಿಸುತ್ತಿತ್ತೋ ಆ ಪಂಚಾಯತವು ಆ ಕರವನ್ನು ಹೊರಿಸುವದನ್ನು ಚಾಲೂ ಇಡಬಹುದು.**

ಈ ಕಲಮಿನಲ್ಲಿ ಎರಡು ಬಗೆಯ ಕರಗಳನ್ನು ಕೊಟ್ಟಿರುವರು. ಒಂದನೇ ಬಗೆ ಆವಶ್ಯಕಕರದ್ದು ; ಎರಡನೆಯದು ಐಚ್ಛಿಕಕರದ್ದು.

ಮೊದಲನೇ ಬಗೆಯನ್ನು ಪೋಟ ಕಲಮು (೧) ರಲ್ಲಿ ಕೊಟ್ಟಿದ್ದು ೨ನೇ ದನ್ನು ಪೋಟ-ಕಲಮು (೨) ರಲ್ಲಿ ಕೊಟ್ಟಿದೆ.

ಮೊದಲನೇ ಪ್ರಕಾರವನ್ನು ಆವಶ್ಯಕ ಮಾಡುವ ಕಾರಣವೇನಂದರೆ, ಎಷ್ಟೋ ಪಂಚಾಯತಿಗಳು, ಮೊದಲು, ಈ ಬಗೆಯ ಆವಶ್ಯಕವಾದ ಯಾವದೇ ಕರವನ್ನು ಕೂಡಿಸದೆ ಇದ್ದುದರಿಂದ ಪ್ರಾಪ್ತಿಯ ಅಭಾವದಿಂದ, ಅವರಿಂದ, ಯಾವದೇ ಆರೋಗ್ಯ ರಕ್ಷಣೆಯ ಕಾರ್ಯ ಆಗಲು ಅಶಕ್ಯವಾಯಿತು. ಹೀಗೆ ಮತ್ತೆ ಆಗಬಾರದೆಂದೇ ಈ ಸುಧಾರಿಸಿದ ಕಾಯದೆಯಿಂದ ಈ ಕರ ( ಊರೊಳಗಿನ ಮನೆ ಮತ್ತು ಜಮೀನಿನ ಮೇಲಿನ ) ಆವಶ್ಯಕ ಮಾಡಲಾಗಿದೆ.

೨ನೆಯ ( ಐಚ್ಛಿಕ ) ಪ್ರಕಾರದಲ್ಲಿ ಕರದ ಏಳು ವಿಷಯಗಳ ಸಮಾವೇಶವಾಗುತ್ತದೆ. ಅದನ್ನೆಲ್ಲ ಪೋಟ-ಕಲಮು (೨)ರಲ್ಲಿ ಕೊಡಲಾಗಿದೆ.

ಉ (೨) (ಊ) ಆಕ್ಟ್ರಾಯ-ಸುಂಕ-ಜಕಾತಕಟ್ಟೆಯ ಮೇಲಿನ ಕರ.

'' '' (ಕ) ಇತರ-ಇದರಲ್ಲಿ ಆರೋಗ್ಯ ರಕ್ಷಣೆಯ ಬಗ್ಗೆ ( ಸನೇಟರಿ ಸೆಸ್ ) ಕರದ ಸಮಾವೇಶವಾಗುತ್ತದೆ.

ಈ ಯಾವತ್ತು ೭ ಪ್ರಕಾರಗಳ ( ೧ ನೇದು ಆವಶ್ಯಕ ಹಾಗು ೨ನೆಯ ೭ ಐಚ್ಛಿಕ ಕೂಡಿ ) ಕರಗಳ ವಿಷಯದಲ್ಲಿ, ಸರಕಾರದವರು ಈ ಕಾಯದೆಯಂತೆ, ಪ್ರತಿಯೊಂದು ಪ್ರಕಾರದ ವಿಷಯದಲ್ಲಿ ಸ್ವತಂತ್ರ ನಿಯಮಗಳನ್ನು ಮಾಡಿರುವರು. ಈ ನಿಯಮಗಳಲ್ಲಿ ಎರಡು ಭಾಗಗಳುಂಟು.

೧ನೇ ಭಾಗ, ಕರ ಕೂಡಿಸುವ ರೀತಿಯ ವಿಷಯದಲ್ಲಿದೆ ; ಮತ್ತು ೨ ನೇ ಭಾಗ ( ಕೂಡಿಸಲ್ಪಡತಕ್ಕ ) ಕರದ ದರದ ವಿಷಯವಾದದ್ದು, ( ಕಮಾಲ ದರದ ಬಗ್ಗೆ— ಪ್ರಮಾಣ-- ಮರ್ಯಾದೆ ಬಗ್ಗೆ ) ಇದೆ. ( ಕರಯೋಜನಾ ಪರಿಶಿಷ್ಟ ನೋಡಿರಿ )

**೬೦ ಪಂಚಾಯತದ ಕರವನ್ನು ತಿಳಿಸಲಿಕ್ಕೆ ಜಿಲ್ಲಾ ಲೋಕಲ್ ಬೋರ್ಡಿಗೆ ಇರುವ ಅಧಿಕಾರ —** (೧) ಜಿಲ್ಹಾ ಲೋಕಲ್‌ಬೋರ್ಡಿನ ಅಭಿಪ್ರಾಯದ ಪ್ರಕಾರ ಯಾವದೊಂದು ಪಂಚಾಯತದ ನಿಯಮಿತ ಉತ್ಪನ್ನವು, ೨೬ನೇ ಮತ್ತು ೨೮ನೇ ಕಲಮುಗಳಲ್ಲಿ ಹೇಳಿದ ಕರ್ತವ್ಯಗಳನ್ನು ಯೋಗ್ಯವಾಗಿ ಮಾಡುವದಕ್ಕೆ ಅವಶ್ಯವಿರುವದಕ್ಕಿಂತ ಕಡಮೆ ಇದ್ದರೆ, ಜಿಲ್ಹಾ ಲೋಕಲಬೋರ್ಡು, ಪಂಚಾಯತಕ್ಕೆ ತನ್ನ ಉತ್ಪನ್ನವನ್ನು ಜಿಲ್ಹಾ ಲೋಕಲಬೋರ್ಡಿಗೆ ಅವಶ್ಯ ತೋರಿಸುವಷ್ಟು ಮರ್ಯಾದೆಯ ವರಗೆ ಬೆಳಿಸುವದಕ್ಕೆ ಆರು ತಿಂಗಳೊಳಗಾಗಿ ತಜವೀಜು ಮಾಡಬೇಕೆಂದು ಫರ್ಮಾಯಿಸಬಹುದು ಪಂಚಾಯತವು ಹೇಳಲ್ಪಟ್ಟ ಮರ್ಯಾದೆಯ

ವರೆಗೆ ತನ್ನ ಉತ್ಪನ್ನವನ್ನು ಬೆಳಿಸಲಿಕ್ಕೆ ಯೋಗ್ಯ ತಜವೀಜು ಮಾಡುವ ದಕ್ಕೆ ತಪ್ಪಿದರೆ, ಜಿಲ್ಹಾ ಲೋಕಲ್ ಬೋರ್ಡು, ಅದಕ್ಕೆ ೮ನೇ ಕಲಮಿನಲ್ಲಿ ಹೇಳಿದ ಯಾವನೇ ಕರಗಳನ್ನು ಅಥವಾ ಫೀಗಳನ್ನು ವಸೂಲು ಮಾಡ ಲಿಕ್ಕೆ ಅಥವಾ ಬೆಳಿಸಲಿಕ್ಕೆ ಹೇಳಬಹುದು

ಆದರೆ ಗೊತ್ತುಪಡಿಸುವದೇನಂದರೆ, ಜಿಲ್ಹಾ ಲೋಕಲ್ ಬೋರ್ಡು, ಯಾವದೇ ಕರವನ್ನು ಅಥವಾ ಫೀಯನ್ನು ಈ ಬಗ್ಗೆ ಗೊತ್ತುಪಡಿಸಲ್ಪಡ ಬೇಕಾದ ಪರಾಕಾಷ್ಠದರಕ್ಕಿಂತ ಹೆಚ್ಚಾಗಿ ವಸೂಲು ಮಾಡಲಿಕ್ಕೆ ಅಥವಾ ಬೆಳಿಸಲಿಕ್ಕೆ ಪಂಚಾಯುತಕ್ಕೆ ಒತ್ತಾಯಪಡಿಸಬಾರದು.

(೨) ಯಾವದೇ ಪಂಚಾಯುತವು (೧)ನೇ ಪೋಟ-ಕಲಮಿನನ್ವಯ ಮಾಡಲ್ಪಟ್ಟ ಹುಕುಮಿನ ಮೇಲೆ ಕಮಿಶನರನ ಕಡೆಗೆ ಅಪೀಲ ಮಾಡಬಹುದು ಮತ್ತು ಕಮಿಶನರನು ತಾನು ಆ ಅಪೀಲಿನ ನಿರ್ಣಯವನ್ನು ಮಾಡುವ ವರೆಗೆ, ಇಂಥ ಹುಕುಮಿನ ಅಮಲಬಜಾವಣಿಯನ್ನು ನಿಲ್ಲಿಸಬಹುದು

೯೧. ಕರಗಳನ್ನು ಮತ್ತು ಕೊಡತಕ್ಕ ಇತರ ಹಣವನ್ನು ವಸೂಲ ಮಾಡುವದು – (೧) ಯಾವದೇ ಕರವು ಅಥವಾ ಫೀಯು ಕೊಡತಕ್ಕದ್ದಾ ದಾಗ್ಗೆ ಪಂಚಾಯುತವು, ಶಕ್ಯವಿದ್ದಷ್ಟು ತಡವಿಲ್ಲದೆ, ಅದನ್ನು ಕೊಡಲಿಕ್ಕೆ ಪಾತ್ರನಿರುವ ಮನುಷ್ಯನಿಗೆ, ಅವನಿಂದ ಬರತಕ್ಕ ಹಣದ ಬಗ್ಗೆ ಒಂದು ಬಿಲ್ಲು ಕೊಡಿಸಬೇಕು, ಮತ್ತು ಯಾವ ತಾರೀಖಿನ ದಿವಸ ಅಥವಾ ಅದಕ್ಕೂ ಮುಂಚೆ ಆ ರಕಮನ್ನು ಕೊಡಬೇಕೋ ಆ ತಾರೀಖನ್ನು ನಮೂದಿಸಬೇಕು

(೨) ಯಾವನೇ ಮನುಷ್ಯನು, ಈ ಆಕ್ಟಿನನ್ವಯ ಅಥವಾ ಕಾನೂನು ಗಳನನ್ವಯ ಅಥವಾ ಪೋಟ-ಕಾಯದೆಗಳನನ್ವಯ ತನ್ನಿಂದ ಪಂಚಾಯು ತಕ್ಕೆ ಕೊಡಲ್ಪಡಬೇಕಾದ ಯಾವದೇ ಕರವನ್ನು ಅಥವಾ ಫೀಯನ್ನು ಅಥವಾ ಇತರ ರಕಮನ್ನು ಕೊಡುವ ಬಗ್ಗೆ ಗೊತ್ತುಪಡಿಸಲ್ಪಟ್ಟ ತಾರೀಖಿನ ದಿವಸ ಅಥವಾ ಅದರೊಳಿಗಾಗಿ ಕೊಡಲಿಕ್ಕೆ ತಪ್ಪಿದರೆ, ಆ ಪಂಚಾಯುತವು ಆ ತಪ್ಪು ಮಾಡಿದ ಮನುಷ್ಯನ ಮೇಲೆ ಒಂದು ಗೊತ್ತುಪಡಿಸಿದ ಮಾಗಣಿಯ ಲೇಖ ವನ್ನು ಬಜಾಯಿಸುವಂತೆ ಮಾಡಬೇಕು.

(೨ ಅ) ಪಂಚಾಯುತದ ಯಾವನೊಬ್ಬ ಅಮಲದಾರನು ಅಥವಾ ನೌಕರನು, ಅಥವಾ ಸದರಿ ಪಂಚಾಯುತದಿಂದ ಈ ಬಾಬತಿನಲ್ಲಿ ಅಧಿಕಾರ ಕೊಡಲ್ಪಟ್ಟ ಇತರ ಮನುಷ್ಯನು (೧)ನೆಯ ಪೋಟ-ಕಲಮಿನನ್ವಯ ಪ್ರತಿ ಯೊಂದು ಬಿಲ್ಲನ್ನು ಸಾದರ ಮಾಡುವ ಕಾರ್ಯವನ್ನು ಮತ್ತು ೨ನೇ ಪೋಟ ಕಲಮಿನನ್ವಯ ಪ್ರತಿಯೊಂದು ಮಾಗಣಿಯ ಲೇಖವನ್ನು ಬಜಾಯಿಸುವ ಕೆಲಸವನ್ನು

(ಅ) ಯಾವ ಮನುಷ್ಯನ ವಿಳಾಸವನ್ನು ಸದರಿ ಬಿಲ್ಲಿನಲ್ಲಿ ಅಥವಾ ಲೇಖದಲ್ಲಿ ಬರೆದಿರುತ್ತದೆಯೋ ಅಂಥ ಮನುಷ್ಯನಿಗೆ ಸದರಿ ಬಿಲ್ಲನ್ನು ಅಥವಾ ಲೇಖವನ್ನು ಕೊಟ್ಟು ಅಥವಾ ಸಾದಗವಾಡಿ ಅಥವಾ

(ಬ) ಇಂಥ ಮನುಷ್ಯನು ಸಿಗದಿದ್ದರೆ, ಅವನ ಕೊನೆಯ ಗೊತ್ತಿದ್ದ ವಾಸಸ್ಥಳದಲ್ಲಿ ಅದು ಸದರಿ ಗ್ರಾಮದ ಹದ್ದುಗಳೊಳಗೆ ಇದ್ದರೆ, ಸದರಿ ಬಿಲ್ಲನ್ನು ಅಥವಾ ಲೇಖವನ್ನು ಕೊಟ್ಟು ಅಥವಾ ಅವನ ಕುಟುಂಬದ ಯಾವನೊಬ್ಬ ಪ್ರೌಢ ಮೆಂಬರನಿಗೆ ಅಥವಾ ನೌಕರನಿಗೆ ಸದರಿ ಬಿಲ್ಲನ್ನು ಅಥವಾ ಲೇಖವನ್ನು ಕೊಟ್ಟು ಅಥವಾ ಸಾದರವಾಡಿ, ಅಥವಾ

(ಕ) ಇಂಥ ಮನುಷ್ಯನು ಸದರಿ ಗ್ರಾಮದ ಹದ್ದುಗಳೊಳಗೆ ವಾಸ ಮಾಡದಿದ್ದರೆ, ಮತ್ತು ಅವನ ಬೇರೆ ಕಡೆಯ ವಿಳಾಸವು ಸರಪಂಚನಿಗೆ ಅಥವಾ ಸದರಿ ಬಿಲ್ಲನ್ನು ಅಥವಾ ಲೇಖವನ್ನು ಕೊಡುವ ಬಗ್ಗೆ ಫರ್ಮಾಯಿಸುವಂಥ ಇತರ ಮನುಷ್ಯನಿಗೆ ಗೊತ್ತಿದ್ದರೆ, ಸದರಿ ಬಿಲ್ಲನ್ನು ಅಥವಾ ಲೇಖವನ್ನು ಇಂಥ ಮನುಷ್ಯನಿಗೆ, ಸದರಿ ವಿಳಾಸವುಳ್ಳ ಒಂದು ಪಾಕೀಟಿನಲ್ಲಿ ಹಾಕಿ ರಜಿಸ್ಟರ್ಡ ಪೋಸ್ಟಿನ ಮೂಲಕ ಕಳುಹಿಸಿಕೊಟ್ಟು ಅಥವಾ

(ಡ) ಮೇಲೆ ಹೇಳಿದ ಉಪಾಯಗಳ ಪೈಕಿ ಯಾವದೂ ಸಾಧ್ಯವಿರದಿದ್ದರೆ, ಯಾವ ಇಮಾರತಿಗೆ ಅಥವಾ ಭೂಮಿಗೆ ಸದರಿ ಬಿಲ್ಲು ಅಥವಾ ಲೇಖವು ಸಂಬಂಧಿಸಿರುತ್ತದೋ ಅಂಥ ಇಮಾರತಿನ ಅಥವಾ ಭೂಮಿಯ ಯಾವದೊಂದು ಎದ್ದು ಕಾಣಿಸುವ ಭಾಗದ ಮೇಲೆ ಸದರಿ ಬಿಲ್ಲನ್ನು ಅಥವಾ ಲೇಖವನ್ನು ಅಂಟಿಸುವಂತೆ ಮಾಡಿ. ಬಜಾಯಿಸತಕ್ಕದ್ದು

(೩) ಯಾತರ ಬಗ್ಗೆ ಮಾಗಣೆಯ ಲೇಖವು ಬಜಾಯಿಸಲ್ಪಟ್ಟಿರುವದೋ ಅಂಥ ರಕಮು, ಬಜಾವಣೆಯ ತಾರೀಖಿನಿಂದ ೩೦ ದಿವಸಗಳೊಳಗಾಗಿ ಕೊಡಲ್ಪಡದಿದ್ದರೆ, ಆ ಪಂಚಾಯತವು ಇಂಥ ರಕಮನ್ನು, ಆ ತಪ್ಪು ಮಾಡಿದವನ ಜಂಗಮ ಆಸ್ತಿಯನ್ನು ಜಪ್ತು ಮಾಡಿ ಮತ್ತು ಮಾರಿ ಗೊತ್ತುಪಡಿಸಿದ ರೀತಿಯಿಂದ ವಸೂಲ ಮಾಡಬಹುದು

(೪) ಠರಾಯಿಸಲ್ಪಡಬಹುದಾದ ದರಗಳಂತೆ ಈ ಕೆಳಗಿನವುಗಳ ಬಗ್ಗೆ ಫೀಗಳನ್ನು ಆಕಾರಿಸತಕ್ಕದ್ದು, ಅಂದರೆ.—

(ಅ) (೩)ನೇ ಪೋಟ-ಕಲಮಿನನ್ವಯ ಮಾಡಲ್ಪಟ್ಟ ಪ್ರತಿಯೊಂದು ಜಪ್ತಿಯ ಬಗ್ಗೆ,

(ಬ) (೨)ನೇ ಪೋಟ-ಕಲಮಿನನ್ವಯ ಬಜಾಯಿಸಲ್ಪಟ್ಟ ಪ್ರತಿಯೊಂದು ಮಾಗಣೆಯ ಲೇಖದ ಬಗ್ಗೆ, ಮತ್ತು

(ಕ) (೩)ನೇ ಪೋಟ-ಕಲಮಿನನ್ವಯ ಹಿಡಿಯಲ್ಪಟ್ಟ ಯಾವನೇ ಜನಾವರಗಳ ಹೊಟ್ಟೆಯ ಖರ್ಚಿನ ಬಗ್ಗೆ

(೪ ಅ) ಮೇಲಿನ ಪೋಟ-ಕಲಮುಗಳಲ್ಲಿ ಏನಿದ್ದಾಗ್ಯೂ, ಕಾನೂನುಗಳ ಪ್ರಕಾರ ಮಾಗಣಿ ಮಾಡಿದ ಮೇಲೆ ಕೊಡತಕ್ಕದ್ದಾಗುವ ಯಾವದೇ ಕರವು ಅಥವಾ ಫೀಯು, ಠರಾಯಿಸಲ್ಪಡಬಹುದಾದ ರೀತಿಯಿಂದ ವಸೂಲ ಮಾಡಲ್ಪಡತಕ್ಕದ್ದು

(೫) ಪಂಚಾಯತವು, ಮೇಲೆ ಹೇಳಿದಂತೆ ತನಗೆ ಬರತಕ್ಕದ್ದಾದ ಯಾವದೇ ಕರವನ್ನು ಅಥವಾ ಫೀಯನ್ನು ಅಥವಾ ಇತರ ರಕಮನ್ನು ವಸೂಲ ಮಾಡಲಿಕ್ಕೆ ಅಸವರ್ಥವಾದರೆ, ಅದು ಬರಬೇಕಾದ ಬಾಕಿ ಹಣದ ಬಗ್ಗೆ ಒಂದು ಪತ್ರಕವನ್ನು ಮಾಮಲೇದಾರನಿಗೆ ಅಥವಾ ಮಹಾಲಕರಿಗೆ ಕಳುಹಿಸಬಹುದು, ಮತ್ತು ಅದನ್ನು ಗ್ರಾಮದ ಅಮಲದಾರರ ಮುಖಾಂತರ ವಸೂಲ ಮಾಡುವ ಬಗ್ಗೆ ವಿನಂತಿ ಮಾಡಬಹುದು, ಮತ್ತು (೧)ನೇ ಪೋಟ-ಕಲಮಿನನ್ವಯ ಕೊಡಲ್ಪಟ್ಟ ಬಿಲ್ಲಿನಲ್ಲಿ ಹೇಳಿಗ ತಾರೀಖಿನಿಂದ ಒಂದು ವರ್ಷದೊಳಗಾಗಿ ಪಂಚಾಯತವು ಮಾಮಲೇದಾರನಿಗೆ ಅಥವಾ ಮಹಾಲಕರಿಗೆ ಇಂಥ ಬಾಕಿಯ ಪತ್ರಕವನ್ನು ಕೊಟ್ಟರೆ, ಇಂಥ ಬಾಕಿಯ ಪತ್ರಕವು ಮುಟ್ಟಿದ ಮೇಲೆ ಮಾಮಲೇದಾರನು ಅಥವಾ ಮಹಾಲಕರಿಯು ಅದನ್ನು ಭೂಮಿಯ ಮಹಸೂಲಿನ ಬಾಕಿಯಂತೆ ಗ್ರಾಮದ ಅಮಲದಾರರ ಮುಖಾಂತರ ವಸೂಲ ಮಾಡಲಿಕ್ಕೆ ಕೆಲಸ ನಡಿಸತಕ್ಕದ್ದು. ಇಂಥ ರಕಮುಗಳ ವಸೂಲಿಯ ಬಗ್ಗೆ ಪಂಚಾಯತವು, ಗೊತ್ತುಪಡಿಸಲ್ಪಡಬಹುದಾದ ರೀತಿಯಿಂದ ಗ್ರಾಮದ ಅಮಲದಾರರಿಗೆ ಪ್ರತಿಫಲವನ್ನು ಕೊಡಬೇಕು

(೬) ಪಂಚಾಯತವು ತನಗೆ ಬರತಕ್ಕದ್ದಾದ ಯಾವದೇ ಕರವನ್ನು ಫೀಯನ್ನು, ದಂಡವನ್ನು ಅಥವಾ ಇತರ ರಕಮನ್ನು ವಸೂಲ ಮಾಡಲಿಕ್ಕೆ ತಪ್ಪಿದರೆ, ಅಥವಾ ೮೪ನೇ ಕಲಮಿನ (೨)ನೇ ಮತ್ತು (೩)ನೇ ಪೋಟ-ಕಲಮುಗಳನ್ವಯ ಅಥವಾ ಈ ಕಲಮಿನ (೨)ನೇ ಮತ್ತು (೩)ನೇ ಪೋಟ-ಕಲಮುಗಳನ್ವಯ ಕೆಲಸ ನಡಿಸಲಿಕ್ಕೆ ತಾತ್ಸಾರ ಮಾಡಿದರೆ, ಜಿಲ್ಹಾ ಲೋಕಲ್ ಬೋರ್ಡು, ಅದನ್ನು ಭೂಮಿಯ ಮಹಸೂಲಿನ ಬಾಕಿಯಂತೆ ವಸೂಲ ಮಾಡುವಬಗ್ಗೆ ಕಲೆಕ್ಟರನಿಗೆ ಅರ್ಜಿ ಮಾಡಬಹುದು.

ಆದರೆ ಗೊತ್ತುಪಡಿಸುವದೇನಂದರೆ, ಪ್ರಸಂಗದ ಪ್ರಕಾರ ಆ ರಕಮು ೮೪ನೇ ಕಲಮಿನ (೩)ನೇ ಪೋಟ-ಕಲಮಿನನ್ವಯ ದಾಖಲೆ ಕೊಡಲಿಕ್ಕೆ ಯೋಗ್ಯವಾದ ತಾರೀಖಿನಿಂದ ಅಥವಾ ಈ ಕಲಮಿನ (೧)ನೇ ಪೋಟ-ಕಲಮಿನನ್ವಯ ದಾಖಲೆ ಕೊಡಲಿಕ್ಕೆ ಯೋಗ್ಯವಾದ ತಾರೀಖಿಂದ ಅಥವಾ ಈ

ಕಲಮಿನ (೧)ನೇ ಪೋಟ-ಕಲಮಿನನ್ವಯ ಕೊಡಲ್ಪಟ್ಟ ಬಿಲ್ಲಿನಲ್ಲಿ ಹೇಳಿದ ತಾರೀಖಿನಿಂದ ಎರಡು ವರ್ಷಗಳು ಮುಗಿದ ನಂತರ, ಇಂಥ ಆರ್ಜಿಯು ಕಲೆಕ್ಟರನ ಕಡೆಗೆ ಮಾಡಲ್ಪಡಬಾರದು.

ಜಿಲ್ಲಾ ಲೋಕಲ್‌ಬೋರ್ಡಿನ ಕಡೆಯಿಂದ ಇಂಥ ಅರ್ಜಿಯು ಮುಟ್ಟಿದ ಬಳಿಕ, ಕಲೆಕ್ಟರನು ತನಗೆ ಯೋಗ್ಯ ಕಂಡ ಚೌಕಶಿಯನ್ನು ಮಾಡಿದ ಬಳಿಕ, ಆ ರಕಮನ್ನು ಭೂಮಿಯ ಮಹಸೂಲಿನ ಬಾಕಿಯಂತೆ ೯೨ನೇ ಕಲಮಿನನ್ವಯ ಇಂಥ ರಕಮು ಮುಣಗುಗಂಟೆಂದು ಬರೆಯಲ್ಪಡ ಬೇಕೆಂದು ಫರ್ಮಾಯಿಸಿದ ಹೊರ್ತು, ವಸೂಲ ಮಾಡಲಿಕ್ಕೆ ಕೆಲಸ ನಡಿಸತಕ್ಕದ್ದು

೯೨. ವಸೂಲ ಆಗದಂಥ ರಕಮುಗಳನ್ನು ಮುಳುಗುಗಂಟೆಂದು ಬರೆಯಬೇಕೆಂದು ಹುಕುಮು ಮಾಡಲಿಕ್ಕೆ ಕಲೆಕ್ಟರನ ಅಧಿಕಾರ— ಕಲೆಕ್ಟರನ ಅಭಿಪ್ರಾಯದ ಪ್ರಕಾರ –

(ಅ) ಪಂಚಾಯತದಿಂದ ದಾಖಲೆ ಕೊಡಲ್ಪಟ್ಟ ಮತ್ತು ತನ್ನಿಂದ ೮೧, ೮೨ ಮತ್ತು ೮೪ನೇ ಕಲಮುಗಳನ್ವಯ ಮತ್ತು ೯೧ ನೇ ಕಲಮಿನ (೬)ನೇ ಪೋಟ-ಕಲಮಿನನ್ವಯ ವಸೂಲ ಮಾಡ ಲ್ಪಡಬೇಕಾದ ಯಾವದೇ ರಕಮು

(ಬ) ಪಂಚಾಯತಕ್ಕೆ ಬರಬೇಕಾದ ಮತ್ತು ೯೧ ನೇ ಕಲಮಿನ (೫)ನೇ ಪೋಟ-ಕಲಮಿನನ್ವಯ ಮಾಮಲೇದಾರನ ಅಥವಾ ಮಹಾಲಕರಿಯ ಮುಖಾಂತರ ವಸೂಲ ಮಾಡಲ್ಪಡಬೇಕಾದ ಯಾವದೊಂದು ಕರದ ಅಥವಾ ಫೀಯ ಯಾವದೇ ಬಾಕಿಯು ಅಥವಾ ಇತರ ರಕಮು

ವಸೂಲ ಆಗದಂಥಾದ್ದು ಇದ್ದರೆ, ಕಲೆಕ್ಟರನು ಇಂಥ ರಕಮನ್ನು ಅಥವಾ ಬಾಕಿಯನ್ನು ಮುಳುಗುವಗಂಟೆಂದು ಬರೆಯಲಿಕ್ಕೆ ಹುಕುಮು ಮಾಡಬಹುದು

(ಕ) ಈ ಆಕ್ಟಿನನ್ವಯ ಅಥವಾ ಇತರ ರೀತಿಯಿಂದ ಯಾವದೊಂದು ಪಂಚಾಯತಕ್ಕೆ ಸಲ್ಲತಕ್ಕ ಇತರ ಯಾವದೇ ಕರವು.

ಆದರೆ ಗೊತ್ತುಪಡಿಸುವದೇನಂದರೆ, ೫೦೦ ರೂಪಾಯಿಗಳಿಗೆ ಮೀರದ ಯಾವದೇ ರಕಮು, ರಾಜ್ಯಸರಕಾರದವರ ಪೂರ್ವ ಮಂಜೂರಿಯ ಹೊರ್ತಾಗಿ (ಕ) ರಕಮಿನನ್ವಯ ಮುಣಗಿದ ಸಾಲವೆಂದು ವಜಾ ಮಾಡ ತಕ್ಕದ್ದಲ್ಲ

---

## ಬಾಬು ೧೦

### ಪಂಚಾಯತಗಳಿಗೆ ಹಣದ ಸಹಾಯ

ಕ. ೯೨ (ಅ) ಪ್ರಾಂತಿಕ ಸರಕಾರದವರ ವಂತಿಕೆ-ಪ್ರಾಂತಿಕ ಸರಕಾರದವರು, ೮೯ನೆಯ ಕಲಮಿನ ೧ನೆಯ ಹಾಗೂ (೨ ಅ) ಪೋಟ-ಕಲಮಿನನ್ವಯ ಕರಗಳನ್ನು ಕೂಡ್ರಿಸುವ ಪ್ರತಿಯೊಂದು ಪಂಚಾಯತಕ್ಕೆ ಪ್ರತಿ ವರ್ಷ, ಸದರಿ ಗ್ರಾಮದ ಹದ್ದುಗಳೊಳಗೆ ಹಿಂದಿನ ವರ್ಷದಲ್ಲಿ ವಸೂಲ ಮಾಡಲಾದ ಸಾಮಾನ್ಯ ಭೂಮಿಯ ಮಹಸೂಲಿನ ನೂರಕ್ಕೆ ಹದಿನೈದರಷ್ಟಕ್ಕೆ ಅಥವಾ ಲೋಕಲ್‌ಫಂಡ ಸೆಸ್ಸಿನ ನೂರಕ್ಕೆ ಇಪ್ಪತ್ತೈದರಷ್ಟಕ್ಕೆ, ಇವೆರಡರಲ್ಲಿ ಯಾವದು ಹೆಚ್ಚಿಗಿರುವದೋ ಅದಕ್ಕೆ ಸರಿಯಾದ ಒಂದು ಗ್ರ್ಯಾಂಟನ್ನು ಕೊಡತಕ್ಕದ್ದು.

ಕ. ೯೩ ಜಿಲ್ಲಾ ಲೋಕಲ್ ಬೋರ್ಡು ಸಾಲಕೊಡುವದು:—

ಸನ್ ೧೯೨೩ನೆಯ ಇಸವಿಯ ಮುಂಬಯಿಯ ಲೋಕಲ್ ಬೋರ್ಡುಗಳ ವಿಷಯದ ಆಕ್ಟಿನಲ್ಲಿ ಯಾವದೇ ಮಜಕೂರು ಇದ್ದಾಗ್ಯೂ ಜಿಲ್ಲಾ ಲೋಕಲ್ ಬೋರ್ಡು ಕಾನೂನುಗಳಿಗೊಳಪಟ್ಟು, ಈ ಆಕ್ಟಿನ ಉದ್ದೇಶಗಳ ಸಲುವಾಗಿ ಸದರಿ ಜಿಲ್ಹೆಯೊಳಗಿನ ಯಾವದೊಂದು ಪಂಚಾಯಕ್ಕೆ ಸಾಲವನ್ನು ಕೊಡಬಹುದು.

೯೩ನೇ ಕಲಮಿನನ್ವಯ ಜಿಲ್ಹಾ ಲೋಕಲ್‌ಬೋರ್ಡಿನಿಂದ ಪಂಚಾಯತಕ್ಕೆ ಕೊಡಲ್ಪಡಬಹುದಾದ ಸಾಲಗಳ ಶರ್ತುಗಳನ್ನು ಗೊತ್ತುಪಡಿಸುವ ಕಾನೂನುಗಳು.

೧. ಪಂಚಾಯತದಿಂದ ಸಾಲದ ಸಲುವಾಗಿ ಮಾಡಲ್ಪಟ್ಟ ಅರ್ಜಿಯು ಪಂಚಾಯತದ ಸದಸ್ಯರ ಇಡೀ ಸಂಖ್ಯೆಯ ಎರಡು-ಮೂರಾಂಶದಷ್ಟು ಬಹುಮತದಿಂದ ಪಾಸು ಮಾಡಲ್ಪಟ್ಟ ಠರಾವಿನಿಂದ ಸಮರ್ಥಿಸಲ್ಪಟ್ಟ ಹೊರ್ತು, ಜಿಲ್ಹಾ ಲೋಕಲ್‌ಬೋರ್ಡಿನಿಂದ ತೆಗೆದುಕೊಳ್ಳಲ್ಪಡಲಿಕ್ಕಿಲ್ಲ

೨ ಜಿಲ್ಹಾ ಲೋಕಲ್‌ಬೋರ್ಡು, ೧ನೇ ಕಾನೂನಿಗನುಸರಿಸಿ ಪಂಚಾಯತದಿಂದ ಅರ್ಜಿಯು ಮಾಡಲ್ಪಟ್ಟ ನಂತರ, ಪಂಚಾಯತದಿಂದ ಯಾತರ ಮೇಲೆ ಖರ್ಚು ಮಾಡಲ್ಪಡುತ್ತದೋ ಆ ಕೆಲಸದ ಸಲುವಾಗಿ ಮಂಜೂರಾದ ಅಂದಾಜನ್ನು ಮೀರದ ಸಾಲವನ್ನು, ಪಂಚಾಯತದ ಫಂಡಿನ ಜಾಮೀನಿನ ಮೇಲೆ ಕೊಡಬಹುದು.

೩. ಹಿಂದಿನ ಮೂರು ವರ್ಷಗಳ ಅಂಕೆಗಳ ಆಧಾರದಂತೆ ಕೂಡ್ರಿಸಲ್ಪಟ್ಟ ಸರಾಸರಿ ಚಾಲೂ ಖರ್ಚಿಗಿಂತ ಹೆಚ್ಚಿರುವ ಸರಾಸರಿ ಚಾಲೂ ಉತ್ಪನ್ನದ ರಕಮಿನ ಐದು ಪಟ್ಟಿಗಿಂತ ಹೆಚ್ಚಲ್ಲದ ಸಾಲವನ್ನು ಜಿಲ್ಹಾ ಲೋಕಲ್ ಬೋರ್ಡು ಪಂಚಾಯತಕ್ಕೆ ಕೊಡಬಾರದು.

೪. ಜಿಲ್ಹಾ ಲೋಕಲ್ ಬೋರ್ಡಿನಿಂದ ಕೊಡಲ್ಪಟ್ಟ ಸಾಲದ ಮೇಲೆ ಪಂಚಾಯತದಿಂದ ಕೊಡಲ್ಪಡುವ ಬಡ್ಡಿಯ ದರವು, ಜಿಲ್ಹಾ ಲೋಕಲ್ ಬೋರ್ಡಿನ ಮತ್ತು ಪಂಚಾಯತದ ಪರಸ್ಪರ ಒಪ್ಪಿಗೆಯಿಂದ ನಿರ್ಣಯಿಸಲ್ಪಡತಕ್ಕದ್ದು.

ಆದರೆ ಗೊತ್ತುಪಡಿಸುವದೇನಂದರೆ, ಇಂಥ ಬಡ್ಡಿಯ ದರವು, ಸನ್ ೧೮೮೩ ನೇ ಇಸವಿಯ ಭೂಮಿಯ ಸುಧಾರಣೆಯನ್ನು ಮಾಡುವಗೋಸ್ಕರ ಸಾಲವನ್ನು ಕೊಡುವ ವಿಷಯದ ಆಕ್ಟಿನನ್ವಯ ಸರಕಾರದಿಂದ ವೇಳೆವೇಳೆಗೆ ಕೊಡಲ್ಪಟ್ಟ ಸಾಲಗಳ ದರಕ್ಕಿಂತ ಹೆಚ್ಚಿನದಿರಬಾರದು

೫. ಜಿಲ್ಹಾ ಲೋಕಲ್ ಬೋರ್ಡಿನಿಂದ ಪಂಚಾಯತಕ್ಕೆ ಕೊಡಲ್ಪಟ್ಟ ಸಾಲವು, ಹತ್ತಕ್ಕಿಂತ ಹೆಚ್ಚಲ್ಲದ ಸಮವಾದ ಕಂತುಗಳಿಂದ ಬಡ್ಡಿಯ ಸಹಿತವಾಗಿ ತಿರುಗಿ ಕೊಡಲ್ಪಡತಕ್ಕದ್ದು.

---

## ಬಾಬು ೧೧

## ನಿರ್ಬಂಧ

೯೪ ಪ್ರೋಸೀಡಿಂಗು ಮುಂತಾದವುಗಳನ್ನು ಬೇಡಲಿಕ್ಕೆ ಅಧಿಕಾರ — (೧) ಕಲೆಕ್ಟರನಿಗೆ ಅಥವಾ ಜಿಲ್ಹಾ ಲೋಕಲ್ ಬೋರ್ಡಿಗೆ ಈ ಕೆಳಗಿನ ಅಧಿಕಾರಗಳಿರಬೇಕು.

(ಅ) ಯಾವದನ್ನು ಕೊಡಲಿಕ್ಕೆ ಪಂಚಾಯತಕ್ಕೆ ಹೇಳುವದು ಯೋಗ್ಯವೆಂದು ಕಲೆಕ್ಟರನಿಗೆ ಅಥವಾ ಜಿಲ್ಹಾ ಲೋಕಲ್ ಬೋರ್ಡಿಗೆ ತೋರುತದೋ ಅಂಥ ಪಂಚಾಯತದ ಪ್ರೋಸಿಡಿಂಗುಗಳೊಳಗಿಂದ ಯಾವದೇ ಉತಾರೆಯನ್ನು, ಪಂಚಾಯತದ ತಾಬೆಯಲ್ಲಿ ಅಥವಾ ನಿರ್ಬಂಧದ ಕೆಳಗೆ ಇರುವ ಯಾವದೇ ಪುಸ್ತಕವನ್ನು ಅಥವಾ ದಸ್ತೈವಜನ್ನು, ಮತ್ತು ಯಾವದೇ ಪತ್ರಕವನ್ನು, ಪತ್ರಿಕೆಯನ್ನು, ಲೆಖ್ಖವನ್ನು ಅಥವಾ ರಿಪೋರ್ಟನ್ನು ಬೇಡುವದು ; ಮತ್ತು

(ಬ) ಪಂಚಾಯತಕ್ಕೆ.—

(೧) ಯಾವದನ್ನು ಪಂಚಾಯತವು ಮಾಡುವದಿರುವದೋ ಅಥವಾ ಮಾಡುತ್ತಿರುವದೋ ಅಂಥ ಯಾವದೇ ಸಂಗತಿಯನ್ನು ಮಾಡುವದಕ್ಕೆ ಯಾವ ಆಕ್ಷೇಪವಿರುವದೆಂದು ಕಲೆಕ್ಟರನಿಗೆ ಅಥವಾ ಜಿಲ್ಲಾ ಲೋಕಲ್ ಬೋರ್ಡಿಗೆ ತೋರುವದೋ ಅಂಥ ಯಾವದೇ ಆಕ್ಷೇಪವನ್ನು, ಅಥವಾ

(೨) ಯಾವದನ್ನು ಪೂರೈಸಲಿಕ್ಕೆ ಕಲೆಕ್ಟರನು ಅಥವಾ ಜಿಲ್ಲಾ ಲೋಕಲ್ ಬೋರ್ಡು ಸಮರ್ಥನಿರುವದೋ ಮತ್ತು ಯಾತರ ಮೇಲಿಂದ ಪಂಚಾಯತವು ಯಾವದೊಂದು ಕೆಲಸವನ್ನು ಮಾಡುವದು ಅವಶ್ಯವಾಗುವದೆಂದು ಕಲೆಕ್ಟರನಿಗೆ ಅಥವಾ ಜಿಲ್ಲಾ ಲೋಕಲ್ ಬೋರ್ಡಿಗೆ ತೋರುವದೋ ಅಂಥ ಯಾವದೇ ಮಾಹಿತಿಯನ್ನು ವಿಚಾರದಲ್ಲಿ ತೆಗೆದುಕೊಳ್ಳಲಿಕ್ಕೆ ಮತ್ತು

ಪ್ರಸಂಗದ ಪ್ರಕಾರ, ಕಲೆಕ್ಟರನಿಗೆ ಅಥವಾ ಜಿಲ್ಲಾ ಲೋಕಲ್ ಬೋರ್ಡಿಗೆ ಯೋಗ್ಯ ವೇಳೆಯಲ್ಲಿ ಲೇಖೀ ಉತ್ತರವನ್ನು ಕಳಿಸಲಿಕ್ಕೆ ಮತ್ತು ಇಂಥ ಕೆಲಸಗಳನ್ನು ಮಾಡುವದನ್ನು ಬಿಡದಿರುವದಕ್ಕೆ ಅಥವಾ ಮಾಡದಿರುವದಕ್ಕೆ ಇರುವ ಕಾರಣಗಳನ್ನು ತೋರಿಸಲಿಕ್ಕೆ ಹೇಳುವದು.

(೨) ಜಿಲ್ಲಾ ಲೋಕಲ್ ಬೋರ್ಡಿಗೆ (೧)ನೇ ಪೋಟ-ಕಲಮಿನನ್ವಯ ಕೊಡಲ್ಪಟ್ಟ ಎಲ್ಲ ಅಥವಾ ಯಾವದೇ ಅಧಿಕಾರಗಳನ್ನು, ಅದು ತನ್ನ ಅಧ್ಯಕ್ಷನಿಗೆ, ಉಪಾಧ್ಯಕ್ಷನಿಗೆ, ಚೀಫ ಆಫೀಸರನಿಗೆ, ಪಬ್ಲಿಕ್ ಹೆಲ್ಥ ಆಫೀಸರನಿಗೆ ಅಥವಾ ಎಗ್ಝಿಕ್ಯೂಟಿವ್ಹ ಎಂಜಿನಿಯರನಿಗೆ ಕೊಡಬಹುದು

೯೫ ಪಂಚಾಯತಗಳ ಸ್ಥಾಪನೆಗೆ ಉತ್ತೇಜನ ಕೊಡುವ ಬಗ್ಗೆ ಮತ್ತು ಅವುಗಳ ಬೆಳವಣಿಗೆಯನ್ನು ಪೋಷಿಸುವ ಬಗ್ಗೆ ಕರ್ತವ್ಯಗಳನ್ನು ಒಪ್ಪಿಸಿ ಕೊಡುವದು, ಅಮಲದಾರರ ನೇಮಣೂಕು ಮಾಡುವದು ಮತ್ತು ಸಂಬಳವಿಲ್ಲದೆ ಕೆಲಸ ಮಾಡುವವರನ್ನು ಉಪಯೋಗಿಸಿಕೊಳ್ಳುವದು --

(೧) ಜಿಲ್ಲಾ ಲೋಕಲ್ ಬೋರ್ಡು, ಅಧ್ಯಕ್ಷನಿಗೆ, ಉಪಾಧ್ಯಕ್ಷನಿಗೆ, ಚೀಫ ಆಫೀಸರನಿಗೆ, ಪಬ್ಲಿಕ್ ಹೆಲ್ಥ ಆಫೀಸರನಿಗೆ ಅಥವಾ ಈ ಬಗ್ಗೆ ಜಿಲ್ಲಾ ಲೋಕಲ್‌ಬೋರ್ಡಿನಿಂದ ವಿಶೇಷವಾಗಿ ನೇಮಿಸಲ್ಪಟ್ಟ ಇತರ ಯಾವನೇ ಅಮಲದಾರನಿಗೆ, ಪಂಚಾಯತಗಳ ಸ್ಥಾಪನೆಗೆ ಉತ್ತೇಜನ ಕೊಡುವ ಮತ್ತು ಅವುಗಳ ಬೆಳವಣಿಗೆಯನ್ನು ಪೋಷಿಸುವ, ಮತ್ತು ಪಂಚಾಯತ

ಗಳು ಈ ಆಕ್ಟಿನನ್ವಯ ತಮ್ಮ ಅಧಿಕಾರವನ್ನು ಯೋಗ್ಯವಾಗಿ ನಡಿಸುವಲ್ಲಿ ಮತ್ತು ತಮ್ಮ ಕರ್ತವ್ಯಗಳನ್ನು ಮಾಡುವಲ್ಲಿ ಅವುಗಳಿಗೆ ಸಹಾಯ ಮಾಡುವ ಕರ್ತವ್ಯವನ್ನು ಒಪ್ಪಿಸಿಕೊಡಬಹುದು.

(೨) ಯಾವ ಮನುಷ್ಯನು, ಜಿಲ್ಹಾ ಲೋಕಲ್‌ಬೋರ್ಡಿನ ಅಭಿಪ್ರಾಯದಂತೆ, ಈ ಬಗ್ಗೆ ವಿಶೇಷ ಲಾಯಖಿಯುಳ್ಳವನಿರುವನೋ ಅಂಥ ಯಾವನೇ ಮನುಷ್ಯನ ನೌಕರಿಯನ್ನು, (೧)ನೇ ಪೋಟ-ಕಲಮಿನನ್ವಯ ಒಪ್ಪಿಸಿಕೊಡಲ್ಪಡಬಹುದಾದ ಯಾವನೇ ಕರ್ತವ್ಯಗಳನ್ನು ಮಾಡುವಲ್ಲಿ, ಏನೂ ಸಂಬಳ ಕೊಡದೆ ಸ್ವೀಕರಿಸಿ ಉಪಯೋಗಿಸಿಕೊಳ್ಳಲಿಕ್ಕೆ ಇಂಥ ಬೋರ್ಡು ಸಮರ್ಥವಿರಬೇಕು.

(೩) ಪ್ರಾಂತಿಕ ಸರಕಾರದವರು ಠರಾಯಿಸಬಹುದಾದ ಈ ಆಕ್ಟಿನನ್ವಯದ ಕಲೆಕ್ಟರನ ಅಧಿಕಾರಗಳನ್ನು ನಡಿಸಲಿಕ್ಕೆ ಮತ್ತು ಕರ್ತವ್ಯಗಳನ್ನು ಮಾಡಲಿಕ್ಕೆ ಮತ್ತು ಜಿಲ್ಲಾ ಲೋಕಲ್‌ಬೋರ್ಡು ರದ್ದು ಮಾಡಲ್ಪಟ್ಟದ್ದರೆ, ಜಿಲ್ಹಾ ಲೋಕಲ್‌ಬೋರ್ಡಿನ ಕರ್ತವ್ಯಗಳನ್ನು ಮಾಡಲಿಕ್ಕೆ ಸಮರ್ಥರಿರಬೇಕು. ಇಂಥ ಅಮಲದಾರನು, ಪಂಚಾಯತಗಳನ್ನು ಮತ್ತು ಗ್ರಾಮದ ಬೆಂಚುಗಳನ್ನು ಸ್ಥಾಪಿಸಲಿಕ್ಕೆ ಪ್ರೋತ್ಸಾಹಿಸುವ ಮತ್ತು ಅವುಗಳ ಬೆಳವಣಿಗೆಯನ್ನು ಪೋಷಿಸುವ ಉದ್ದೇಶದ ಬಗ್ಗೆ ಮತ್ತು ಪಂಚಾಯತಗಳು ಮತ್ತು ಗ್ರಾಮದ ಬೆಂಚುಗಳು ಈ ಆಕ್ಟಿನನ್ವಯ ತಮ್ಮ ಅಧಿಕಾರಿಗಳನ್ನು ಯೋಗ್ಯವಾಗಿ ನಡಿಸುವಲ್ಲಿ ಮತ್ತು ಕರ್ತವ್ಯಗಳನ್ನು ಯೋಗ್ಯವಾಗಿ ಮಾಡುವಲ್ಲಿ ಅವುಗಳಿಗೆ ಸಹಾಯ ಮಾಡುವ ಮತ್ತು ಆಲೋಚನೆ ಕೊಡುವ ಉದ್ದೇಶದ ಬಗ್ಗೆ ಪ್ರಾಂತಿಕ ಸರಕಾರದವರು ಠರಾಯಿಸಬಹುದಾದ ಇತರ ಕರ್ತವ್ಯಗಳನ್ನು ಸಹ ಮಾಡಬೇಕು ಮತ್ತು ಅಧಿಕಾರಗಳನ್ನು ಸಹ ನಡಿಸಬೇಕು.

೯೬ ಪ್ರವೇಶಿಸಲಿಕ್ಕೆ ಅಧಿಕಾರ— ಪಂಚಾಯತವು ಭೋಗವಟೆ ಮಾಡುವ ಯಾವದೇ ಸ್ಥಾವರ ಆಸ್ತಿಯಲ್ಲಿ ಅಥವಾ ಅದರ ಹುಕುಮಿನನ್ವಯ ನಡೆದಿದ್ದ ಯಾವದೇ ಕಾಮಗಿರಿಯಲ್ಲಿ ಪ್ರವೇಶಿಸಲಿಕ್ಕೆ ಮತ್ತು ತಪಾಸಿಸಲಿಕ್ಕೆ ಅಥವಾ ಪ್ರವೇಶಿಸಿ ತಪಾಸಿಸುವಂತೆ ಮಾಡಲಿಕ್ಕೆ ಜಿಲ್ಹಾ ಲೋಕಲ್ ಬೋರ್ಡು, ತನ್ನ ಅಧ್ಯಕ್ಷನಿಗೆ, ಉಪಾಧ್ಯಕ್ಷನಿಗೆ ಅಥವಾ ತನ್ನ ಯಾವನೇ ಅಮಲದಾರನಿಗೆ ಅಧಿಕಾರ ಕೊಡಬಹುದು.

೯೭ ಲೆಖ್ಖಗಳ ತಪಾಸಣೆ— ಪ್ರಾಂತಿಕ ಸರಕಾರದಿಂದ ಆ ಬಗ್ಗೆ ಇತರ ರೀತಿಯಿಂದ ಠರಾವು ಮಾಡಲ್ಪಟ್ಟದ್ದ ಹೊರ್ತು, ಪಂಚಾಯತದ

ಲೆಖ್ಖದ ತಪಾಸಣೆಯನ್ನು ಪ್ರತಿವರ್ಷ ಜಿಲ್ಹಾ ಲೋಕಲ್ ಬೋರ್ಡು ಮಾಡಬೇಕು, ಮತ್ತು ಇಂಥ ಬೋರ್ಡು, ಲೆಖ್ಖ ತಪಾಸಣೆಯನ್ನು ಮುಗಿಸಿದ ಒಂದು ತಿಂಗಳೊಳಗೆ, ಲೆಖ್ಖ ತಪಾಸಣೆಯ ಟಿಪ್ಪಣೆಯ ಒಂದು ನಕಲನ್ನು ಕಲೆಕ್ಟರನ ಕಡೆಗೆ ಕಳುಹಿಸಬೇಕು,

೯೮. ನೌಕರರ ಸಂಖ್ಯೆಯನ್ನು ಕಡಿಮೆ ಮಾಡೋಣ— (೧) ಪಂಚಾಯತದಿಂದ ಅಮಲದಾರರೆಂದು ಅಥವಾ ನೋಕರರೆಂದು ಇಡಲ್ಪಟ್ಟ ಅಥವಾ ಇಡುವದಕ್ಕೆ ಯೋಚಿಸಲ್ಪಟ್ಟ ಜನರ ಸಂಖ್ಯೆಯು, ಅಥವಾ ಇಂಥ ಜನರಿಗೆ ಪಂಚಾಯತದಿಂದ ಕೊಡಲ್ಪಟ್ಟ ಅಥವಾ ಕೊಡುವದಕ್ಕೆ ಯೋಚಿಸಲ್ಪಟ್ಟ ಪ್ರತಿಫಲವು ಅತಿಶಯವಾಗಿರುತ್ತದೆಂದು ಕಲೆಕ್ಟರನ ಅಥವಾ ಜಿಲ್ಹಾ ಲೋಕಲ್ ಬೋರ್ಡಿನ ಅಭಿಪ್ರಾಯವಿದ್ದರೆ, ಪ್ರಸಂಗದ ಪ್ರಕಾರ ಕಲೆಕ್ಟರನು ಅಥವಾ ಜಿಲ್ಹಾ ಲೋಕಲ್ ಬೋರ್ಡು ಹೇಳಲಾಗಿ, ಪಂಚಾಯತವು ಇಂಥ ಸಂಖ್ಯೆಯನ್ನು ಅಥವಾ ಪ್ರತಿಫಲವನ್ನು ಕಡಿಮೆ ಮಾಡಬೇಕು

(೨) ಕಲೆಕ್ಟರನು ಅಥವಾ ಜಿಲ್ಹಾ ಲೋಕಲ್ ಬೋರ್ಡು, (೧)ನೇ ಪೋಟ-ಕಲಮಿನನ್ವಯ ಹೇಳಿದ್ದರಲ್ಲಿ ಭೇದವಿದ್ದರೆ, ಪಂಚಾಯತವು, ಆ ಭೇದವಿದ್ದ ಸಂಗತಿಯನ್ನು ಕಮಿಶನರನಿಗೆ ತಿಳಿಸಬೇಕು, ಮತ್ತು ಕಮಿಶನರನ ನಿರ್ಣಯವು ಕೊನೆಯದಾಗುವದು

(೩) ಪಂಚಾಯತವು (೧)ನೇ ಪೋಟ-ಕಲಮಿನನ್ವಯ ಹುಕುಮು ಮಾಡಲ್ಪಟ್ಟ ಯವದೇ ಮಾತಿನ ವಿರುದ್ಧ ಕಮಿಶನರನ ಕಡೆಗೆ ಅಪೀಲ ಮಾಡಬಹುದು, ಮತ್ತು ಆ ಸಂಗತಿಯಲ್ಲಿ ಕಮಿಶನರನ ನಿರ್ಣಯವು ಕೊನೆಯದಾಗುವದು.

೯೯ ಹುಕುಮು ಬಜಾಯಿಸುವದನ್ನು ತಹಕೂಬ ಇಡುವದು -

(೧) ಕಲೆಕ್ಟರನ ಅಭಿಪ್ರಾಯದಂತೆ, ಪಂಚಾಯತದ ಯಾವದೇ ಹುಕುಮಿನ ಅಥವಾ ಠರಾವಿನ ಅಮಲಬಜಾವಣೆಯಿಂದ, ಪಂಚಾಯತದಿಂದ ಅಥವಾ ಪಂಚಾಯತದ ವತಿಯಿಂದ ಮಾಡಲ್ಪಡದಿರುವ ಅಥವಾ ಮಾಡಲ್ಪಡುತ್ತಿರುವ ಯಾವದೇ ಸಂಗತಿಯನ್ನು ಮಾಡುವದರಿಂದ ಜನರಿಗೆ ಅಪಾಯವು ಅಥವಾ ಉಪದ್ರವವು ಆಗುತ್ತಿದ್ದರೆ ಅಥವಾ ಆಗುವ ಸಂಭವವಿದ್ದರೆ ಅಥವಾ ಅದರಿಂದ ಶಾಂತತೆಯ ಭಂಗವಾಗುವ ಹಾಗಿದ್ದರೆ, ಅವನು, ಲೇಖೀ ಹುಕುಮು ಕೊಟ್ಟು, ಆ ಅಮಲಬಜಾವಣೆಯನ್ನು ತಹಕೂಬ ಇಡಬಹುದು ಅಥವಾ ಅದನ್ನು ಮಾಡುವದಕ್ಕೆ ಮನಾಯಿ ಮಾಡಬಹುದು.

(೨) ಕಲೆಕ್ಟರನು (೧)ನೇ ಪೋಟ-ಕಲಮಿನನ್ವಯ ಯಾವದೊಂದು ಹುಕುಮನ್ನು ಮಾಡಿದಾಗ್ಗೆ, ಅವನು ಕೂಡಲೇ ಸಂಬಂಧವಿದ್ದ ಪಂಚಾಯತಕ್ಕೆ ಆ ಹುಕುಮಿನ ಒಂದು ನಕಲನ್ನು ಅದನ್ನು ಮಾಡುವದಕ್ಕೆ ಇರುವ ಕಾರಣಗಳ ಸಹಿತ ಕಳುಹಿಸಬೇಕು.

(೩) ಕಲೆಕ್ಟರನು, ಈ ಕಲಮಿನನ್ವಯ ಸಂಭವಿಸುವ ಪ್ರತಿಯೊಂದು ಪ್ರಕರಣದ ರೀಪೋರ್ಟನ್ನು, ಕೂಡಲೇ ಕಮಿಶನರನಿಗೆ ಸಾದರ ಮಾಡಬೇಕು, ಮತ್ತು ಕಮಿಶನರನು ಅದರಲ್ಲಿ ಮಾಡಲ್ಪಟ್ಟ ಯಾವದೇ ಹುಕುಮನ್ನು ತಿದ್ದಬಹುದು ಅಥವಾ ಬದಲಿಸಬಹುದು, ಮತ್ತು ಆ ಸಂಬಂಧದಲ್ಲಿ ಕಲೆಕ್ಟರನು ಮಾಡಬಹುದಾದ ಇತರ ಯಾವದೇ ಹುಕುಮನ್ನು ಮಾಡಬಹುದು

೧೦೦ ಜರೂರಿಯ ಪ್ರಸಂಗದಲ್ಲಿ ಕಾಮಗಿರಿಯ ಅಮಲಬಜಾವಣಿ— (೧) ಜರೂರಿಯ ಪ್ರಸಂಗಗಳಲ್ಲಿ, ಯಾವದನ್ನು ಬಜಾಯಿಸಲಿಕ್ಕೆ ಅಥವಾ ಮಾಡಲಿಕ್ಕೆ ಪಂಚಾಯತಕ್ಕೆ ಅಧಿಕಾರವಿರುವದೋ ಮತ್ತು ಯಾವದನ್ನು ಕೂಡಲೇ ಬಜಾಯಿಸುವದು ಅಥವಾ ಮಾಡುವದು, ಕಲೆಕ್ಟರನ ಅಭಿಪ್ರಾಯದಂತೆ, ಜನರ ಆರೋಗ್ಯದ ಅಥವಾ ಸುರಕ್ಷಿತತೆಯ ಸಲುವಾಗಿ ಅವಶ್ಯವಿರುವದೋ ಅಂಥ ಯಾವದೇ ಕಾಮಗಿರಿಯನ್ನು ಬಜಾಯಿಸುವ ಬಗ್ಗೆ ಅಥವಾ ಕೃತ್ಯವನ್ನು ಮಾಡುವ ಬಗ್ಗೆ 'ಅವನು ತಜವೀಜ ಮಾಡಬಹುದು ಮತ್ತು ಆ ಕಾಮಗಿರಿಯನ್ನು ಬಜಾಯಿಸುವ ಅಥವಾ ಕೃತ್ಯವನ್ನು ಮಾಡುವ ಖರ್ಚನ್ನು ಪಂಚಾಯತವು ಕೂಡಲೇ ಕೊಡಬೇಕೆಂದು ಫರ್ಮಾಯಿಸಬಹುದು.

(೨) ಈ ರೀತಿಯಿಂದ ಖರ್ಚು ಕೊಡಲ್ಪಡದಿದ್ದರೆ. ಎಲ್ಲಿ ಗ್ರಾಮದ ಫಂಡು ಇಡಲ್ಪಟ್ಟಿರುವದೋ ಅಂಥ ಟ್ರೇಝರಿಯು ವಶದಲ್ಲಿರುವ ಅಮಲದಾರನಿಗೆ, ಇಂಥ ಖರ್ಚನ್ನು ಅಥವಾ ಅದರ ಪೈಕಿ ಶಕ್ಯವಿದ್ದಷ್ಟು ಭಾಗವನ್ನು ಇಂಥ ಫಂಡಿನ ಪೈಕಿ ತನ್ನ ಕೈಯಲ್ಲಿ ಇರುವ ಶಿಲುಕಿನೊಳಗಿಂದ ಕೊಡಲಿಕ್ಕೆ ಕಲೆಕ್ಟರನು ಫರ್ಮಾಯಿಸಬಹುದು.

(೩) ಕಲೆಕ್ಟರನು ತಾನು (೧)ನೇ ಪೋಟ-ಕಲಮಿನನ್ವಯ ಅಧಿಕಾರಗಳನ್ನು ನಡೆಸಿದ ಪ್ರತಿಯೊಂದು ಪ್ರಕರಣವನ್ನು ಕುರಿತು ಕಮಿಶನರನ ಕಡೆಗೆ ರಿಪೋರ್ಟು ಮಾಡಬೇಕು.

೧೦೧. ಕರ್ತವ್ಯವನ್ನು ಮಾಡುವದರಲ್ಲಿ ತಪ್ಪೋಣ.— (೧) ಪಂಚಾಯತಿಯು ೨೬ನೇ ಕಲಮಿನಲ್ಲಿ ಹೇಳಲ್ಪಟ್ಟ ಯಾವದೇ ಕರ್ತವ್ಯವನ್ನು ಮಾಡುವದರಲ್ಲಿ ತಪ್ಪಿರುವದೆಂದು ಜಿಲ್ಲಾ ಲೋಕಲ್ ಬೋರ್ಡಿಗೆ ಯಾವದೇ

ಕಾಲಕ್ಕೆ ತೋರಿದರೆ, ಅದು ಗೊತ್ತುಪಡಿಸಲ್ಪಟ್ಟ ಮುದತಿನಲ್ಲಿ ಆ ಕರ್ತವ್ಯವನ್ನು ಮಾಡಬೇಕೆಂದು ಫರ್ಮಾಯಿಸಬಹುದು, ಮತ್ತು, ಆ ಕರ್ತವ್ಯವು ಗೊತ್ತುಪಡಿಸಲ್ಪಟ್ಟ ಮುದತಿನಲ್ಲಿ ಮಾಡಲ್ಪಡದಿದ್ದರೆ, ಜಿಲ್ಲಾ ಲೋಕಲ್ ಬೋರ್ಡು ಅದನ್ನು ಮಾಡುವದಕ್ಕೆ ಯಾವನೊಬ್ಬ ಮನುಷ್ಯನನ್ನು ನೇಮಿಸಬಹುದು, ಮತ್ತು ಅದನ್ನು ಮಾಡುವ ಖರ್ಚನ್ನು, ಜಿಲ್ಲಾ ಲೋಕಲ್ ಬೋರ್ಡು ನೇಮಿಸಬಹುದಾದ ಮುದತಿನೊಳಗೆ, ಆ ತಪ್ಪಿದ ಪಂಚಾಯತವು ಕೊಡಬೇಕೆಂದು ಫರ್ಮಾಯಿಸಬಹುದು.

(೨) ಈ ರೀತಿಯಿಂದ ಖರ್ಚು ಕೊಡಲ್ಪಡದಿದ್ದರೆ, ಗ್ರಾಮದ ಫಂಡಿನ ತಾಬೆ ಇರುವ ಮನುಷ್ಯನಿಗೆ ಇಂಥ ಖರ್ಚನ್ನು ಅಥವಾ ಅದರ ಪೈಕಿ ಶಕ್ಯವಿದ್ದಷ್ಟು ಭಾಗವನ್ನು ಇಂಥ ಫಂಡಿನ ಪೈಕಿ ತನ್ನ ಕೈಯಲ್ಲಿ ಇರುವ ಶಿಲುಕಿನೊಳಗಿಂದ ಕೊಡಲಿಕ್ಕೆ ಜಿಲ್ಲಾ ಲೋಕಲ್‌ಬೋರ್ಡು ಫರ್ಮಾಯಿಸಬಹುದು.

(೨ ಅ) ೨೬ನೇ ಕಲಮಿನಲ್ಲಿ ನಿರ್ದಿಷ್ಟ ಮಾಡಿದ ಯಾವದೇ ಕರ್ತವ್ಯವನ್ನು ಮಾಡಲಿಕ್ಕೆ ಯಾವದೊಂದು ಪಂಚಾಯತವು ತಪ್ಪಿರುತ್ತದೆಂದು ಮತ್ತು (೧)ನೇ ಪೋಟ-ಕಲಮಿನನ್ವಯ ಕೆಲಸ ನಡಿಸುವದಕ್ಕೆ ಜಿಲ್ಲಾ ಲೋಕಲ್ ಬೋರ್ಡು ತಪ್ಪಿರುತ್ತದೆಂದು ಅಥವಾ ತಾತ್ಸಾರ ಮಾಡಿರುತ್ತದೆಂದು ಯಾವದೇ ಕಾಲಕ್ಕೆ ಪ್ರಾಂತಿಕ ಸರಕಾರದವರಿಗೆ ಅಥವಾ ಪ್ರಾಂತಿಕ ಸರಕಾರದವರಿಂದ ಈ ಬಗ್ಗೆ ಅಧಿಕಾರ ಕೊಡಲ್ಪಟ್ಟ ಯಾವನೇ ಅಮಲದಾರನಿಗೆ ಕಂಡು ಬಂದರೆ, ಪ್ರಸಂಗವಿದ್ದಂತೆ, ಪ್ರಾಂತಿಕ ಸರಕಾರದವರು ಅಥವಾ ಸದರಿ ಅಧಿಕಾರ ಕೊಡಲ್ಪಟ್ಟ ಅಮಲದಾರನು (೧)ನೇ ಮತ್ತು (೨)ನೇ ಪೋಟ-ಕಲಮುಗಳನ್ವಯ ಜಿಲ್ಲಾ ಲೋಕಲ್ ಬೋರ್ಡು ನಡಿಸಬಹುದಾಗಿದ್ದ ಕೆಲಸವನ್ನು ನಡಿಸಬಹುದು

(೩) ಈ ಕಲಮಿನನ್ವಯ ಉಂಟಾಗುವ ಪ್ರತಿಯೊಂದು ಬಾಬತಿನ ಬಗ್ಗೆ ಪ್ರಸಂಗವಿದ್ದಂತೆ ಜಿಲ್ಲಾ ಲೋಕಲ್ ಬೋರ್ಡು ಅಥವಾ ಅಧಿಕಾರ ಕೊಡಲ್ಪಟ್ಟ ಅಮಲದಾರನು ಕಮಿಶನರರ ಕಡೆಗೆ ಕೂಡಲೆ ರಿಪೋರ್ಟ ಮಾಡಬೇಕು, ಮತ್ತು ಕಮಿಶನರರನಿಗೆ, ಅದರಲ್ಲಿ ಮಾಡಿದ ಯಾವದೇ ಹುಕುಮನ್ನು ಸುಧಾರಿಸಲಿಕ್ಕೆ ಅಥವಾ ದುರಸ್ತು ಮಾಡಲಿಕ್ಕೆ ಮತ್ತು ಆ ಸಂಬಂಧದಿಂದ ಜಿಲ್ಲಾ ಲೋಕಲ್ ಬೋರ್ಡು ಮಾಡಬಹುದಾಗಿದ್ದ ಇತರ ಇತರ ಯಾವದೇ ಹುಕುಮು ಮಾಡಲಿಕ್ಕೆ ಅಧಿಕಾರವಿದೆ.

೧೦೨. ತಪ್ಪು ಮಾಡಿದ ಬಗ್ಗೆ ಪಂಚಾಯತವನ್ನು ಮುರಿಯುವದು ಅಥವಾ ರದ್ದು ಮಾಡುವದು.— (೧) ಪ್ರಾಂತಿಕ ಸರಕಾರದವರ ಅಭಿಪ್ರಾಯದ ಪ್ರಕಾರ, ಯಾವದೊಂದು ಪಂಚಾಯತವು ತನ್ನ ಅಧಿಕಾರಗಳನ್ನು ಮೀರುತ್ತಿದ್ದರೆ ಅಥವಾ ಅವುಗಳ ದುರುಪಯೋಗ ಮಾಡುತ್ತಿದ್ದರೆ, ಅಥವಾ ೨೬ನೇ ಕಲಮಿನನ್ವಯ ಅಥವಾ ಆಯಾಕಾಲಕ್ಕೆ ಅಮಲಿನಲ್ಲಿರುವ ಇತರ ಯಾವದೇ ಕಾಯದೆಯನ್ವಯ ಅದರ ಮೇಲೆ ಹೊರಿಸಲ್ಪಟ್ಟ ಕರ್ತವ್ಯಗಳನ್ನು ಮಾಡುವದರಲ್ಲಿ ಒಂದೇ ಸವನೆ ತಪ್ಪು ಮಾಡುತ್ತಿದ್ದರೆ "ಅಥವಾ ೮೯ನೆಯ ಕಲಮಿನ ೧ನೆಯ ಪೋಟ-ಕಲಮಿನನ್ವಯ ಅಥವಾ ೨ ಅ ಪೋಟ-ಕಲಮಿನನ್ವಯ ಕರವನ್ನು ಕೂಡ್ರಿಸಲು ತಪ್ಪಿದರೆ" ಅಥವಾ ೮೯ನೇ ಕಲಮಿನನ್ವಯ ಕಲೆಕ್ಟರನ ಅಥವಾ ಕಮಿಶನರನ ಹುಕುಮುಗಳನ್ನು ಒಂದೇ ಸವನೆ ಅಮಾನ್ಯ ಮಾಡುತ್ತಿದ್ದರೆ, ಪ್ರಾಂತಿಕ ಸರಕಾರದವರು ಜಿಲ್ಲಾ ಲೋಕಲ್ ಬೋರ್ಡಿನ ಆಲೋಚನೆ ಕೇಳಿಕೊಂಡು, ಸರಕಾರೀ ಗ್ಯಾಝೆಟಿನಲ್ಲಿ ಒಂದು ಹುಕುಮು ಪ್ರಕಟಿಸಿ –

(೧) ಇಂಥ ಪಂಚಾಯತವನ್ನು ಮುರಿಯಬಹುದು, ಅಥವಾ

(೨) ಆ ಹುಕುಮಿನಲ್ಲಿ ವಿವರಿಸಲ್ಪಟ್ಟ ಮುದತಿನವರೆಗೆ ಇಂಥ ಪಂಚಾಯತವನ್ನು ರದ್ದು ಮಾಡಬಹುದು.

(೨) ಪಂಚಾಯತವು ಮುರಿಯಲ್ಪಟ್ಟಾಗ್ಗೆ, ಅಥವಾ ರದ್ದು ಮಾಡಲ್ಪಟ್ಟಾಗ್ಗೆ, ಆ ಹುಕುಮಿನಲ್ಲಿ ವಿವರಿಸಲ್ಪಟ್ಟ ತಾರೀಖಿನಿಂದ ಪಂಚಾಯತದ ಎಲ್ಲ ಮೆಂಬರರು ತಮ್ಮ ಮೆಂಬರರೆಂಬ ನಾತೆಯ ಹುದ್ದೆಗಳನ್ನು ಖಾಲಿ ಮಾಡಬೇಕು.

(೩) ಪಂಚಾಯತವನ್ನು ಮುರಿದಾಗ್ಗೆ, ಅದು ಈ ಆಕ್ಟಿನಲ್ಲಿ ಠರಾಯಿಸಲ್ಪಟ್ಟ ರೀತಿಯಿಂದ ತಿರಿಗಿ ರಚಿಸಲ್ಪಡಬೇಕು.

(೪) ಪಂಚಾಯತವು ರದ್ದು ಮಾಡಲ್ಪಟ್ಟರೆ,—

(ಅ) ಪಂಚಾಯತದ ಎಲ್ಲ ಅಧಿಕಾರಗಳು ಮತ್ತು ಕರ್ತವ್ಯಗಳು, ರದ್ದಿಯಾತಿಯ ಕಾಲದಲ್ಲಿ, ಪ್ರಾಂತಿಕ ಸರಕಾರದವರು ಆ ಬಗ್ಗೆ ಕಾಲಕಾಲಕ್ಕೆ ನೇಮಿಸಬಹುದಾದ ಮನುಷ್ಯರಿಂದ ನಡಿಸಲ್ಪಡಬೇಕು ಮತ್ತು ಮಾಡಲ್ಪಡಬೇಕು ; ಮತ್ತು

(ಬ) ಪಂಚಾಯತದ ಕಡೆಗೆ ಇರುವ ಎಲ್ಲ ಆಸ್ತಿಯು, ರದ್ದಿಯಾತಿಯ ಕಾಲದಲ್ಲಿ, ಪ್ರಾಂತಿಕ ಸರಕಾರದವರ ಕಡೆಗೆ ಉಳಿಯುವದು ; ಮತ್ತು

(ಕ) ರದ್ದಿಯಾತಿಯ ಮುದತು ಮುಗಿದ ಬಳಿಕ, ಪಂಚಾಯತವು ಈ ಆಕ್ಟಿನಲ್ಲಿ ಠರಾಯಿಸಲ್ಪಟ್ಟ ರೀತಿಯಿಂದ ತಿರಿಗಿ ರಚಿಸಲ್ಪಡಬೇಕು, ಮತ್ತು ಹುದ್ದೆಯನ್ನು ಖಾಲಿ ಮಾಡಿದ ಮನುಷ್ಯರು ತಿರಿಗಿ ಆರಿಸಲ್ಪಡಲಿಕ್ಕೆ ಅಥವಾ ನೇಮಿಸಲ್ಪಡಲಿಕ್ಕೆ ಲಾಯಖರಾಗುವರು

೧೦೩ ಗ್ರಾಮದ ಹದ್ದುಗಳಲ್ಲಿ ಬದಲಾವಣೆಯಾದ ಮೇಲೆ ಪಂಚಾಯತವನ್ನು ಮುರಿಯುವದು ಮತ್ತು ತಿರಿಗಿ ರಚಿಸುವದು — (೧) ಪಂಚಾಯತದ ಮುದತಿನಲ್ಲಿ ಗ್ರಾಮದ ಹದ್ದುಗಳಲ್ಲಿ ಬದಲಾವಣೆಯಾದರೆ, ಕಲೆಕ್ಟರದು ಲೇಖೀ ಹುಕುಮು ಮಾಡಿ ಇಂಥ ಪಂಚಾಯತವನ್ನು ಮುರಿಯಬಹುದು, ಮತ್ತು ಒಂದು ಪಂಚಾಯತವು.—

(೧) ಯಾವದರ ಪಂಚಾಯತವು ಮುರಿಯಲ್ಪಟ್ಟಿರುವದೋ ಆ ಗ್ರಾಮದ ಬಗ್ಗೆ ರಚಿಸಲ್ಪಡಬೇಕೆಂದು ಅಥವಾ

(೨) ಹೊಸದಾಗಿ ಜಾಹೀರ ಮಾಡಲ್ಪಟ್ಟ ಗ್ರಾಮದ ಬಗ್ಗೆ ಸ್ಥಾಪಿಸಿಡಲ್ಪಡಬೇಕೆಂದು

ಘವರ್ಾಯಿಸಬಹುದು.

ಯಾವದು ಮುರಿಯಲ್ಪಟ್ಟಿರುವದೋ ಅಂಥ ಪಂಚಾಯತದ ಮೆಂಬರರು ಹುಕುಮಿನಲ್ಲಿ ವಿವರಿಸ್ಪಟ್ಟ ತಾರೀಖಿನಿಂದ ತಮ್ಮ ಹುದ್ದೆಯನ್ನು ಖಾಲಿ ಮಾಡಬೇಕು

(೨) ಪೋಟ-ಕಲಮು (೧) ಇದರ ಠರಾವುಗಳನ್ವಯ ತಿರಿಗಿ ರಚಿಸಲ್ಪಟ್ಟ ಅಥವಾ ಸ್ಥಾಪಿಸಲ್ಪಟ್ಟ ಪಂಚಾಯತದಲ್ಲಿ ಕಲೆಕ್ಟರನು ಲೇಖೀ ಹುಕುಮಿನಿಂದ ಘವರ್ಾಯಿಸಬಹುದಾದ ರೀತಿಯಿಂದ ಆರಿಸಲ್ಪಟ್ಟ. ಅಥವಾ ನೇಮಣೂಕ ಮಾಡಲ್ಪಟ್ಟ ಮೆಂಬರರು ಇರಬೇಕು

ಹೀಗೆ ತಿರಿಗಿ ರಚಿಸಲ್ಪಟ್ಟ ಅಥವಾ ಸ್ಥಾಪಿಸಲ್ಪಟ್ಟ ಪಂಚಾಯತದ ಸರಪಂಚನು ಅಥವಾ ಡಪ್ಯೂಟಿ ಸರಪಂಚನು ಈ ಆಕ್ಟಿನಲ್ಲಿ ಠರಾಯಿಸಲ್ಪಟ್ಟ ರೀತಿಯಿಂದ ಆರಿಸಲ್ಪಡಬೇಕು.

(೩) ಹೀಗೆ ತಿರಿಗಿ ರಚಿಸಲ್ಪಟ್ಟ ಅಥವಾ ಸ್ಥಾಪಿಸಲ್ಪಟ್ಟ ಪಂಚಾಯತದ ಮುದತು, ಕಲೆಕ್ಟರನಿಂದ ಲೇಖಿ ಹುಕುಮಿನಿಂದ ಗೊತ್ತುಪಡಿಸಲ್ಪಡಬೇಕಾದ, ಒಂದು ವರ್ಷಕ್ಕಿಂತ ಹೆಚ್ಚಲ್ಲದ ಮುದತಿನ ವರೆಗೆ ಇರುವದು

(೪) ಪಂಚಾಯತದ ಮುದತು (೩) ನೇ ಪೋಟ-ಕಲಮಿನನ್ವಯ ಮುಗಿದ ಬಳಿಕ, ಆ ಪಂಚಾಯತವು ಆಕ್ಟಿನಿಂದ ಠರಾಯಿಸಲ್ಪಟ್ಟ ರೀತಿಯಿಂದ ರಚಿಸಲ್ಪಡಬೇಕು.

೧೦೪. ಮುರಿಯಲ್ಪಟ್ಟ ಪಂಚಾಯತದ ಆಸ್ತಿ ಮುಂತಾದ್ದು, ತಿರಿಗಿ ರಚಿಸಲ್ಪಟ್ಟ ಅಥವಾ ಸ್ಥಾಪಿಸಲ್ಪಟ್ಟ ಪಂಚಾಯತದ ಕಡೆಗೆ ಹೋಗುವದು— (೧) ಯಾವದೊಂದು ಪಂಚಾಯತವು ಮುರಿಯಲ್ಪಟ್ಟು ೧೦೩ನೇ ಕಲಮಿನನ್ವಯ ತಿರಿಗಿ ರಚಿಸಲ್ಪಟ್ಟಾಗ್ಗೆ ಅಥವಾ ಸ್ಥಾಪಿಸಲ್ಪಟ್ಟಾಗ್ಗೆ, ಮುರಿಯಲ್ಪಟ್ಟ ಪಂಚಾಯತದ ಕಡೆಗೆ ಇದ್ದ ಗ್ರಾಮದ ಫಂಡಿನ ಅಥವಾ ಇತರ ಆಸ್ತಿಯ ಪೈಕಿ ಮತ್ತು ಸಾಲಗಳ ಮತ್ತು ಜವಾಬದಾರಿಗಳ ಪೈಕಿ, ಕಮಿಶನರನು ಲೇಖಿ ಹುಕುಮಿನಿಂದ ಫರ್ಮಾಯಿಸಬಹುದಾದಷ್ಟು ಭಾಗವು ತಿರಿಗಿ ರಚಿಸಲ್ಪಟ್ಟ ಅಥವಾ ಸ್ಥಾಪಿಸಲ್ಪಟ್ಟ ಪಂಚಾಯತದ ಕಡೆಗೆ ಹೋಗುವದು.

(೨) ತಿರಿಗಿ ರಚಿಸಲ್ಪಟ್ಟ ಅಥವಾ ಸ್ಥಾಪಿಸಲ್ಪಟ್ಟ ಪಂಚಾಯತದ ಅಧಿಕಾರಕ್ಕೆ ಒಳಪಟ್ಟ ಕ್ಷೇತ್ರದ ಯಾವದೇ ಭಾಗದಲ್ಲಿ ಉದ್ಭವಿಸುವ ಅಥವಾ ಅದಕ್ಕೆ ಸಂಬಂಧಪಡುವ ಕರಾರುಗಳ, ಒಡಂಬಡಿಕೆಗಳ ಮತ್ತು ಇತರ ಸಂಗತಿಗಳ ಅಥವಾ ಪದಾರ್ಥಗಳ ಸಂಬಂಧದಿಂದ ಮುರಿಯಲ್ಪಟ್ಟ ಪಂಚಾಯತಕ್ಕೆ ಇದ್ದ ಹಕ್ಕುಗಳು ಮತ್ತು ಜವಾಬದಾರಿಗಳು ಮೇಲೆ ಹೇಳಿದ ಪಂಚಾಯತದ ಕಡೆಗೆ ಹೋಗುವವು.

(೩) ತಿರಿಗಿ ರಚಿಸಲ್ಪಟ್ಟ ಅಥವಾ ಸ್ಥಾಪಿಸಲ್ಪಟ್ಟ, ಪಂಚಾಯತದ ಅಧಿಕಾರಕ್ಕೆ ಒಳಪಟ್ಟ ಕ್ಷೇತ್ರದ ಯಾವದೇ ಭಾಗದ ಸಂಬಂಧದಿಂದ ಮಾಡಲ್ಪಟ್ಟ, ತೆಗೆಯಲ್ಪಟ್ಟ ಅಥವಾ ಕೂಡ್ರಿಸಲ್ಪಟ್ಟ ಯಾವದೇ ನೋಟೀಸು, ಕರವು, ಹುಕುಮು, ಲಾಯಸೆನ್ಸು, ಪರವಾನಿಗಿಯು ಕಾನೂನು ಅಥವಾ ಪೋಟ-ಕಾಯದೆಯು, ಇಂಥ ಪಂಚಾಯತದಿಂದ ಅಥವಾ ಅದರ ಸಂಬಂಧದಿಂದ ಮಾಡಲ್ಪಟ್ಟ, ತೆಗೆಯಲ್ಪಟ್ಟ ಅಥವಾ ಕೂಡ್ರಿಸಲ್ಪಟ್ಟ ಯಾವದೇ ನೋಟೀಸಿನಿಂದ, ಕರದಿಂದ, ಹುಕುಮಿನಿಂದ ಲಾಯಸೆನ್ಸಿನಿಂದ, ಪರವಾನಿಗಿಯಿಂದ, ಕಾನೂನಿನಿಂದ ಅಥವಾ ಪೋಟ-ಕಾಯದೆಯಿಂದ ರದ್ದು ಮಾಡಲ್ಪಟ್ಟ ಹೊರ್ತು ಮತ್ತು ಮಾಡಲ್ಪಡುವ ವರೆಗೆ, ಇಂಥ ಪಂಚಾಯತದಿಂದ ಅಥವಾ ಅದರ ಸಂಬಂಧದಿಂದ ಮಾಡಲ್ಪಟ್ಟದ್ದೆಂದು, ತೆಗೆಯಲ್ಪಟ್ಟದ್ದೆಂದು ಅಥವಾ ಕೂಡ್ರಿಸಲ್ಪಟ್ಟದೆಂದು ತಿಳಿಯಲ್ಪಡಬೇಕು.

೧೦೪ ಅ. ಗ್ರಾಮದಿಂದ ಕ್ಷೇತ್ರವನ್ನು ಹೊರ್ತುಪಡಿಸಿದ್ದರ ಪರಿಣಾಮವು— ೪ನೇ ಕಲಮಿನನ್ವಯದ ಜಾಹೀರನಾಮೆಯನ್ವಯ ಯಾವದೊಂದು ಗ್ರಾಮದ ಭಾಗವಾಗಿರುವ ಯಾವದೇ ಸ್ಥಾನಿಕ ಕ್ಷೇತ್ರವನ್ನು ಯಾವದೊಂದು ಗ್ರಾಮದಲ್ಲಿ ಸೇರಿಸದಿದ್ದರೆ ಅಥವಾ ಅದು ಗ್ರಾಮವಿರುತ್ತ

ದೆಂದು ಜಾಹೀರ ಮಾಡದಿದ್ದರೆ, ಇಂಥ ಕ್ಷೇತ್ರವು ಯಾವ ಗ್ರಾಮದ ಭಾಗವಾಗಿತ್ತೋ ಅಂಥ ಗ್ರಾಮದ ಪಂಚಾಯತದಲ್ಲಿ ನಿವಿಷ್ಟವಾಗಿರುವ, ಹಾಗೂ ಕಮಿಶನರನು ಲೇಖೀ ಹುಕುಮು ಮಾಡಿ ಫರ್ಮಾಯಿಸಬಹುದಾದಷ್ಟು, ಗ್ರಾಮದ ಫಂಡಿನ ಮತ್ತು ಆಸ್ತಿಯ ಭಾಗವು, ಸದರಿ ಕ್ಷೇತ್ರದ ಹಿತದ ಸಲುವಾಗಿ, ಜಿಲ್ಹಾ ಲೋಕಲ್‌ಬೋರ್ಡಿನವರಿಗೆ ಯೋಗ್ಯ ತೋರುವ ರೀತಿಯಿಂದ, ಉಪಯೋಗಿಸಲ್ಪಡುವದಕ್ಕಾಗಿ ಸದರಿ ಜಿಲ್ಹಾ ಲೋಕಲ್ ಬೋರ್ಡಿನಲ್ಲಿ ನಿವಿಷ್ಟವಾಗತಕ್ಕದ್ದು.

೧೧೫. ಯಾವದೊಂದು ಪ್ರದೇಶವು ಗ್ರಾಮವೆಂದು ಇರುವದು ನಿಂತುಹೋದದ್ದರ ಪರಿಣಾಮವು— ೪ನೇ ಕಲಮಿನನ್ವಯದ ಯಾವದೊಂದು ಪ್ರದೇಶವು ಗ್ರಾಮವಿರುವದು ನಿಂತುಹೋದ ಬಳಿಕ –

(ಅ) ಸದರಿ ಪಂಚಾಯತವು ಮುರಿಯಲ್ಪಡಬೇಕು ಮತ್ತು ಪಂಚಾಯತದ ಎಲ್ಲ ಸಭಾಸದರು ಸದರಿ ಜಾಹೀರನಾಮೆಯ ತಾರೀಖಿನಿಂದ ತಮ್ಮ ತಮ್ಮ ಹುದ್ದೆಗಳನ್ನು ಖಾಲಿ ಮಾಡಬೇಕು.

(ಬ) ಗ್ರಾಮದ ಫಂಡಿನ ಖರ್ಚಾಗದೆ ಉಳಿದ ರಕಮು ಮತ್ತು ಪಂಚಾಯತದ ಕಡೆಗೆ ಇದ್ದ ಆಸ್ತಿಯು, ಜಿಲ್ಹಾ ಲೋಕಲ್ ಬೋರ್ಡಿಗೆ ಯೋಗ್ಯ ತೋರಿದಂತೆ ಸದರಿ ಪ್ರದೇಶದ ರಹಿವಾಸಿಗಳ ಹಿತಕ್ಕಾಗಿ ಉಪಯೋಗಿಸಲ್ಪಡುವದರ ಸಲುವಾಗಿ ಜಿಲ್ಹಾ ಲೋಕಲ್‌ಬೋರ್ಡಿನ ಕಡೆಗೆ ಹೋಗುವದು.

೧೧೫ ಅ. (೧) ಈ ಅಧಿನಿಯಮದಲ್ಲಿ ಅಥವಾ ಆಯಾ ಕಾಲಕ್ಕೆ ಅಮಲಿನಲ್ಲಿರುವ ಇತರ ಯಾವದೇ ಕಾಯದೆಯಲ್ಲಿ ಯಾವದೇ ಮಜಕೂರು ಇದ್ದಾಗ್ಯೂ, ಯಾವದೇ ಸ್ಥಾನಿಕ ಕ್ಷೇತ್ರವು ೪ನೇ ಕಲಮಿನನ್ವಯದ ಜಾಹೀರನಾಮೆಯ ಮೂಲಕ ಯಾವದೊಂದು ಗ್ರಾಮವಾಗಿರುವದು ನಿಂತುಹೋದಾಗ್ಗೆ ಮತ್ತು ಸನ್ ೧೯೦೧ನೇ ಇಸವಿಯ ಮುಂಬಯಿಯ ಜಿಲ್ಹಾ ಮ್ಯುನಿಸಿಪಲ್ ಅಧಿನಿಯಮದ ೪ನೇ ಕಲಮಿನನ್ವಯ ಮ್ಯುನಸಿಪಲ್ ಜಿಲ್ಹೆಯಾಗಿರುವದೆಂದು ಜಾಹೀರ ಮಾಡಲ್ಪಟ್ಟಾಗ್ಗೆ --

(ಅ) ಸದರಿ ಪಂಚಾಯತವು ಮುರಿಯಲ್ಪಡತಕ್ಕದ್ದು ಮತ್ತು ಸದರಿ ಪಂಚಾಯತದ ಯಾವತ್ತು ಸಭಾಸದರು ಸದರೀ ಜಾಹೀರನಾಮೆಯ ತಾರೀಖಿನಿಂದ ಹುದ್ದೆಯನ್ನು ಖಾಲಿ ಮಾಡತಕ್ಕದ್ದು.

(ಬ) ಗ್ರಾಮದ ಫಂಡಿನ ಪೈಕಿ ಖರ್ಚು ಮಾಡಲ್ಪಡದೆ ಉಳಿದ ಶಿಲುಕು ಹಾಗೂ (ಪಟ್ಟಿಗಳ, ಕರಗಳ ಹಾಗು ಫೀಗಳ ಬಾಕಿಗಳನ್ನೊಳಗೊಂಡ) ಆಸ್ತಿಯು ಮತ್ತು ಇಂಥ ಜಾಹೀರನಾಮೆಯ ತಾರೀಖಿಗಿಂತ ಪೂರ್ವದಲ್ಲಿ, ಪ್ರಸಂಗವಿದ್ದಂತೆ, ಸದರೀ ಗ್ರಾಮಪಂಚಾಯತದಲ್ಲಿ ಅಥವಾ ೧೦೨ನೇ ಕಲಮಿನನ್ವಯ ಗ್ರಾಮಪಂಚಾಯತಿಯ ಅಧಿಕಾರಗಳನ್ನು ನಡಿಸುವ ಬಗ್ಗೆ ನೇಮಿಸಲ್ಪಟ್ಟ ಯಾವನೇ ಮನುಷ್ಯನಲ್ಲಿ ಅಥವಾ ಯಾರಾದರೂ ಮನುಷ್ಯರಲ್ಲಿ ನಿವಿಷ್ಟವಾಗಿದ್ದ ಯಾವತ್ತೂ ಹಕ್ಕುಗಳು ಹಾಗೂ ಅಧಿಕಾರಗಳು, ಅವುಗಳಿಗೆ ಸಂಬಂಧಪಡುವ ಯಾವತ್ತು ಬೋಜಾಗಳಿಗೆ ಹಾಗೂ ಪಾತ್ರತೆಗಳಿಗೆ ಒಳಪಟ್ಟು, ಇಂಥ ಜಾಹೀರನಾಮೆಯ ತಾರೀಖಿನಿಂದ—

(೧) ಇಂಥ ಮ್ಯುನಸಿಪಲ್ ಜಿಲ್ಹೆಯ ಸಲುವಾಗಿ ಮ್ಯುನಸಿಪಾಲಿಟಿಯು ಯೋಗ್ಯ ರೀತಿಯಿಂದ ರಚಿಸಲ್ಪಡುವವರೆಗೆ ಮಾತ್ರ ೧೯೦೧ ನೇ ಇಸವಿಯ ಮುಂಬಯಿಯ ಜಿಲ್ಹಾ ಮ್ಯುನಸಿಪಲ್ ಅಧಿನಿಯಮದ ೧೭ನೇ ಕಲಮಿನ (೨)ನೇ ಪೋಟ-ಕಲಮಿನನ್ವಯ ತನ್ನ ಮೊದಲನೇ ಸಾಮಾನ್ಯ ಸಭೆಯನ್ನು ಅದು ಜರುಗಿಸುವವರೆಗೆ, ಯಾವ ಜಿಲ್ಹಾ ಲೋಕಲ್‌ಬೋರ್ಡಿನ ಹದ್ದುಗಳೊಳಗೆ ಇಂಥ ಕ್ಷೇತ್ರವು ಸಮಾವೇಶ ಮಾಡಲ್ಪಟ್ಟಿರುತ್ತದೋ ಅಂಥ ಜಿಲ್ಹಾ ಲೋಕಲ್‌ಬೋರ್ಡಿನಲ್ಲಿ ಮತ್ತು

(೨) ತದನಂತರ, ಇಂಥ ಮ್ಯುನಸಿಪಾಲಿಟಿಯಲ್ಲಿ ನಿವಿಷ್ಟವಾಗತಕ್ಕದ್ದು.

(೩) (೧)ನೇ ಪೋಟ-ಕಲಮಿನಲ್ಲಿ ಉಲ್ಲೇಖಿಸಲಾದ ಖರ್ಚು ಮಾಡಲ್ಪಡದೆ ಉಳಿದ ಶಿಲುಕು ಮತ್ತು ಆಸ್ತಿಯು, ಸದರೀ ಮ್ಯುನಸಿಪಾಲಟಿಯು ಯೋಗ್ಯ ರೀತಿಯಿಂದ ರಚಿಸಲ್ಪಡುವವರೆಗೆ ಮತ್ತು ಅದು ತನ್ನ ಮೊದಲನೇ ಸಾಮಾನ್ಯ ಸಭೆಯನ್ನು ಜರುಗಿಸುವವರೆಗೆ, ಜಿಲ್ಹಾ ಲೋಕಲ್‌ಬೋರ್ಡಿಗೆ ಯೋಗ್ಯವೆಂದು ತೋರಬಹುದಾದಂಥ ರೀತಿಯಿಂದ ಸದರೀ ಕ್ಷೇತ್ರದ ನಿವಾಸಿಗಳ ಹಿತದ ಸಲುವಾಗಿ ಉಪಯೋಗಿಸಲ್ಪಡತಕ್ಕದ್ದು.

(೪) (೧)ನೇ ಪೋಟ-ಕಲಮಿನಲ್ಲಿ ಠರಾಯಿಸಲ್ಪಟ್ಟಂತೆ ಸದರೀ ಜಿಲ್ಹಾ ಲೋಕಲ್ ಬೋರ್ಡಿನಲ್ಲಿ ಹಾಗೂ ಸದರೀ ಮ್ಯುನಸಿಪಾಲಟಿಯಲ್ಲಿ ನಿವಿಷ್ಟವಾಗುವ ಪಟ್ಟಿಗಳ, ಕರಗಳ ಹಾಗೂ ಫೀಗಳ ಯಾವದೇ ಬಾಕಿಗಳು, ಯಾವ ಅಧಿನಿಯಮದನ್ವಯ ಇಂಥ ಜಿಲ್ಹಾ ಲೋಕಲ್‌ಬೋರ್ಡು ಅಥವಾ ಮ್ಯುನಸಿಪಾಲಟಿಯು ರಚಿಸಲ್ಪಟ್ಟಿರುವದೋ ಅಂಥ ಅಧಿನಿಯಮದ ಠರಾವುಗಳನ್ವಯ ಸದರೀ ಪಟ್ಟಿಗಳು, ಕರಗಳು ಹಾಗೂ ಫೀಗಳು ಆ ಅಧಿನಿಯಮ

ದನ್ವಯ ಹೊರಿಸಲ್ಪಟ್ಟಿದ್ದರೆ ಹಾಗೂ ವಸೂಲ ಮಾಡಲ್ಪಡಲಿಕ್ಕೆ ಪಾತ್ರವಿದ್ದಿದ್ದರೆ ಹೇಗೋ ಹಾಗೆಯೇ. ವಸೂಲ ಮಾಡಲ್ಪಡಲಿಕ್ಕೆ ಪಾತ್ರವಿರತಕ್ಕದ್ದು.

ಆದರೆ ಗೊತ್ತುಪಡಿಸುವದೇನಂದರೆ, ಇಂಥ ಪಟ್ಟಿಗಳ ಕರಗಳ ಹಾಗೂ ಫೀಗಳ ಬಾಕಿಗಳನ್ನು ವಸೂಲ ಮಾಡುವ ಬಗ್ಗೆ ಯಾವ ತಾರೀಖಿನ ದಿವಸ ಅವು, ಪ್ರಸಂಗವಿದ್ದಂತೆ, ಸದರೀ ಜಿಲ್ಹಾ ಲೋಕಲ್ ಬೋರ್ಡಿನಲ್ಲಿ ಅಥವಾ ಮ್ಯುನಸಿಪಾಲಟಿಯಲ್ಲಿ ನಿವಿಷ್ಟವಾಗುತ್ತವೋ ಅಂಥ ತಾರೀಖಿನಿಂದ ಮೂರು ವರ್ಷಗಳ ಅವಧಿಯೊಳಗಾಗಿ ಕ್ರಮಗಳು ಕೈಕೊಳ್ಳಲ್ಪಡತಕ್ಕದ್ದು

(೪) ಈ ಕಲಮಿನ ಠರಾವುಗಳನ್ನು ಅಮಲಿನಲ್ಲಿ ತರುವ ಕೆಲಸವಲ್ಲಿ ಯಾವದೇ ತೊಂದರೆಯು ಉಂಟಾದರೆ, ರಾಜ್ಯಸರಕಾರದವರು, ಹುಕುಮು ಮಾಡಿ, ಪ್ರಸಂಗದ ಮೇರೆಗೆ ಅವಶ್ಯವಿರಬಹುದಾದಂತೆ, ಸದರೀ ತೊಂದರೆಯನ್ನು ತೆಗೆದು ಹಾಕುವ ಬಗ್ಗೆ ಅವಶ್ಯವಿರುವದೆಂದು ತಮಗೆ ತೋರುವಂಥ ಯಾವದೇ ಕೃತ್ಯವನ್ನು ಮಾಡಬಹುದು

೧೦೬. ನ್ಯಾಯಪಂಚಾಯತಗಳ ಮೇಲೆ ಮತ್ತು ಅವುಗಳ ಮುಂದೆ ಚಾಲೂ ಇರುವ ಕೆಲಸಗಳ ಮೇಲೆ, ಪಂಚಾಯತಗಳು ಮುರಿಯಲ್ಪಟ್ಟಿದ್ದರ ಅಥವಾ ರದ್ದುಮಾಡಲ್ಪಟ್ಟಿದ್ದರ ಅಥವಾ ನ್ಯಾಯಪಂಚಾಯತದ ನ್ಯಾಯವಿಧಾಯಕ ಅಧಿಕಾರಗಳನ್ನು ಹಿಂತೆಗೆದುಕೊಂಡದ್ದರ ಪರಿಣಾಮವು (೧) ಕಲಮು ೧೦೩, ೧೦೪ ಅಥವಾ ೧೦೫ ಅಥವಾ (೧೦೫ ಅ) ಇವರನ್ವಯ ಯಾವದೊಂದು ಪಂಚಾಯತವು ಮುರಿಯಲ್ಪಟ್ಟಾಗ ಅಥವಾ ರದ್ದುಮಾಡಲ್ಪಟ್ಟಾಗ, ಯಾವ ಗ್ರಾಮದ ಬಗ್ಗೆ ಪಂಚಾಯತವು ಮುರಿಯಲ್ಪಟ್ಟಾಗ, ಯಾವ ಗ್ರಾಮದ ಬಗ್ಗೆ ಪಂಚಾಯತವು ಸ್ಥಾಪಿಸಲ್ಪಟ್ಟಿತ್ತೋ ಆ ಗ್ರಾಮದ ಬೆಂಚು ಅಥವಾ ಯಾವ ಬಾಬತಿನಲ್ಲಿ ಯಾವದೊಂದು ಗ್ರಾಮದ ಬೆಂಚಿನ ಯಾವತ್ತು ನ್ಯಾಯನಿರ್ಣಯದ ಅಧಿಕಾರಗಳನ್ನು ೪೭ನೇ ಕಲಮಿನ (೨)ನೇ ಪೋಟ-ಕಲಮಿನ ವಿಶೇಷ ಠರಾವಿನನ್ವಯ ಹಿಂತೆಗೆದುಕೊಳ್ಳಲಾಗಿದೆಯೋ ಆ ಬಾಬತಿನಲ್ಲಿ ಅಂಥ ಬೆಂಚು ರದ್ದು ಮಾಡಲ್ಪಟ್ಟಿತೆಂದು ತಿಳಿಯಲ್ಪಡಬೇಕು ಮತ್ತು ಗ್ರಾಮದ ಬೆಂಚಿನ ಯಾವತ್ತು ಸಭಾಸದರು, ಪ್ರಸಂಗದ ಪ್ರಕಾರ, ಮುರಿಯೋಣದರ ಅಥವಾ ರದ್ದಿಯಾತಿಯ ಅಥವಾ ನ್ಯಾಯನಿರ್ಣಯದ ಅಧಿಕಾರಗಳನ್ನು ಹಿಂತೆಗೆದುಕೊಳ್ಳಲಾದ ತಾರೀಖಿನಿಂದ ತಮ್ಮ ಹುದ್ದೆಗಳನ್ನು ಖಾಲಿ ಮಾಡಬೇಕು.

(೨) (೧)ನೇ ಪೋಟ-ಕಲಮಿನನ್ವಯ ಗ್ರಾಮದ ಬೆಂಚು ಮುರಿಯ ಲ್ಪಟ್ಟಾಗ—

(೧) ೮೭ನೇ ಕಲಮಿನ (೨)ನೇ ಮತ್ತು (೩)ನೇ ಪೋಟ-ಕಲಮಿನ ಠರಾವುಗಳು, ಪ್ರಸಂಗದ ಪ್ರಕಾರ, ಡಿಸ್ಟ್ರಿಕ್ಟ ಕೋರ್ಟ-ರ ಅಥವಾ ಸೆಶನ್ಸ ಕೋರ್ಟರ್ ೮೭ನೇ ಕಲಮಿನ (೧)ನೇ ಪೋಟ-ಕಲಮಿನ ನ್ವಯ ಇಂಥ ದಾವೆ ಅಥವಾ ಖಟ್ಲೆಗಳನ್ನು ತೆಗೆದುಹಾಕುವ ಸಂಬಂಧದ ಹುಕುಮು ಮಾಡಿದ್ದರೆ ಹ್ಯಾಗೋ ಹಾಗೆಯೇ, ಗ್ರಾಮದ ಬೆಂಚಿನ ಮುಂದೆ ನಡೆದಿರುವ ಯಾವನೇ ದಾವೆ ಅಥವಾ ಖಟ್ಲೆಗಳ ಸಂಬಂಧದಿಂದ ಲಾಗೂ ಆಗುತ್ತವೆಂದು ತಿಳಿಯಲ್ಪಡಬೇಕು ; ಮತ್ತು

(೨) ಎಲ್ಲ ಚಾಲೂ ಇರುವ ಕೆಲಸಗಳು ಮತ್ತು ಹುಕುಮುನಾಮೆಗಳ ಅಥವಾ ದಾವೆಯೊಳಗಿನ ಹುಕುಮುಗಳ ಅಮಲಬಜಾವಣಿಯ ಸಂಬಂಧದ ಮತ್ತು ಖಟ್ಲೆಗಳೊಳಗಿನ ದಂಡಗಳನ್ನು ಮತ್ತು ಲುಕ್ಸಾನ ಭರಪಾಯಿಯನ್ನು ವಸೂಲು ಮಾಡುವ ಸಂಬಂಧದ ಎಲ್ಲ ಅರ್ಜಿಗಳು, ಸದರಿ ಗ್ರಾಮದ ಬೆಂಚು ಸ್ಥಾಪಿಸಲ್ಪಟ್ಟಿರದಿದ್ದರೆ ಸದರಿ ದಾವೆಗಳ ಮತ್ತು ಖಟ್ಲೆಗಳ ಇನಸಾಫು ಮಾಡುವ ಅಧಿಕಾರವು ಯಾರಿಗೆ ಇರುತ್ತಿತ್ತೋ ಅಂಥ, ಪ್ರಸಂಗದ ಪ್ರಕಾರ ಸಬಾರ್ಡಿನೇಟ ಜಜ್ಜನ ಅಥವಾ ಮ್ಯಾಜಿಸ್ಟ್ರೇಟನ ಕೋರ್ಟಿನ ಕಡೆಗೆ ವರ್ಗ ಮಾಡಲ್ಪಡಬೇಕು, ಮತ್ತು ಪ್ರಸಂದ ಪ್ರಕಾರ ಸಬಾರ್ಡಿನೇಟ್ ಜಜ್ಜನು ಅಥವಾ ಮ್ಯಾಜಿಸ್ಟ್ರೇಟನು, ಇಂಥ ಚಾಲೂ ಕೆಲಸಗಳ ಮತ್ತು ಅರ್ಜಿಗಳ ವ್ಯವಸ್ಥೆಯನ್ನು ಯಾತರಿಂದ ಇಂಥ ಚಾಲೂ ಕೆಲಸಗಳು ಅಥವಾ ಅರ್ಜಿಗಳು ಉಂಟಾಗಿರುವವೋ ಅಂಥ ದಾವೆ ಅಥವಾ ಖಟ್ಲೆಯ ಸುನಾವಣಿಯನ್ನು ಮತ್ತು ನಿಕಾಲೆಯನ್ನು, ಇಂಥ ಸಬಾರ್ಡಿನೇಟ್ ಜಜ್ಜನು ಅಥವಾ ಮ್ಯಾಜಿಸ್ಟ್ರೇಟನು ಮಾಡಿದ್ದರೆ ಹ್ಯಾಗೋ ಹಾಗೆಯೇ ಮಾಡಬೇಕು.

(೩) ಯಾವದೊಂದು ಸ್ಥಾನಿಕ ಕ್ಷೇತ್ರವು ಯಾವದೊಂದು ಗ್ರಾಮದಿಂದ ಹೊರ್ತುಪಡಿಸಲ್ಪಟ್ಟರೆ ಮತ್ತು ಹೀಗೆ ಹೊರ್ತುಪಡಿಸಿದ ಕ್ಷೇತ್ರದ ಬಗ್ಗೆ ಯಾವದೇ ಪಂಚಾಯತವನ್ನು ಸ್ಥಾಪಿಸದಿದ್ದರೆ,

(೨)ನೇ ಪೋಟ-ಕಲಮಿನ ಠರಾವುಗಳು, ಸಾಧ್ಯವಿದ್ದ ಮಟ್ಟಿಗೆ, ಸದರಿ ಕ್ಷೇತ್ರಕ್ಕೆ ಸಂಬಂಧಿಸಿರುವ ಗ್ರಾಮದ ಪಂಚಾಯತದ ಮುಂದೆ ನಡೆದಿರಬಹುದಾದ ಯಾವವೇ ದಾವೆಗಳ, ಖಟ್ಲೆಗಳ, ಕಾಯದೆಯ ಕೆಲಸಗಳ ಅಥವಾ ಅರ್ಜಿಗಳ ವಿಷಯದಲ್ಲಿ, ಇಂಥ ದಾವೆಗಳಿಗೆ, ಖಟ್ಲೆಗಳಿಗೆ, ಕಾಯದೆಯ ಕೆಲಸಗಳಿಗೆ ಮತ್ತು ಅರ್ಜಿಗಳಿಗೆ ಸಂಬಂಧವಿದ್ದ ಮಟ್ಟಿಗೆ, ಗ್ರಾಮದ ಬೆಂಚು ಮುರಿಯಲ್ಪಟ್ಟಿದ್ದರೆ ಹ್ಯಾಗೋ ಹ್ಯಾಗೆಯೇ ಲಾಗೂ ಆಗುವವು.

೧೦೭. (೧) ಪ್ರಾಂತಿಕ ಸರಕಾರದವರ ಅಧಿಕಾರ— ಸನ್ ೧೯೨೩ನೇ ಇಸವಿಯ ಮುಂಬಯಿಯ ಲೋಕಲ್‌ಬೋರ್ಡುಗಳ ವಿಷಯದ ಆಕ್ಟಿನ ನ್ವಯ ಜಿಲ್ಲಾ ಲೋಕಲ್‌ಬೋರ್ಡುಗಳ ಮೇಲೆ ಪ್ರಾಂತಿಕ ಸರಕಾರಕ್ಕೆ ಇರುವ ಮತ್ತು ಅದು ನಡಿಸುವ ಅಧಿಕಾರವೇ ಮತ್ತು ನಿರ್ಬಂಧವೇ ಈ ಆಕ್ಟಿಗೆ ಸಂಬಂಧಪಟ್ಟ ಎಲ್ಲ ಸಂಗತಿಗಳಲ್ಲಿ ಅವುಗಳ ಮೇಲೆ ಅದಕ್ಕೆ ಇರುವವು ಮತ್ತು ಅದು ಅವುಗಳನ್ನು ನಡಿಸುವದು.

(೨) ಈ ಆಕ್ಟಿಗೆ ಸಂಬಂಧಿಸಿದ ಎಲ್ಲ ವಿಷಯಗಳಲ್ಲಿ ಪ್ರಾಂತಿಕ ಸರಕಾರದವರು, ಕಮಿಶನರರು ಮತ್ತು ಕಲೆಕ್ಟರರು, ಅನುಕ್ರಮವಾಗಿ ಕಮಿಶನರರ, ಕಲೆಕ್ಟರರ ಮತ್ತು ಅವರ ಕೆಳಗಿನ ಅಧಿಕಾರಿಗಳ ಮೇಲೆ, ಅವರಿಗೆ ಅವರ ಮೇಲೆ ಸಾಮಾನ್ಯ ಮುಲಕೀ ಕಾರಭಾರದಲ್ಲಿ ಇರುವ ಹಾಗೂ ಅವರು ನಡಿಸುವ ಅಧಿಕಾರವನ್ನೇ ಉಳ್ಳವರಾಗಿರಬೇಕು

೧೦೭ ಅ. ಪ್ರಾಂತಿಕ ಸರಕಾರದವರು ವ್ಯವಹರಣೆಗಳ ಕಾಗದ ಪತ್ರಗಳನ್ನು ಬೇಡಬಹುದು – ಪ್ರಾಂತಿಕ ಸರಕಾರದವರು, ( ಗ್ರಾಮದ ಬೆಂಚಿನ ವ್ಯವಹರಣೆಗಳ ಮೇಲಿನ ಅಪೀಲಿನಲ್ಲಿಯ, ಪುನರ್ವಿಚಾರಣೆಯ ಅಥವಾ ಬರೆದು ಕಳಿಸಿದ ವಿಷಯದ ನ್ಯಾಯವಿಚಾರಣೆಯ ಕೆಲಸಗಳ ಬಗ್ಗೆ ಡಿಸ್ಟ್ರಿಕ್ಟ ಕೋರ್ಟು ಅಥವಾ ಸೆಶನ್ಸ ಕೋರ್ಟು ನಡಿಸಿದ ವ್ಯವಹರಣೆಗಳ ಹೊರ್ತಾಗಿ) ಯಾವನೇ ಅಮಲದಾರನು ನಡಿಸಿದ ವ್ಯವಹರಣೆಗಳ ಕಾಗದ ಪತ್ರಗಳನ್ನು, ಪಾಸು ಮಾಡಲ್ಪಟ್ಟ ಯಾವದೇ ಹುಕುಮು ಕಾಯದೇಶಿರವಿರುವದರ ಬಗ್ಗೆ ಅಥವಾ ಆ ಹುಕುಮು ಯೋಗ್ಯವಿರುತ್ತದೆಂಬ ಬಗ್ಗೆ ತಮ್ಮ, ಖಾತ್ರಿ ಮಾಡಿಕೊಳ್ಳುವ ಉದ್ದೇಶದಿಂದ ಬೇಡಬಹುದು ಮತ್ತು ತಮಗೆ ಯೋಗ್ಯ ತೋರಿದಂತೆ ಸದರಿ ಹುಕುಮನ್ನು ತಿದ್ದಬಹುದು ಅಥವಾ ಸುಧಾರಿಸಬಹುದು.

## ಗ್ರಾಮಪಂಚಾಯತಿ ಕಾಯದೆಯ ಸಿಂಹಾವಲೋಕನೆ

ಪಂಚಾಯತಿಯ (ಬೆಂಚಿನ) ರಚನೆ ಹೇಗೆ ಇರಬೇಕು, ಅದರ ಸ್ಥಾಪನೆ ಎಲ್ಲಿ ಎಲ್ಲಿ ಆಗಬೇಕು, ಅದರ ಅಧಿಕಾರಗಳಾವವು, ಕರ್ತವ್ಯಗಳಾವವು, ಅವುಗಳನ್ನು ಪೂರ್ಣ ಮಾಡಲು ಅವಶ್ಯವಾದ ಸಾಧನ-ಸಾಹಿತ್ಯ ಎಲ್ಲಿಂದ ದೊರಕುವದು, ಕರಗಳನ್ನು ಹೇಗೆ ಕಟ್ಟಬೇಕು ಮತ್ತು ಅವುಗಳನ್ನು ಹೇಗೆ ವಸೂಲು ಮಾಡಬೇಕು ಮೊದಲಾದ ವಿಷಯಗಳು ಇಲ್ಲಿಯವರೆಗೆ ಹೇಳಲಾದವು. ಪಂಚಾಯತಿಯ ಯಂತ್ರವು ಆರಂಭವಾಯಿತು. ಮತ್ತು ಕೆಲಸವನ್ನು ಮಾಡಹತ್ತಿತು. ಆದರೆ ಅದು ಒಂದೇಸವನೆ ನಡದೇ ನಡೆಯುವದೋ? ಒಂದು ನೇಳೆ ನಡೆಯದಿದ್ದರೆ? ಯಂತ್ರದ ಮೇಲೆ ಅದರಂತೆ ಸಂಸ್ಥೆಯ ಮೇಲೆ ದೇಖರೇಖ ಮೇಲ್ವಿಚಾರಣೆ) ಬೇಕು. ನಿಯಂತ್ರಣ ಬೇಕು, ನಿರ್ಬಂಧಬೇಕು. ಬೆಂಚಿನ (ಪಂಚಾಯತಿ ಸಂಸ್ಥೆಯ) ಮೇಲಿನ ಕಾಯದೇಶೀರ ನಿಯಂತ್ರಣದ ವಿಚಾರ ಈ ಬಾಬಿನಲ್ಲಿ ಮಾಡಿರುತ್ತದೆ. ಅದು ಕ್ರಮದಂತೆ ಕೊನೆಯ ಮಹತ್ವದ ಅವಶ್ಯ ವಿಷಯವಾಗಿದೆ ಜಿಲ್ಲಾ ಲೋಕಲ್ ಬೋರ್ಡು ಜಿಲ್ಲೆಯೊಳಗಿನ ಮುಖ್ಯವಾದ ಸ್ಥಾನಿಕ ಸ್ವರಾಜ್ಯ ಸಂಸ್ಥೆಯಾಗಿದೆ. ಗ್ರಾಮಪಂಚಾಯತಿ (ಬೆಂಚು) ಗಳು ಅದರ ಶಾಖೆಗಳಾಗಿರುವವು. ಈ ಶಾಖೆಗಳ ಮೇಲೆ ಮುಖ್ಯ ಸಂಸ್ಥೆಯ ನಿಯಂತ್ರಣವು ಇರತಕ್ಕದ್ದೇ. (೧) ಜಿಲ್ಲಾ ಲೋಕಲಬೋರ್ಡು ಬೆಂಚಿನ ನಿಯಂತ್ರಣ ಸಂಸ್ಥೆಯಿದ್ದಂತೆ, ಜಿಲ್ಲೆಯೊಳಗಿನ ಯಾವತ್ತು ಸುಸ್ಥಿತಿಯ ಸಲುವಾಗಿ ಸರಕಾರಕ್ಕೆ ಹೊಣೆಗಾರನಾಗಿರುವ (೨) ಕಲೆಕ್ಟರನು ನಿಯಂತ್ರಕ (ಸರಕಾರದ) ಅಧಿಕಾರಿಯಾಗಿರುವನು. ಕಮೀಶನರನು ಕಲೆಕ್ಟರನ ಮೇಲಿನ ನಿಯಂತ್ರಣಾಧಿಕಾರಿಯು, ಮತ್ತು ಅವನ ಮೇಲೆ ಪ್ರಾಂತಿಕ ಸರಕಾರ, ಈ ಬಗೆಯ ಈ ನಿಯಂತ್ರಣ ಪರಂಪರೆಯು ಈ ಬಾಬಿನಲ್ಲಿ ಹೇಳಲಾಗಿದೆ ಅಂದರ, ತಮ್ಮ ಗ್ರಾಮದೊಳಗಿನ ಬೆಂಚಿನ ಕಾರಭಾರ ಅನಿಯಂತ್ರಿತ, ಅನಿರ್ಬಂಧ, ಮನಬಂದಂತೆ ನಡಿಯಬಾರದೆಂದು, ಸಾರ್ವಜನಿಕ ಹಣದ ವ್ಯಯವು ಯೋಗ್ಯ ರೀತಿಯಿಂದಾಗಬೇಕು, ಅನ್ಯಾಯವಾಗಬಾರದು, ಸಂಸ್ಥೆಯು ಚೆನ್ನಾಗಿ ನಡೆಯಬೇಕು, ಅಂತೇ ಇದೆಲ್ಲ ಯೋಜನೆಯು ಇರುತ್ತದೆ. ಇದರಿಂದ ಅನ್ಯಾಯವಾದ ಬಾಬಿನ ಬಗ್ಗೆ ವರಿಷ್ಠರ ಕಡೆಗೆ ದಾದ (ವಿಚಾರಣೆ) ಬೇಡಲಿಕ್ಕೆ ಬರುವದಿಲ್ಲ. ಇಲ್ಲವೆ ಯಾರಾದ ಈ ಬಗೆಯ ದಾದ ಬೇಡಿದಿದ್ದಾಗ್ಯೂ, ಅನ್ಯಾಯದ ಪರಿಮಾರ್ಜನೆಯು ಸ್ವತಂತ್ರ ರೀತಿಯಿಂದ ಆಗಲಿಕ್ಕಿಲ್ಲ. ಇಂಥನೇ ಮೊದಲಾದ ಯಾವ ಬಾಬುಗಳೂ ಉಳಿಯಲಾರವು.

---

## ಬಾಬು ೧೨

## ಕಾನೂನುಗಳು ಮತ್ತು ಪೋಟ-ಕಾಯದೆಗಳು

೧೦೮. ಕಾನೂನುಗಳು.—(೧) ಪ್ರಾಂತಿಕ ಸರಕಾರದವರು ಸರಕಾರೀ ಗ್ಯಾಝೇಟಿನಲ್ಲಿ ಜಾಹೀರನಾಮೆ ಕೊಟ್ಟು ಈ ಕೆಳಗಿನ ಸಂಗತಿಗಳ ಬಗ್ಗೆ ಕಾನೂನುಗಳನ್ನು ಮಾಡಬಹುದು—

(ಅ) ೪ನೇ ಕಲಮಿನನ್ವಯು ಕಲೆಕ್ಟರನು ಮಾಡಬಹುದಾದ ಚೌಕಸಿಯು ರೀತಿಯುನ್ನು ನಿಯಮನಗೊಳಿಸುವ ಬಗ್ಗೆ; (ಪು ೧೨)

(ಬ) ಕಲಮು ೬ ಇದರನ್ವಯು, ಪ್ರತಿಯೊಂದು ಗ್ರಾಮಪಂಚಾಯತದಲ್ಲಿ ಹೆಂಗಸರ, ಮುಸಲ್ಮಾನರ, ಹರಿಜನರ ಅಥವಾ ಹಿಂದುಳಿದ ವರ್ಗಗಳ ಪ್ರತಿನಿಧಿಗಳ ಸಲುವಾಗಿ ಕಾದಿಡಬೇಕಾದ ಸ್ಥಳಗಳ ಸಂಖ್ಯೆಯುನ್ನು ಗೊತ್ತುಪಡಿಸುವ ಬಗ್ಗೆ ( ಪು ೧೬ ) ( ಪರಿ ಅ. ಪು ೨೦೯ )

(ಕ) ಕಲಮು ೭ ಇದರನ್ವಯು, ಸಭಾಸದರ ಚುನಾವಣೆಯುನ್ನು ಹ್ಯಾಗೆ ಮಾಡಬೇಕೆಂಬ ರೀತಿಯುನ್ನು ಗೊತ್ತುಪಡಿಸುವ ಬಗ್ಗೆ ; ( ಪು ೬೧ )

(ಡ) ೨೩ನೇ ಕಲಮಿನನ್ವಯು, ಸರಪಂಚನ, ಡೆಪ್ಯೂಟಿ ಸರಪಂಚನ ಅಥವಾ ಪಂಚಾಯತದ ಸಭಾಸದರ ಹುದ್ದೆಯು ಖಾಲಿ ಆದ ಬಗ್ಗೆ ಕೊಡಬೇಕಾದ ನೋಟೀಸಿನ ರೀತಿಯುನ್ನು ಕ್ರಮಪಡಿಸುವ ಬಗ್ಗೆ ; ( ಪು ೩೮ )

(ಡ ೧) ೨೬ ಅ ಕಲಮಿನನ್ವಯು, ಯಾವ ಮನುಷ್ಯರ ಮೇಲೆ ಹಾಗೂ ಕಡೆಯಿಂದ ಮತ್ತು ಯಾವ ರೀತಿಯಿಂದ ೨೬ ಅ ಕಲಮಿನ ೧ನೆಯ ಪೋಟ-ಕಲಮಿನ (ಸ) ರಕಮಿನನ್ವಯುದ ಪಹರೆಯ ಖರ್ಚುಗಳನ್ನು ಕೂಡ್ರಿಸತಕ್ಕದ್ದೋ ಹಾಗೂ ವಸೂಲ ಮಾಡತಕ್ಕದ್ದೋ ಅಂಥ ಸದರಿ ಗ್ರಾಮದಲ್ಲಿ ಮನುಷ್ಯರನ್ನು ಹಾಗೂ ರೀತಿಯುನ್ನು ಗೊತ್ತುಪಡಿಸುವ ಬಗ್ಗೆ ;

(ಇ) ೩೨ನೇ ಕಲಮಿನನ್ವಯು, ಪಂಚಾಯತವು ಪಡೆದ ಮತ್ತು ಅವಕ್ಕೆ ಸಿಕ್ಕಿದ ಯಾವತ್ತು ಫಂಡುಗಳನ್ನು ಇಡಬೇಕಾದ ತಾಬೆಯುನ್ನು ಗೊತ್ತುಪಡಿಸುವ ಬಗ್ಗೆ , ( ಪು ೭೫ )

(ಇಇ) ೩೩ನೇ ಕಲಮಿನನ್ವಯು, ಪಂಚಾಯತದ ಸೆಕ್ರೆಟರಿಯು ಲಾಯುಖಿಗಳನ್ನು, ಅಧಿಕಾರಗಳನ್ನು, ಕರ್ತವ್ಯಗಳನ್ನು, ಪ್ರತಿಫಲವನ್ನು ಮತ್ತು ನೌಕರಿಯು ಶರ್ತುಗಳನ್ನು ಶಿಸ್ತಿನ ಸಂಬಂಧದ ವಿಷಯುಗಳನ್ನು ಹಿಡಿದು ಗೊತ್ತುಪಡಿಸುವ ಬಗ್ಗೆ; (ಪು. ೭೯)

(ಫ) ಕಲಮು ೩೬ ಇದರನ್ವಯು, ವಾರ್ಷಿಕ ಬಜೆಟುಗಳನ್ನು ಪತ್ರಕಗಳನ್ನು ಮತ್ತು ಲೆಖ್ಖಗಳನ್ನು ಸಾಗರ ಮಾಡುವ

ತಾರೀಖನ್ನು ಮತ್ತು ಅವುಗಳ ನಮೂನೆಯನ್ನು ಮತ್ತು ಗ್ರಾಮದ ರಹಿವಾಸಿಗಳ ಸಭೆಯನ್ನು ಕರೆಯಬೇಕಾದ ರೀತಿಯನ್ನು ಮತ್ತು ವೇಳೆಯನ್ನು ಗೊತ್ತುಪಡಿಸುವ ಬಗ್ಗೆ ; ( ಪರಿಶಿಷ್ಟ ಬ. )

"(ಗ) ೩೭ನೇ ಕಲಮಿನನ್ವಯ, ಗ್ರಾಮದ ಬೆಂಚನ್ನು ರಚಿಸುವ ಮೆಂಬರರು ಯಾವ ರೀತಿಯಿಂದ ಚುನಾಯಿಸಲ್ಪಡತಕ್ಕದ್ದೋ ಆ ರೀತಿಯನ್ನು ಗೊತ್ತುಪಡಿಸುವ ಬಗ್ಗೆ ಮತ್ತು ಸದರಿ ಕಲಮಿನ ಪೋಟ-ಕಲಮು (೬) ರಲ್ಲಿ ನಮೂದಿಸಿದ ಸಂಗತಿಗಳ ಪೈಕಿ ಯಾವನೇ ಸಂಗತಿಗಳನ್ನು ಕ್ರಮಪಡಿಸುವ ಬಗ್ಗೆ ; ( ಪು. ೧೦೫ )

(ಗಗ) ೩೭ ಬ ಕಲಮಿನನ್ವಯ, ಯಾವದೊಂದು ಪಂಚಾಯತದ ಜ್ಯುಡಿಶಿಯಲ್ ಕಾರಕೂನನಾಗಿ ಕೆಲಸ ಮಾಡುವ ಆ ಪಂಚಾಯತದ ಸೆಕ್ರೆಟರಿಯು ಮಾಡಬೇಕಾದ ಇತರ ಕರ್ತವ್ಯಗಳನ್ನು ಗೊತ್ತುಪಡಿಸುವ ಬಗ್ಗೆ ," ( ಪು ೧೩೩ )

(ಹ) ಕಲಮು ೪೯ ಇದರನ್ವಯ, ದಾವೆಗಳನ್ನು ಮತ್ತು ಖಟ್ಲೆಗಳನ್ನು ಮಾಡುವಾಗ್ಗೆ ಕೊಡತಕ್ಕ ಫೀಗಳನ್ನು ಗೊತ್ತುಪಡಿಸುವ ಬಗ್ಗೆ ; ( ಪು. ೧೫೦ )

(ಐ) ಕಲಮುಗಳು ೬೦, ೭೨, ೮೦ ಮತ್ತು ೮೫ ಇವುಗಳನ್ವಯ, ದಾವೆಗಳ ಮತ್ತು ಖಟ್ಲೆಗಳ ಬಗ್ಗೆ ರಜಿಸ್ಟರುಗಳಲ್ಲಿ ನೋಂದಿಸಬೇಕಾದ ತಪಶೀಲುಗಳನ್ನು ಗೊತ್ತುಪಡಿಸುವ ಬಗ್ಗೆ ; ( ಪು. ೧೧೮–೧೧೫ )

(ಜೆ) ಕಲಮು ೬೨ ಇದರನ್ವಯ, ಸಮನ್ಸಿನ ನಮೂನೆಯನ್ನು ಗೊತ್ತುಪಡಿಸುವ ಬಗ್ಗೆ ; ( ಪು. ೧೫೧ )

(ಕೆ) ೬೯ನೇ ಕಲಮಿನನ್ವಯ, ಗ್ರಾಮದ ಬೆಂಚು ಮಾಡಬೇಕಾದ ಚೌಕಸಿಯ ರೀತಿಯನ್ನು ಕ್ರಮಪಡಿಸುವ ಬಗ್ಗೆ; (ಪು. ೧೫೮)

(ಲ) ೭೬ನೇ ಕಲಮಿನನ್ವಯ, ಯಾವದೊಂದು ದಾವೆಯಲ್ಲಿ ಅಥವಾ ಖಟ್ಲೆಯಲ್ಲಿ ಕೊಡಲ್ಪಡಬೇಕೆಂದು ಗ್ರಾಮದ ಬೆಂಚು ಫರ್ಮಾಯಿಸಬಹುದಾದ ಫೀಗಳ ಸ್ಕೇಲನ್ನು ಠರಾಯಿಸುವ ಬಗ್ಗೆ ; ( ಪು. ೧೬೩ )

(ಮ) ೮೯ನೇ ಕಲಮಿನನ್ವಯು, ಸದರಿ ಕಲಮಿನಲ್ಲಿ ಹೇಳಿದ ಕರಗಳು ಮತ್ತು ಫೀಗಳು ವಸೂಲು ಮಾಡಲ್ಪಡಬೇಕಾದ ರೀತಿಯುನ್ನು ಹಾಗೂ ದರವನ್ನು ಠರಾಯಿಸುವ ಬಗ್ಗೆ; (ಪು. ೧೭೩ )

(ಮ ೧) ೮೯ನೆಯ ಕಲಮಿನ (೨೮ ಅ) ಪೋಟ-ಕಲಮಿನನ್ವಯ ೨ನೆಯ ಪೋಟಕಲಮಿನಲ್ಲಿ ನಮೂದಿಸಲಾದ ಕರಗಳ ಅಥವಾ ಫೀಗಳ ಪೈಕಿ ಯಾವದೇ ಒಂದು ಕರವನ್ನು ಅಥವಾ ಫೀಯುನ್ನು ಪ್ರತಿಯೊಂದು ಪಂಚಾಯತದ ಸಲುವಾಗಿ ಠರಾಯಿಸುವ ಬಗ್ಗೆ.

(ನ) ೯೦ನೇ ಕಲಮಿನನ್ವಯು, ೮೯ನೇ ಕಲಮಿನಲ್ಲಿ ಹೇಳಿದ ಕರ ಅಥವಾ ಫೀಗಳನ್ನು ವಸೂಲ ಮಾಡುವ ಸಂಬಧದ ಪರವಾವಧಿಯ ದರವನ್ನು ಠರಾಯಿಸುವ ಬಗ್ಗೆ; ( ಪು. ೧೭೭ )

(ನ೧) ೯೧ನೇ ಕಲಮಿನ (೨)ನೇ ಪೋಟ-ಕಲಮಿನನ್ವಯು, ತಪ್ಪಿದವನಿಗೆ ಹಾಜರ ಮಾಡಬೇಕಾದ ಲೇಖದ ನಮೂನೆಯುನ್ನು ಗೊತ್ತುಪಡಿಸುವ ಬಗ್ಗೆ ; ( ಪು. ೧೭೭ )

(ನ ೨) ೯೧ನೇ ಕಲಮಿನ (೩)ನೇ ಪೋಟ-ಕಲಮಿನನ್ವಯ ವಾರಂಟಿನ ನಮೂನೆಯುನ್ನು ಮತ್ತು ತಪ್ಪಿದವನ ಜಂಗಮ ಆಸ್ತಿಯು ಜಪ್ತಿಯು, ಲಿಲಾವಿನ ಮತ್ತು ಮಾರಾಟದ ರೀತಿಯುನ್ನು ಗೊತ್ತುಪಡಿಸುವ ಬಗ್ಗೆ ; ( ಪು. ೧೭೮ )

(ಓ) ೯೧ನೆಯ ಕಲಮಿನ ೪ನೆಯ ಪೋಟ ಕಲಮಿನನ್ವಯು, ಮಾಗಣಿಯು ಲೇಖಗಳ ಬಗ್ಗೆ, ಹಿಡಿದಿಡಲ್ಪಟ್ಟ, ಯಾವದೇ ದನಕರುಗಳ ಜಪ್ತಿಯು ಬಗ್ಗೆ ಹಾಗೂ ಅವುಗಳನ್ನು ಸಾಕುವ ಖರ್ಚಿನ ಬಗ್ಗೆ ಫೀಗಳ ದರಗಳನ್ನು ಗೊತ್ತುಪಡಿಸುವ ಬಗ್ಗೆ ಮತ್ತು. ಕಲಮು ೯೧ ಇದರ (೫)ನೇ ಪೋಟ-ಕಲಮಿನನ್ವಯ ಪಂಚಾಯತಕ್ಕೆ ಬರತಕ್ಕ ಕರಗಳನ್ನು ಮತ್ತು ಇತರ ರಕಮುಗಳನ್ನು ವಸೂಲ ಮಾಡುವ ಬಗ್ಗೆ ಗ್ರಾಮದ ಅಮಲದಾರರಿಗೆ ಕೊಡತಕ್ಕ ಪ್ರತಿಫಲವನ್ನು ಮತ್ತು ಇಂಥ ಪ್ರತಿಫಲವನ್ನು ಕೊಡತಕ್ಕ ರೀತಿಯುನ್ನು ಗೊತ್ತುಪಡಿಸುವ ಬಗ್ಗೆ ; ( ಪು. ೧೭೭ )

(ಪ) ಕಲಮು ೯೩ ಇದರನ್ವಯು, ಜಿಲ್ಲಾ ಲೋಕಲ್‌ಬೋರ್ಡು ಪಂಚಾಯತಕ್ಕೆ ಯಾವ ಶರ್ತುಗಳ ಮೇಲೆ ಸಾಲವನ್ನು ಕೊಡಬಹುದೋ ಅಂಥ ಶರ್ತುಗಳನ್ನು ಗೊತ್ತುಪಡಿಸುವ ಬಗ್ಗೆ; (ಪು ೧೮೧)

(ಕ್ಯೂ) ೯೫ನೇ ಕಲಮಿನನ್ವಯು, ನೇಮಿಸಲ್ಪಟ್ಟ ಅಮಲದಾರನಿಗೆ ಅಥವಾ ಮನುಷ್ಯನಿಗೆ ಒಪ್ಪಿಸಿಕೊಡಬಹುದಾದ ಅಥವಾ ಅವನು ನಡಿಸಬಹುದಾದ ಅಥವಾ ಮಾಡಬಹುದಾದ ಅಧಿಕಾರಗಳನ್ನು ಮತ್ತು ಕರ್ತವ್ಯಗಳನ್ನು ಠರಾಯಿಸುವ ಬಗ್ಗೆ; (ಪು ೧೮೩)

(ರ) ಕಲಮು ೧೧೨ ಇದರ (೩)ನೇ ಮತ್ತು (೪)ನೇ ಪೋಟ-ಕಲಮುಗಳನ್ವಯು ಡಿಸ್ಟ್ರಿಕ್ಟ ಕೋರ್ಟು ಅಥವಾ ಸೆಶನ್ಸ ಕೋರ್ಟು ಅದರಲ್ಲಿ ಹೇಳಲ್ಪಟ್ಟ ಅಧಿಕಾರಗಳನ್ನು ಒಪ್ಪಿಸಿ ಕೊಡುವದನ್ನು ಕ್ರಮಪಡಿಸುವ ಬಗ್ಗೆ.

(ರರ) ಯಾವದೊಂದು ಪಂಚಾಯತದಿಂದ ಅಥವಾ ಸದರಿ ಪಂಚಾಯತದ ಒಪ್ಪಿಗೆಯನ್ನು ಪಡೆದು ಸದರಿ ಪಂಚಾಯತದ ಅಮಲದಾರರಿಂದ ಹಾಗೂ ನೌಕರರಿಂದ ಸ್ಥಾಪಿಸಲ್ಪಡಬಹುದಾದಂಥ ಯಾವದೇ ಪ್ರಾವಿಡೆಂಟ ಫಂಡಿಗೆ, ಇಂಥ ಕಾನೂನುಗಳಲ್ಲಿ ಠರಾಯಿಸಲ್ಪಡಬಹುದಾದಂಥ ದರಗಳಿಂದ ಹಾಗೂ ಅಂಥ ಶರ್ತುಗಳಿಗೊಳಪಟ್ಟು ವರ್ಗಣಿಯನ್ನು ಕೊಡಲು ಅಧಿಕಾರ ಕೊಡುವ ಬಗ್ಗೆ;

(ಸ) ಗೊತ್ತುಪಡಿಸಲ್ಪಡಬಹುದಾದ ಇತರ ಯಾವದೇ ವಿಷಯುದ ಬಗ್ಗೆ.

(೨) ಪೋಟ-ಕಲಮು (೧)ರನ್ವಯು ಮಾಡಬೇಕಾದ ಕಾನೂನುಗಳು ಮೊದಲು ಪ್ರಕಟಿಸಲ್ಪಡಬೇಕೆಂಬ ಶರ್ತಿಗೆ ಒಳಪಡುವವು.

ಆದರೆ ಗೊತ್ತುಪಡಿಸುವದೇನಂದರೆ, ೧ನೆಯು ಪೋಟ-ಕಲಮಿನ (ಬ) ರಕಮಿನನ್ವಯುದ ಕಾನೂನಗಳು ಮುಂಚಿತವಾಗಿ ಪ್ರಸಿದ್ಧಿಸಲ್ಪಡದೆ ಮಾಡಲ್ಪಡಬಹುದು.

(೩) (೧)ನೇ ಪೋಟ-ಕಲಮಿನನ್ವಯ ಮಾಡಲ್ಪಟ್ಟ ಕಾನೂನುಗಳು, ಪ್ರಾಂತಿಕ ಕಾಯದೆಮಂಡಳದ ಪ್ರತಿಯೊಂದು ಚೇಂಬರದ ಮುಂದೆ ಅದರ ಲಗತು ಮುಂದಿನ ಅಧಿವೇಶನದ ಕಾಲಕ್ಕೆ ಇಡಲ್ಪಡಬೇಕು, ಮತ್ತು ಅವುಗಳು ಎರಡೂ ಚೇಂಬರಗಳಿಂದ ಸಮ್ಮತಿಸ್ಪಲ್ಪ ಒಂದು ಠರಾವಿನಿಂದ ಸುಧಾರಿಸಲ್ಪಡಲಿಕ್ಕೆ ಅಥವಾ ರದ್ದು ಮಾಡಲ್ಪಡಲಿಕ್ಕೆ ಪಾತ್ರವಾಗುವವು, ಇಂಥ ಕಾನೂನು, ಸರಕಾರೀ ಗೆಝೇಟಿನಲ್ಲಿ ಜಾಹೀರನಾಮೆ ಪ್ರಸಿದ್ಧಿಸಲ್ಪಟ್ಟ ತರುವಾಯ, ಆ ಪ್ರಕಾರ ಸುಧಾರಿಸಲ್ಪಟ್ಟಿತು ಎಂಬದಾಗಿ ತಿಳಿಯಲ್ಪಡಬೇಕು.

ಆದರೆ ಗೊತ್ತುಪಡಿಸುವದೇನಂದರೆ, ಪ್ರಾಂತಿಕ ಸರಕಾರದವರ ಅಭಿಪ್ರಾಯದಂತೆ, ಇಂಥ ಸುಧಾರಣೆಯ ಅಥವಾ ರದ್ದಿಯಾತಿಯ ಮೂಲಕ ಈ ಆಕ್ಟಿನ ಯಾವದೇ ಉದ್ದೇಶಗಳು ನಿಷ್ಫಲವಾಗುವ ಸಂಭವವಿದ್ದರೆ, ಪ್ರಾಂತಿಕ ಸರಕಾರದವರು, ಸರಕಾರೀ ಗೆಝೇಟಿನಲ್ಲಿ ಜಾಹೀರನಾಮೆ ಕೊಟ್ಟು, ಸದರಿ ಸುಧಾರಣೆಯು ಅಥವಾ ರದ್ದಿಯಾತಿಯು ಅಮಲಿನಲ್ಲಿ ಬರಲಿಕ್ಕಿಲ್ಲವೆಂದು ಜಾಹೀರ ಮಾಡಬಹುದು, ಮತ್ತು ಆ ಬಳಿಕ ಸದರಿ ಕಾನೂನು, ಅದು ಸುಧಾರಿಸಲ್ಪಡದಿದ್ದರೆ ಅಥವಾ ರದ್ದು ಮಾಡಲ್ಪಟ್ಟಿರದಿದ್ದರೆ ಹ್ಯಾಗೋ ಹಾಗೆಯೇ ಅಮಲಿನಲ್ಲಿ ಬರುವದು.

೧೦೯. ಪೋಟ-ಕಾಯದೆಗಳು — (೧) ಜಿಲ್ಹಾ ಲೋಕಲಬೋರ್ಡು ಕಮಿಶನರನ ಮುಂಚಿತವಾದ ಮಂಜೂರಿಯಿಂದ, ಆಕ್ಟಿನ ಕಾರಣಗಳನ್ನು ಸಾಮಾನ್ಯವಾಗಿ ನೆರವೇರಿಸುವ ಬಗ್ಗೆ ಪೋಟ-ಕಾಯದೆಗಳನ್ನು ಮಾಡಬಹುದು.

(೨) ಮೇಲೆ ಹೇಳಿದ ಠರಾವಿನ ಸಾಮಾನ್ಯ ವ್ಯಾಪ್ತಿಗೆ ಬಾಧೆ ಬಾರದೆ, ಜಿಲ್ಹಾ ಲೋಕಲಬೋರ್ಡು ಈ ಕೆಳಗಿನ ಸಂಗತಿಗಳ ಬಗ್ಗೆ ಪೋಟ-ಕಾಯದೆಗಳನ್ನು ಮಾಡಬಹುದು.

(ಅ) ಕಲಮು ೧೯ ಇದರನ್ವಯ, ಪಂಚಾಯತದ ಸಭೆಗಳ ವೇಳೆಯನ್ನು ಮತ್ತು ಸ್ಥಳವನ್ನು ಗೊತ್ತುಪಡಿಸುವ ಬಗ್ಗೆ ಮತ್ತು ಸಭಾಭರ್ತಿಯನ್ನು ಗೊತ್ತುಪಡಿಸುವ ಬಗ್ಗೆ ;

(ಬ) ೨೦ನೇ ಕಲಮಿನನ್ವಯ, ಡೆಪ್ಯುಟಿ ಸರಪಂಚನು ನಡಿಸಬಹುದಾದ ಸರಪಂಚನ ಅಧಿಕಾರ ಮತ್ತು ಕರ್ತವ್ಯಗಳನ್ನು ಗೊತ್ತುಪಡಿಸುವ ಬಗ್ಗೆ ;

(ಕ) ಕಲಮು ೨೬ ಇದರನ್ವಯ—

(೧) ಕುಡಿಯುವದರ ಸಲುವಾಗಿ ಉಪಯೋಗಿಸಲ್ಪಡುವ ನೀರಿನ ಎಲ್ಲ ಉಗಮುಗಳನ್ನು ಶುದ್ಧಪಡಿಸುವ ಬಗ್ಗೆ ಮತ್ತು ಅವುಗಳನ್ನು ಕೆಡದಂತೆ ಸಂರಕ್ಷಿಸುವ ಬಗ್ಗೆ ;

(೨) ಯಾವದೇ ಹಳ್ಳದಿಂದ, ಕೆರೆಯಿಂದ, ಬಾವಿಯಿಂದ ಅಥವಾ ಇತರ ಉಗಮುದಿಂದ ನೀರನ್ನು ಕುಡಿಯುವ ಕಾರಣದ ಸಲುವಾಗಿ ಉಪಯೋಗಿಸುವದರಿಂದ ಅಥವಾ ಒಯ್ಯುವದರಿಂದ ಆರೋಗ್ಯಕ್ಕೆ ಅಪಾಯವು ಅಥವಾ ಬೇನೆಯು ಉಂಟಾಗುವ ಸಂಭವವಿದ್ದಾಗ್ಗೆ, ಇಂಥ ಉಪಯೋಗವನ್ನು ಅಥವಾ ಒಯ್ಯುವದನ್ನು ಮನಾಯಿ ಮಾಡುವ ಬಗ್ಗೆ, ಮತ್ತು ಇಂಥ ಕೆರೆಯನ್ನು ಅಥವಾ ಬಾವಿಯನ್ನು ತುಂಬಿ ಅಥವಾ ಮುಚ್ಚಿ ಅಥವಾ ಯೋಗ್ಯವೆಂದು ತೋರುವ ಇತರ ಯಾವದೇ ರೀತಿಯಿಂದ ಇಂಥ ಉಪಯೋಗಕ್ಕೆ ಅಥವಾ ಒಯ್ಯುವದಕ್ಕೆ ಅಡ್ಡಿ ಮಾಡುವ ಬಗ್ಗೆ ;

(೩) ಸಾರ್ವಜನಿಕ ಆರೋಗ್ಯಕ್ಕೆ, ಸುಖಕ್ಕೆ ಅಥವಾ ಅನುಕೂಲತೆಗೆ ಬಾಧೆ ತರುವಂಥ ರೀತಿಯಿಂದ ಅಥವಾ ಸ್ಥಳಗಳಲ್ಲಿ ಗೊಬ್ಬರವನ್ನು, ಕಸವನ್ನು ಅಥವಾ ಇತರ ತ್ರಾಸದಾಯಕ ಪದಾರ್ಥಗಳನ್ನು ಒಗೆಯುವದನ್ನು, ಅಥವಾ ಕೂಡಿಹಾಕುವದನ್ನು ಮನಾಯಿ ಮಾಡುವ ಬಗ್ಗೆ ;

(೪) ತ್ರಾಸದಾಯಕ ಉದ್ಯೋಗಗಳನ್ನು ಅಥವಾ ವ್ಯಾಪಾರಗಳನ್ನು ಕ್ರಮಪಡಿಸುವ ಬಗ್ಗೆ ;

(೫) ಹೆಣಗಳನ್ನು ಸುಟ್ಟು ಅಥವಾ ಹುಗಿದು ಅವುಗಳ ವ್ಯವಸ್ಥೆ ಮಾಡುವ ಬಗ್ಗೆ ;

(೬) ಆರೋಗ್ಯಕ್ಕೆ ಅಪಾಯವಾಗಿರುವ ಅಥವಾ ನೆರೆಯವರಿಗೆ ತ್ರಾಸವಾಗಿರುವಂಥ ಮಣ್ಣನ್ನು ಅಗಿಯುವ ಬಗ್ಗೆ ಮತ್ತು ಅಗಿದದ್ದನ್ನು ಮತ್ತು ತಗ್ಗುಗಳನ್ನು ತುಂಬುವ ಬಗ್ಗೆ ;

(೭) ಕೊಳೆಯುಂಥ ಗಿಡಗಂಟೆಗಳನ್ನು ತೆಗೆದು ಹಾಕುವ ಬಗ್ಗೆ ;

(೮) ಅಪಾಯಕರವಾದ ಅಥವಾ ಹಾಳಬಿದ್ದ ಇಮಾರತುಗಳನ್ನು ದುರಸ್ತ ಮಾಡುವ ಬಗ್ಗೆ ಮತ್ತು ತೆಗೆದು ಹಾಕುವ ಬಗ್ಗೆ ;

(೯) ಹವೆಯಾಡುವ ಸಂಬಂಧದಿಂದ ಅಥವಾ ಓಣಿಗಳನ್ನು ಮಾಡುವ ಮತ್ತು ಗೊತ್ತುಪಡಿಸುವ ಸಂಬಂಧದಿಂದ ಯೋಗ್ಯ ತಜವೀಜುಗಳಿಲ್ಲದೆ ಇಮಾರತುಗಳನ್ನು ಕಟ್ಟುವದಕ್ಕೆ ಪ್ರತಿಬಂಧ ಮಾಡುವ ಬಗ್ಗೆ ;

(೧೦) ಜಾತ್ರೆಗಳ ಮತ್ತು ಸಂತೆಗಳ ಮೇಲೆ ನಿರ್ಬಂಧವಿಡುವ ಬಗ್ಗೆ ಮತ್ತು ಮಾರ್ಕೆಟುಗಳನ್ನು, ಕಟುಕರ ಮನೆಗಳನ್ನು, ಗಾಡಿಗಳು ನಿಲ್ಲುವ ಸ್ಥಳಗಳನ್ನು ಕ್ರಮಪಡಿಸುವ ಬಗ್ಗೆ ;

(೧೧) ಮಾರಾಟಕ್ಕಿಟ್ಟ ಅಯೋಗ್ಯವಾದ ಆಹಾರವನ್ನು ಮತ್ತು ಪೇಯವನ್ನು ತಪಾಸಿಸುವ ಬಗ್ಗೆ ಮತ್ತು ನಾಶಮಾಡುವ ಬಗ್ಗೆ ; ಮತ್ತು

(೧೨) ಸ್ವಚ್ಛತೆಯನ್ನು ಮತ್ತು ಕಸಗೂಡಿಸುವದನ್ನು ಸಾಮಾನ್ಯವಾಗಿ ಕ್ರಮ ಪಡಿಸುವ ಬಗ್ಗೆ ;

(ಡ) ಕಲಮು ೨೮ ಇದರನ್ವಯ, ಲೋಕಲಬೋರ್ಡುಗಳಿಂದ ಕೆಲಸಕ್ಕೆ ಹಚ್ಚಲ್ಪಟ್ಟ ಕೂಲಿಕಾರರ, ಧರ್ಮಶಾಲೆಗಳ ದುರಸ್ತಿಗಳ ಕೊಂಡವಾಡೆಗಳ ವ್ಯವಸ್ಥೆ ಮಾಡುವ ಹಾಗೂ ಅವುಗಳನ್ನು ಸುಸ್ಥಿತಿಯಲ್ಲಿಡುವ ಬಗ್ಗೆ, ಮತ್ತು ಜಿಲ್ಲಾ ಲೋಕಲ್‌ಬೋರ್ಡಿನಿಂದ ಒಪ್ಪಿಸಿ ಕೊಡಲ್ಪಟ್ಟ ಕಾಮುಗಿರಿಗಳನ್ನು ನೆರವೇರಿಸುವ ಬಗ್ಗೆ, ಕಾಲಿವೆಯ ನೀರನ್ನು ಹಂಚಿಕೊಡುವ ಬಗ್ಗೆ ಮತ್ತು ಪ್ರಾಂತಿಕ ಸರಕಾರದವರಿಂದ ನೇಮಿಸಿ ಕೊಡಲ್ಪಟ್ಟ ಇತರ ಕರ್ತವ್ಯಗಳನ್ನು ಮಾಡುವ ಬಗ್ಗೆ ;

(೩) ಮೇಲಿನ ಪೋಟ-ಕಲಮುಗಳನ್ವಯ ಮಾಡಿದ ಯಾವದೇ ಪೋಟ-ಕಾಯದೆಯಲ್ಲಿ, ಅದನ್ನು ಮುರಿದರೆ ಈ ಕೆಳಗಿನ ಶಿಕ್ಷೆಗಳಾಗಬೇಕೆಂದು ಠರಾವು ಮಾಡಲ್ಪಡಬಹುದು —

(ಅ) ೨೦ ರೂಪಾಯಿಗಳ ವರೆಗೆ ದಂಡ, ಅಥವಾ

(ಬ) ಅದನ್ನು ಮುರಿಯುವದು ಚಾಲು ಇದ್ದರೆ, ಮೊದಲನೇ ಸಾರೆ ಮುರಿದ ಬಗ್ಗೆ ಅಪರಾಧ ಸಾಬೀತಿಯು ಆದ ಬಳಿಕ ಆ ಮುರಿಯೋಣವು ಚಾಲು ಇರುವ ಮುದತಿನಲ್ಲಿ ಪ್ರತಿದಿವಸ ೧ ರೂಪಾಯಿಯ ವರೆಗೆ ದಂಡ.

---

## ಬಾಬು ೧೩.

## ಕಿರಕೋಳು.

೧೧೦. ಲುಕ್ಸಾನು, ನಾಶ ಅಥವಾ ದುರುಪಯೋಗದ ಬಗ್ಗೆ ಸಭಾಸದರ ಜವಾಬದಾರಿಯು — (೧) ಪಂಚಾಯತದ ಪ್ರತಿಯೊಬ್ಬ ಸಭಾಸದನು, ಅವನು ಶಾಮೀಲಾಗಿದ್ದ ಅಥವಾ ಅವನ ಗೈರವರ್ತನದಿಂದ ಅಥವಾ ಸಭಾಸದನೆಂದು ತನ್ನ ಕರ್ತವ್ಯವನ್ನು ಮಾಡಲಿಕ್ಕೆ ಬಹಳವಾಗಿ ತಾತ್ಸಾರ ಮಾಡಿದ ಮೂಲಕ ಉಂಟಾದ ಪಂಚಾಯತದ ಯಾವದೇ ಹಣದ ಅಥವಾ ಇತರ ಆಸ್ತಿಯ ಲುಕ್ಸಾನಿನ, ನಷ್ಟದ ಅಥವಾ ದುರುಪಯೋಗದ ಬಗ್ಗೆ ಸ್ವತಃ ಜವಾಬದಾರನಿರುವನು.

(೨) ವಿರುದ್ಧವಾಗಿ ಕಾರಣವನ್ನು ತೋರಿಸಲಿಕ್ಕೆ ಸಂಬಂಧಪಟ್ಟ ಸಭಾಸದನಿಗೆ ಸಾಕಷ್ಟು ಸಂಧಿಯನ್ನು ಕೊಟ್ಟನಂತರ, ಪಂಚಾಯತದ ಯಾವದೇ ಹಣದ ಅಥವಾ ಇತರ ಆಸ್ತಿಯ ಲುಕ್ಸಾನು, ನಷ್ಟ ಅಥವಾ ದುರುಪಯೋಗವು, ಸದರಿ ಸಭಾಸದನ ಗೈರವರ್ತನದ ಅಥವಾ ಬಹಳ ತಾತ್ಸಾರದ ಪರಿಣಾಮವೆಂದು ಕಲೆಕ್ಟರನಿಗೆ ಖಾತ್ರಿಯಾದರೆ, ಕಲೆಕ್ಟರನು ಲೇಖೀ ಹುಕುಮಿನಿಂದ, ಇಂಥ ಲುಕ್ಸಾನಿನ, ನಷ್ಟದ ಅಥವಾ ದುರುಪಯೋಗದ ಬಗ್ಗೆ ಪಂಚಾಯತಕ್ಕೆ ತುಂಬಿಕೊಡಬೇಕಾದ ರಕಮನ್ನು, ಒಂದು ನಿಶ್ಚಿತ ತಾರೀಖಿನ ಪೂರ್ವದಲ್ಲಿ, ಪಂಚಾಯತಕ್ಕೆ ಕೊಡಲಿಕ್ಕೆ ಇಂಥ ಸಭಾಸದನಿಗೆ ಫರ್ಮಾಯಿಸಬೇಕು.

(೩) ಸದರಿ ರಕಮು ಈ ರೀತಿಯಿಂದ ಕೊಡಲ್ಪಡದಿದ್ದರೆ, ಕಲೆಕ್ಟರನು ಅದನ್ನು ಭೂಮಿಯ ಮಹಸೂಲಿನ ಬಾಕಿಯೆಂದು ವಸೂಲ ಮಾಡಿ ಗ್ರಾಮದ ಫಂಡಿಗೆ ಜಮಾ ಮಾಡಬೇಕು.

(೪) ಪೋಟ-ಕಲಮು (೨)ರನ್ವಯದ ಯಾವನೊಬ್ಬ ಸಭಾಸದನ ಜವಾಬದಾರಿಯ ವಿಷಯದಲ್ಲಿ ಮತ್ತು ಅವನಿಂದ ವಸೂಲಾಗತಕ್ಕ ರಕಮಿನ ವಿಷಯದಲ್ಲಿ ಕಲೆಕ್ಟರನ ನಿಕಾಲೆಯು ಕಮಿಶನರನ ಕಡೆಗೆ ನಡೆಯುವ ಅಪೀಲಿಗೆ ಒಳಪಡುವದು.

೧೧೧. ಪಂಚಾಯತ, ಗ್ರಾಮದ ಬೆಂಚು ಮುಂತಾದ್ದರ ವಿರುದ್ಧ ಕೆಲಸ ನಡಿಸುವದಕ್ಕೆ ಮನಾಯಿ ಮತ್ತು ಕೆಲಸ ಪ್ರಾರಂಭಿಸುವ ಪೂರ್ವದಲ್ಲಿ ಮುಂಚಿತವಾದ ನೋಟೀಸು ಕೊಡುವದು— (೧) ಈ ಆಕ್ಟಿನನ್ವಯ ಅಥವಾ ಯಾವದೇ ಕಾನೂನಿನ್ವಯ ಅಥವಾ ಪೋಟ-ಕಾಯದೆಯನ್ವಯ ಪ್ರಾಮಾಣಿಕವಾಗಿ ಮಾಡಲ್ಪಟ್ಟ ಯಾವದೇ ಸಂಗತಿಯ ವಿಷಯದಲ್ಲಿ ಪಂಚಾಯತದ ಅಥವಾ ಗ್ರಾಮದ ಬೆಂಚಿನ ಹುಕುಮಿನನ್ವಯ ಕೆಲಸ ಮಾಡುತ್ತಿದ್ದ ಅದರ ಯಾವನೇ ಸಭಾಸದನ, ಅಮಲದಾರನ, ನೌಕರನ ಅಥವಾ ಏಜಂಟನ ವಿರುದ್ಧ ಯಾವದೇ ಕೆಲಸವು ನಡಿಯಲಾರದು.

(೨) ಈ ಆಕ್ಟಿನನ್ವಯ ಮಾಡಲ್ಪಟ್ಟ ಅಥವಾ ಮಾಡಲ್ಪಟ್ಟಿತೆಂದು ಹೇಳಲ್ಪಡುವ ಯಾವದೇ ಸಂಗತಿಯ ಬಗ್ಗ ಯಾವದೇ ಪಂಚಾಯತದ ಅಥವಾ ಗ್ರಾಮದ ಬೆಂಚಿನ ವಿರುದ್ಧ ಅಥವಾ ಅದರ ಹುಕುಮಿನನ್ವಯ ಕೆಲಸ ಮಾಡುತ್ತಿರುವ ಇಂಥ ಪಂಚಾಯತದ ಯಾವನಾದರೂ ಸಭಾಸದನ, ಅಮಲದಾರನ, ನೌಕರನ ಅಥವಾ ಎಜಂಟನ ವಿರುದ್ಧ, ಪಂಚಾಯತದ ಅಥವಾ ಗ್ರಾಮದ ಬೆಂಚಿನ ಕಚೇರಿಯಲ್ಲಿ ಮತ್ತು ಯಾವನ ಮೇಲೆ ಕೆಲಸ ನಡಿಸುವ ಉದ್ದೇಶವಿರುವದೋ ಅಂಥ ಅದರ ಸಭಾಸದನ, ಅಮಲದಾರನ, ನೌಕರನ ಅಥವಾ ಏಜಂಟನ ವಾಸಸ್ಥಳದಲ್ಲಿ ಸಹ ಲೇಖೀ ನೋಟೀಸು ಬಿಡಲ್ಪಟ್ಟ ಅಥವಾ ತಪ್ಪಿಸಲ್ಪಟ್ಟ ನಂತರ ಮುಂದೆ ಮೂರು ತಿಂಗಳು ಮುಗಿಯುವ ವರೆಗೆ, ಯಾವದೇ ಕೆಲಸವನ್ನು ತರಲಿಕ್ಕಾಗದು ಕೆಲಸದ ಸ್ವರೂಪ, ಬೇಡಿದ ಸಹಾಯಗಳ ಸ್ವರೂಪ, ಮಾಗಣಿ ಮಾಡಿದ ಲುಕ್ಸಾನ ಭರಪಾಯಿಯ ರಕಮು ಮತ್ತು ಕೆಲಸವನ್ನು ನಡಿಸಲಿಚ್ಛಿಸುವ ಮನುಷ್ಯನ ಹೆಸರು ಮತ್ತು ವಾಸಸ್ಥಳ ಇವುಗಳನ್ನು ನೋಟೀಸಿನಲ್ಲಿ ಹೇಳಿರಬೇಕು

(೩) ಇಂಥ ಪ್ರತಿಯೊಂದು ಕೆಲಸವು, ಸದರಿ ಕೆಲಸದ ಕಾರಣ ವುಂಟಾದ ನಂತರ ಆರು ತಿಂಗಳೊಳಗೆ ಪ್ರಾರಂಭಿಸಲ್ಪಡಬೇಕಲ್ಲದೆ ಅದರ ನಂತರವಲ್ಲ.

(೪) ಪೋಟ-ಕಲಮು (೨) ರನ್ವಯ ನೋಟೀಸು ಕೊಡಲ್ಪಟ್ಟ ಯಾವದೇ ಪಂಚಾಯತವು ಅಥವಾ ಗ್ರಾಮದ ಬೆಂಚು ಅಥವಾ ಯಾವನೇ ಮನುಷ್ಯನು, ಕೆಲಸವು ನಡಿಸಲ್ಪಡುವ ಪೂರ್ವದಲ್ಲಿ, ಸಾಕಷ್ಟು ಲುಕಸಾನ ಭರಪಾಯಿಯನ್ನು ಕೊಡುತ್ತೇನೆಂದು ವಾದಿಗೆ ಹೇಳಿ ಆ ರಕಮನ್ನು ಕೋರ್ಟಿನಲ್ಲಿ ಕೊಟ್ಟರೆ, ಹೀಗೆ ಹಾಜರ ಮಾಡಲ್ಪಟ್ಟ ರಕಮಿಗಿಂತ ಹೆಚ್ಚಿಗೆ ವಾದಿಗೆ ದೊರೆಯಲಾರದು. ಹೀಗೆ ರಕಮು ಹಾಜರ ಮಾಡಲ್ಪಟ್ಟ ನಂತರ ಪ್ರತಿವಾದಿಗೆ ಉಂಟಾದ ಯಾವತ್ತು ವೆಚ್ಚವನ್ನು ಸಹ ವಾದಿಯು ಕೊಡಬೇಕು.

೧೧೨. ಅಧಿಕಾರಗಳನ್ನು ಒಪ್ಪಿಸಿಕೊಡುವದು— (೧) ಪ್ರಾಂತಿಕ ಸರಕಾರದವರು ಸರಕಾರೀ ಗೆಝೇಟನಲ್ಲಿ ಜಾಹೀರನಾಮೆ ಕೊಟ್ಟು, ಕಮಿಶನರನಿಗೆ ಅಥವಾ ೯೫ನೇ ಕಲಮಿನ (೩)ನೇ ಪೋಟ-ಕಲಮಿನನ್ವಯ ವಿಶೇಷವಾಗಿ ಅಧಿಕಾರ ಪಡೆದ ಯಾವನೊಬ್ಬ ಅಮಲದಾರನನ್ನು ಹಿಡಿದು ಯಾವನೇ ಅಮಲದಾರನಿಗೆ, ಪಂಚಾಯತಗಳ ಸಂಬಂಧದಿಂದ ಬಾಬು ೬ ರನ್ವಯ ಗ್ರಾಮದ ಬೆಂಚುಗಳ ಸಂಬಂಧದ ಅಧಿಕಾರಗಳ ಹೊರ್ತು ಈ ಆಕ್ಟಿನನ್ವಯ ಪ್ರಾಂತಿಕ ಸರಕಾರದವರಿಂದ ನಡಿಸಲ್ಪಡಬಹುದಾದ ಯಾವನೇ ಅಧಿಕಾರಗಳನ್ನು ನಡಿಸಲಿಕ್ಕೆ ಅಧಿಕಾರ ಕೊಡಬಹುದು.

(೨) ಇದಲ್ಲದೆ ಪ್ರಾಂತಿಕ ಸರಕಾರದವರು ಸರಕಾರೀ ಗೆಝೇಟನಲ್ಲಿ ಜಾಹೀರನಾಮೆ ಕೊಟ್ಟು, ಪಂಚಾಯತಿಗಳ ಸಂಬಂಧದಿಂದ, ಯಾವದೊಂದು ಜಿಲ್ಹಾ ಲೋಕಲ್‌ಬೋರ್ಡು ಮುರಿಯಲ್ಪಟ್ಟಾಗ ಅಥವಾ ರದ್ದು ಮಾಡಲ್ಪಟ್ಟಾಗ, ಈ ಆಕ್ಟಿನ ಠರಾವುಗಳನ್ವಯ ಜಿಲ್ಹಾ ಲೋಕಲ್ ಬೋರ್ಡಿಗೆ ಕೊಡಲ್ಪಟ್ಟ ಯಾವನೇ ಅಧಿಕಾರಗಳನ್ನು ನಡಿಸಲಿಕ್ಕೆ ಯಾವನೇ ಮನುಷ್ಯನಿಗೆ ಅಧಿಕಾರ ಕೊಡಬಹುದು.

(೩) ಈ ಸಂಬಂಧದಿಂದ ಮಾಡಲ್ಪಟ್ಟ ಕಾನೂನುಗಳಿಗೊಳಪಟ್ಟು, ಡಿಸ್ಟ್ರಿಕ್ಟ ಕೋರ್ಟು ಸಬಾರ್ಡಿನೇಟ ಜಜ್ಜನಿಗೆ, ಸದರಿ ಸಬಾರ್ಡಿನೇಟ ಜಜ್ಜನ ಹುಕುಮತಿನಲ್ಲಿರುವ ಯಾವದೊಂದು ಗ್ರಾಮದೊಳಗಿನ ಗ್ರಾಮದ

ಬೆಂಚಿನ ಸಂಬಂಧದಿಂದ ಈ ಆಕ್ಟಿನನ್ವಯದ ದಾವೆಗಳ ಸಂಬಂಧದಿಂದ ಡಿಸ್ಟ್ರಿಕ್ಟ ಕೋರ್ಟು ನಡಿಸಬೇಕಾದ ಅಧಿಕಾರಗಳನ್ನು ಒಪ್ಪಿಸಿ ಕೊಡ ಬಹುದು.

(೪) ಈ ಸಂಬಂಧದಿಂದ ಮಾಡಲ್ಪಟ್ಟ ಕಾನೂನುಗಳಿಗೊಳಪಟ್ಟು, ಸೆಶನ್ಸ ಕೋರ್ಟು ಸನ್ ೧೮೯೮ ನೇ ಇಸವಿಯ ಕ್ರಿಮಿನಲ್ ಪ್ರೊಸೀಜರ ಕೋಡಿನ ೪೦೭ನೇ ಕಲಮಿನನ್ವಯ ಅಪೀಲಿನ ಹುಕುಮತನ್ನು ನಡಿಸುವ ಒಂದನೇ ವರ್ಗದ ಮ್ಯಾಜಿಸ್ಟ್ರೇಟನಿಗೆ, ಸದರಿ ಮ್ಯಾಜಿಸ್ಟ್ರೇಟನ ಸದರಿ ಹುಕುಮತಿನಲ್ಲಿರುವ ಗ್ರಾಮದೊಳಗಿನ ಯಾವದೊಂದು ಗ್ರಾಮದ ಬೆಂಚಿನ ಸಂಬಂಧವಾಗಿ ಈ ಆಕ್ಟಿನನ್ವಯದ ಖಟ್ಲೆಗಳ ಸಂಬಂಧದಿಂದ ತಾನು ನಡಿಸ ಬೇಕಾದ ಅಧಿಕಾರಗಳನ್ನು ಒಪ್ಪಿಸಿಕೊಡಬಹುದು.

(೫) ಪ್ರಾಂತಿಕ ಸರಕಾರದರ ಸಾಮಾನ್ಯ ಅಥವಾ ವಿಶೇಷ ಹುಕು ಮುಗಳಿಗೆ ಒಳಪಟ್ಟು, ಕಲೆಕ್ಟರನು, ಮಾಮಲೇದಾರ ಅಥವಾ ಮಾಲಕರಿಯ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಯಾವನೊಬ್ಬ ಅಮಲದಾರನಿಗೆ, ಈ ಆಕ್ಟಿನನ್ವಯ ಕಲೆಕ್ಟರನು ನಡಿಸಬೇಕಾದ ೪ನೇ ಕಲಮಿನನ್ವಯದ ಅಧಿಕಾರಗಳ ಹೊರ್ತು ಇತರ ಅಧಿಕಾರಗಳನ್ನು ಒಪ್ಪಿಸಿಕೊಡಬಹುದು.

೧೧೩. ಪಂಚಾಯತವು ಮಾಡಬೇಕಾದ ಸ್ಥಾನಿಕ ಚೌಕಶಿ ಮತ್ತು ರಿಪೋರ್ಟುಗಳು — ಈ ಕೆಳಗಿನ ಬಾಬತುಗಳ ಪೈಕಿ ಯಾವದೇ ಬಾಬತಿನಲ್ಲಿ ಚೌಕಶಿ ಮಾಡುವದು ಮತ್ತು ರಿಪೋರ್ಟು ಮಾಡುವದು ಪ್ರತಿಯೊಂದು ಪಂಚಾಯತದ ಕರ್ತವ್ಯವಿರಬೇಕು:—

(ಅ) ಸನ್ ೧೮೯೮ನೇ ಇಸವಿಯ ಫೌಜದಾರಿ ಕೆಲಸ ನಡಿಸುವ ರೀತಿ ವಿಷಯದ ಕಾಯದೆಯ ೨೦೨ನೇ ಕಲಮಿನನ್ವಯ ಯಾವದೊಂದು ಮುಂಚಿತವಾದ ಸ್ಥಾನಿಕ ಚೌಕಶಿಯು ಯಾವದೊಂದು ಪಂಚಾಯತದಿಂದ ಮಾಡಲ್ಪಡಬೇಕು ಎಂದು ಯಾವನೊಬ್ಬ ಮ್ಯಾಜಿಸ್ಟ್ರೇಟನು ಫರ್ಮಾಯಿಸಿದ ಯಾವದೇ ಬಾಬತು, ಮತ್ತು ಸದರಿ ಕಲಮಿನ (೧) ನೇ ಪೋಟ-ಕಲಮಿನಲ್ಲಿರುವ "ಎರಡನೇ ಮನುಷ್ಯನು" ಎಂಬ ಶಬ್ದಗಳಲ್ಲಿ ಯಾವದೊಂದು ಪಂಚಾಯತದ ಸಮಾವೇಶ ವಾಗುತ್ತದೆಂದು ತಿಳಿಯಬೇಕು ;

(ಬ) ಸನ್ ೧೮೯೮ನೇ ಇಸವಿಯ ಫೌಜದಾರಿ ಕೆಲಸ ನಡಿಸುವ ರೀತಿ ವಿಷಯದ ಕಾಯದೆಯ ೪೮೮ನೇ ಕಲಮಿನನ್ವಯ ಚೌಕಶಿಯನ್ನು ನಡಿಸುತ್ತಿರುವ ಮ್ಯಾಜಿಸ್ಟ್ರೇಟನು ಯಾರ ಪೋಟಗಿಯ ಬಗ್ಗೆ ಅರ್ಜಿಯು ಮಾಡಲ್ಪಟ್ಟಿದೆಯೋ ಅಂಥ ಹೆಂಡತಿಯು ಅಥವಾ ಮಗುವು, ಅಥವಾ ಇಂಥ ಹೆಂಡತಿಯ ಗಂಡ ಅಥವಾ ಇಂಥ ಮಗುವಿನ ತಾಯಿ ತಂದೆಗಳು ಯಾವ ಗ್ರಾಮದಲ್ಲಿ ವಾಸಿಸುತ್ತಿರುವರೋ ಅಂಥ ಗ್ರಾಮದ ಪಂಚಾಯತವು, ಪಕ್ಷಕಾರರ ಪರಿಸ್ಥಿತಿಗಳನ್ನು ಲಕ್ಷದಲ್ಲಿ ತಂದು, ಕೊಡತಕ್ಕದ್ದಾಗುವ ಪೋಟಗಿಯ ರಕಮಿನ ವಿಷಯದಲ್ಲಿ ಒಂದು ರಿಪೋರ್ಟನ್ನು ಮಾಡ ಬೇಕೆಂದು ಹೇಳುವ ಯಾವದೇ ಬಾಬತು, ಮತ್ತು ಇಂಥ ರಿಪೋರ್ಟು ಇಂಥ ಚೌಕಸಿಯಲ್ಲಿ ಪುರಾವೆಯಾಗಿರತಕ್ಕದ್ದು.

ಆದರೆ ಗೊತ್ತುಪಡಿಸುವದೇನಂದರೆ, ರಿಪೋರ್ಟೇ ಪುರಾವೆಯಾಗಿರುವಂಥ ಯಾವದೇ ಬಾಬತಿನ ವಿಷಯದಲ್ಲಿ ಸಾಕ್ಷಿದಾರನೆಂದ ಪಂಚಾತದ ಯಾವ ಸಭಾಸದನಿಗೂ ಹಾಜರಾಗುವದಕ್ಕೆ ಹೇಳಬಾರದು ಆದರೆ ಮ್ಯಾಜಿಸ್ಟ್ರೇಟನು ತನ್ನ ಮರ್ಜಿಯ ಪ್ರಕಾರ, ಇನ್ನೂ ಹೆಚ್ಚಿನ ರಿಪೋರ್ಟನ್ನು ಬೇಡಬಹುದು.

೧೧೪ ಪಂಚಾಯತಗಳ ಅಥವಾ ಗ್ರಾಮದ ಬೆಂಚುಗಳ ಸಭಾಸದ ಮೊದಲಾದವರು ಸರಕಾರೀ ನೌಕರರಿರುವರು— ಪಂಚಾಯತದ ಅಥವಾ ಗ್ರಾಮದ ಬೆಂಚಿನ ಪ್ರತಿಯೊಬ್ಬ ಸಭಾಸದನು ಮತ್ತು ಪಂಚಾಯತದಿಂದ ಅಥವಾ ಗ್ರಾಮದ ಬೆಂಚಿನಿಂದ ಇಟ್ಟುಕೊಳ್ಳಲ್ಪಟ್ಟ ಅಥವಾ ಕೆಲಸಕ್ಕೆ ಹಚ್ಚಿಕೊಳ್ಳಲ್ಪಟ್ಟ ಪ್ರತಿಯೊಬ್ಬ ಅಮಲದಾರನು ಮತ್ತು ನೌಕರನು ಹಿಂದುಸ್ಥಾನದ ಅಪರಾಧಿಗಳಿಗೆ ಶಿಕ್ಷೆ ಮಾಡುವ ಕಾಯದೆಯ ೨೧ ನೇ ಕಲಮಿನ ಅರ್ಥದ ಪ್ರಕಾರ ಸರಕಾರೀ ನೌಕರನಿರುತ್ತಾನೆಂದು ತಿಳಿಯಬೇಕು

೧೧೫. ರದ್ದಿಯಾತಿ ಮತ್ತು ಬಚಾವುಗಳು— (೧) ಸನ್ ೧೯೨೦ನೇ ಇಸವಿಯ ಮುಂಬಯಿಯ ಗ್ರಾಮ ಪಂಚಾಯತಿಗಳ ವಿಷಯದ ಆಕ್ಟು ಇದರ ಮೂಲಕ ರದ್ದುಪಡಿಸಲ್ಪಟ್ಟದೆ.

ಆದರೆ ಗೊತ್ತುಪಡಿಸುವದೇನಂದರೆ.—

(ಅ) ಸದರಿ ಆಕ್ಟಿನನ್ವಯ ಯಾವನೇ ಮನುಷ್ಯನಿಂದ ಬರತಕ್ಕ ಯಾವದೇ ರಕಮನ್ನು ಕೊಡುವ ಅವನ ಜವಾಬದಾರಿಗೆ ಅಥವಾ ಸದರಿ ಆಕ್ಟಿನನ್ವಯ ಈ ಮೊದಲೇ ಮಾಡಲ್ಪಟ್ಟ ಯಾವದೇ ಸಂಗತಿಯು ಕಾಯದೇಶೀರತನಕ್ಕೆ ಅಥವಾ ಬೇಕಾಯದೇಶೀರತನಕ್ಕೆ ಇಂಥ ರದ್ದಿಯಾತಿಯಿಂದ ಯಾವ ಬಾಧೆಯೂ ಉಂಟಾಗಲಾರದು.

(ಬ) ಸನ್ ೧೯೨೦ ನೇ ಇಸವಿಯ ಮುಂಬಯಿಯ ಗ್ರಾಮ ಪಂಚಾಯತಗಳ ವಿಷಯದ ಆಕ್ಟಿನನ್ವಯ ಸ್ಥಾಪಿಸಲ್ಪಟ್ಟ ಮತ್ತು ಈ ಆಕ್ಟು ಅಮಲಿನಲ್ಲಿ ಬರುವ ಲಗ್ಗು ಪೂರ್ವದಲ್ಲಿ ಅಸ್ತಿತ್ವದಲ್ಲಿರುವ ಯಾವತ್ತು ಪಂಚಾಯತಗಳು ಈ ಆಕ್ಟಿನನ್ವಯ ಸ್ಥಾಪಿಸಲ್ಪಟ್ಟವೆಯೆಂದು ತಿಳಿಯಬೇಕು ;

ಮತ್ತು ಇಂಥ ಯಾವವಾದರೂ ಪಂಚಾಯತಗಳ ಹಕ್ಕುಗಳು ಮತ್ತು ಜವಾಬದಾರಿಗಳು, ಹೀಗೆ ಸ್ಥಾಪಿಸಲ್ಪಟ್ಟವೆಯೆಂದು ತಿಳಿಯಲ್ಪಡುವ ಪಂಚಾಯತದಲ್ಲಿ ನಿವಿಷ್ಟವಾಗುವವು ಮತ್ತು ಅದರ ಕಡೆಗೆ ಬರುವವು ;

ಮತ್ತು ಹೀಗೆ ರದ್ದು ಮಾಡಲ್ಪಟ್ಟ ಆಕ್ಟಿನನ್ವಯ ಇಂಥ ಯಾವದೇ ಪಂಚಾಯತದ ವಿಷಯದಲ್ಲಿ ಮಾಡಲ್ಪಟ್ಟ, ತೆಗೆಯಲ್ಪಟ್ಟ, ಅಥವಾ ಹೊರಿಸಲ್ಪಟ್ಟ ಯಾವದೇ ನೇಮಣೂಕು, ಜಾಹೀರನಾಮೆ, ನೋಟೀಸು, ಕರ, ಹುಕುಮು, ಪರವಾನಿಗಿ, ಕಾನೂನು ಅಥವಾ ಪೋಟ-ಕಾಯದೆಯು, ಅದು ಈ ಆಕ್ಟಿನ ಠರಾವುಗಳಿಗೆ ವಿರೋಧವಿರದಿರುವಷ್ಟರ ಮಟ್ಟಿಗೆ, ಈ ಆಕ್ಟಿನನ್ವಯ ಮಾಡಲ್ಪಟ್ಟ, ತೆಗೆಯಲ್ಪಟ್ಟ ಅಥವಾ ಹೊರಿಸಲ್ಪಟ್ಟ ಯಾವದೇ ನೇಮಣೂಕಿಯಿಂದ, ಜಾಹೀರನಾಮೆಯಿಂದ, ನೋಟೀಸಿನಿಂದ ಕರದಿಂದ, ಹುಕುಮಿನಿಂದ, ಪರವಾನಿಗಿಯಿಂದ, ಕಾನೂನಿನಿಂದ ಅಥವಾ ಪೋಟ-ಕಾಯದೆಯಿಂದ ರದ್ದುಪಡಿಸಲ್ಪಟ್ಟ ಹೊರ್ತು ಮತ್ತು ರದ್ದುಪಡಿಸಲ್ಪಡುವ ವರೆಗೆ, ಈ ಆಕ್ಟಿನನ್ವಯ ಹೀಗೆ ಸ್ಥಾಪಿಸಲ್ಪಟ್ಟವೆಯೆಂದು ತಿಳಿಯಲ್ಪಡುವ ಪಂಚಾಯತಗಳ ವಿಷಯದಲ್ಲಿ ಈ ಆಕ್ಟಿನ ಠರಾವುಗಳನ್ವಯ ಮಾಡಲ್ಪಟ್ಟವೆ, ತೆಗೆಯಲ್ಪಟ್ಟವೆ ಅಥವಾ ಹೊರಿಸಲ್ಪಟ್ಟವೆಯೆಂದು ತಿಳಿಯಬೇಕು

(೨) ಈ ಆಕ್ಟು ಮತ್ತು ಕಾನೂನುಗಳು ಮತ್ತು ಪೋಟ-ಕಾಯದೆಗಳು ಯಾವದೇ ಗ್ರಾಮದಲ್ಲಿ ಅಮಲನಲ್ಲಿರುವ ಕಾಲದವರೆಗೆ, ಪರಿಶಿಷ್ಟದಲ್ಲಿ ಹೇಳಿದ ಕಾಯದೆಗಳು, ಪರಿಶಿಷ್ಟದ ಮೂರನೇ ಆಸನದಲ್ಲಿ ನಮೂದಿಸಿದ ಮಟ್ಟಿಗೆ, ಸದರಿ ಗ್ರಾಮದಲ್ಲಿ ಅಮಲಿನಲ್ಲಿರುವದು ನಿಂತುಹೋಗುವದು

---

## ಪರಿಶಿಷ್ಟ.

( ೧೧೫ ನೇ ಕಲಮು ನೋಡಿರಿ. )

| ಕಾಯದೆಯ ನಂಬರು ಮತ್ತು ವರ್ಷ. | ಹೆಸರು. | ಎಷ್ಟರ ಮಟ್ಟಿಗೆ ರದ್ದು ಮಾಡಲ್ಪಟ್ಟದೆ. |
|---|---|---|
| ಸನ್ ೧೮೬೭ ನೇ ಇಸವಿಯ ಮುಂಬಯಿಯ ಆಕ್ಟ ನಂಬರು ೭. | ಸನ್ ೧೮೬೭ ನೇ ಇಸವಿಯ ಮುಂಬಯಿಯ ಡಿಸ್ಟ್ರಿಕ್ಟ ಪೋಲೀಸ ಆಕ್ಟ. | ಕಲಮುಗಳು ೩೩ ಮತ್ತು ೩೪. |

ಕಲಮು ೩೩ ಅಪಕ್ರಿಯೆಯಂಥ ವಿಷಯದ ಸಂಬಂಧವಾಗಿ ಮತ್ತು ೩೪ ಮುಳಗಳ್ಳಿ ಇಲ್ಲವೆ ಉಳಿದ ಅಡವಿಯಂಥ ವಿಷಯಗಳ ಸಂಬಂಧವಾಗಿ ಇರುವವು

# ಗ್ರಾಮ ಪಂಚಾಯತಿಯ ಕಾಯದೆ

## ಕರಗಳ ನಿಯಮಗಳ ಬಗ್ಗೆ ಪರಿಶಿಷ್ಟ

### ಮನೆಯ ಮತ್ತು ಭೂಮಿಯ ಒಡೆಯರ ಇಲ್ಲವೆ ಅವುಗಳ ಭೋಗವಟೆ ಮಾಡುವವರ ಮೇಲೆ ಪಂಚಾಯತಿಯು ಕೂಡ್ರಿಸಬಹುದಾದ ಕರಗಳಬಗ್ಗೆ ಸರಕಾರೀ ಕಾನೂನು

## ನಿಯಮಗಳು

**ವ್ಹಿ. ಪಿ. ನಂ. ೧೨೩ ತಾ ೧೬-೩-೧೯೫೦.**

೧ ಈ ಕಾನೂನಿನಲ್ಲಿ, ವಿಷಯಕ್ಕೆ ಇಲ್ಲವೆ ಸಂದರ್ಭಕ್ಕೆ ಯಾವದೇ ಬಾಧಯು ಬಾರದಿದ್ದರೆ--

(ಅ) "ಒಡೆಯನು" ಅಂದರೆ, ಯಾವದೊಂದು ಮನೆಯು ಇಲ್ಲವೆ ಭೂಮಿಯು ಭಾಡಿಗೆಯಿಂದ ಕೊಡಲ್ಪಟ್ಟಿದ್ದಲ್ಲಿ, ಅಂಥ ಮನೆಯ ಅಥವಾ ಭೂಮಿಯ ಭಾಡಿಗೆಯನ್ನು ಯಾವನು ಪಡೆಯುವನೋ ಅಥವಾ ಯಾವನಿಗೆ ಅವನ್ನು ನಡೆಯುವ ಹಕ್ಕು ಇದೆಯೋ ಅಂಥ ಇಸಮು ಎಂದು ಅರ್ಥವಾಗುತ್ತದೆ

(ಬ) "ಭೋಗವಟ ಮಾಡುವವನು" ಅಂದರೆ, ಒಡೆಯನೆಂದಾಗಲೀ, ಎಜಂಟ ನೆಂದಾಗಲಿ, ಅಥವಾ ಭಾಡಿಗದಾರನೆಂದಾಗಲಿ ಪ್ರತ್ಯಕ್ಷವಾಗಿ ಯಾವನ ವಶದಲ್ಲಿ ಮನೆ ಅಥವಾ ಭೂಮಿಯು ಇರುತ್ತದೆಯೋ ಅಂಥ ಇಸಮಿನ ಸಮಾವೇಶವಾಗುತ್ತದೆ

(ಕ) "ವಾರ್ಷಿಕ ಭಾಡಿಗೆಯ ರಕಮು" ಅಂದರೆ, ಮನೆಯನ್ನು ಅಥವಾ ಭೂಮಿಯನ್ನು ಪ್ರತಿವರ್ಷಕ್ಕೆ ಅಥವಾ ವರ್ಷದಿಂದ ವರ್ಷಕ್ಕೆ ಯೋಗ್ಯರೀತಿಯಿಂದ ಎಷ್ಟು ಹಣಕ್ಕೆ ಭಾಡಿಗೆಯಿಂದ ಕೊಡಬಹುದೋ ಅಷ್ಟು ಯೋಗ್ಯವಾದ ವಾರ್ಷಿಕ ಭಾಡಿಗೆ ಎಂದರ್ಥ ವಾಗುತ್ತದೆ

(ಡ) "ಮನೆ" ಅಂದರೆ, ಒಂದೇ ಆವಾರದಲ್ಲಿ ಒಬ್ಬ ಭೋಗವಟೆದಾರನಿಂದ ಉಪಯೋಗಿಸಲ್ಪಡುವ ಯಾವದೇ ಕಟ್ಟಡ ಅಥವಾ ಕಟ್ಟಡಗಳ ಸಮೂಹ ಎಂದರ್ಥವಾಗುತ್ತದೆ.

(ಇ) "ಭೂಮಿ" ಅಂದರೆ, ಭೂಕಂದಾಯ (ಒಕ್ಕಲುತನ ಸಂಬಂಧದ) ಕೊಡಲು ಪಾತ್ರವಿಲ್ಲದ ಯಾವದೇ ಭೂಮಿ ಎಂದು ಅರ್ಥವಾಗುತ್ತದೆ

೨. ಇದರ ಜೊತೆಯಲ್ಲಿರುವ ಪರಿಶಿಷ್ಟದಲ್ಲಿ ನಮೂದಿಸಿದ ಪ್ರತಿಯೊಂದು ಪಂಚಾಯತವು ಗ್ರಾಮದ ಹದ್ದಿಯಲ್ಲಿಪ್ಪ ಮನೆಗಳ ಮತ್ತು ಭೂಮಿಗಳ ಒಡೆಯರ ಅಥವಾ ಭೋಗವಟ ಮಾಡುವವರ ಮೇಲೆ, ಸದರ ಪರಿಶಿಷ್ಟದಲ್ಲಿ ನಮೂದಿಸಿದಂತೆ ಕರವನ್ನು ಹೇರಬೇಕು

**ಪರಿಶಿಷ್ಟ (ನಿ. ೨.) ಸರಕಾರೀ ಠರಾವ ನಂ. ಎಸ್ ೧೭೪/೧ ತಾ. ೧೧-೧೨-೫೧.**

| | | ಅತಿ ಕಡಿಮೆದರ | ಅತಿ ಹೆಚ್ಚಿನದರ |
|---|---|---|---|
| (ಅ) | ಮನೆಯ ಇಲ್ಲವೆ ಭೂಮಿಯ ಬೆಲೆಯ ಮೇಲೆ | ೧೦೦ಕ್ಕೆ ೪ಆಣೆಗಳಂತೆ | ೧೦೦ಕ್ಕೆ ೮ಆಣೆಗಳಂತೆ |
| (ಬ) | ಮನೆಯ ಇಲ್ಲವೆ ಭೂಮಿಯ ವಾರ್ಷಿಕ ಭಾಡಿಗೆಯ ರಕಮಿನ ಮೇಲೆ. | ೧೦೦ಕ್ಕೆ ೬ ೧/೪ ದಂತೆ | ೧೦೦ಕ್ಕೆ ೧೨ರಂತೆ |

ಆದರೆ ಕೆಳಗಿನ ಸಂದರ್ಭಗಳಲ್ಲಿ (ವಿಷಯಗಳಲ್ಲಿ) ಕರವನ್ನು ಹೇರಬಾರದು

(ಅ) ಲೋಕಲ್‌ಬೋರ್ಡು, ಮ್ಯುನಿಸಿಪಾಲಿಟಿ, ಮುಂಬಯಿನಗರ ಮ್ಯುನಿಸಿಪಲ್ ಕಾರ್ಪೋರೇಶನ್ ಮತ್ತು ಪಂಚಾಯತಿಗಳ ಒಡೆತನದಲ್ಲಿರುವ ಮತ್ತು ಸಾರ್ವಜನಿಕ ಉದ್ದೇಶಗಳಿಗಾಗಿ ಉಪಯೋಗಿಸಲ್ಪಡುವ ಮತ್ತು ಲಾಭದ ಉದ್ದೇಶಗಳಿಗಾಗಿ ಉಪಯೋಗಿಸಲ್ಪಡದ ಅಥವಾ ಉಪಯೋಗಿಸುವ ಉದ್ದೇಶವಿಲ್ಲದ ಭೂಮಿ ಮತ್ತು ಕಟ್ಟಡಗಳು

(ಆ) ಲಾಭದ ಉದ್ದೇಶಗಳಿಗಾಗಿ ಉಪಯೋಗಿಸಲ್ಪಡುವ ಅಥವಾ ಉಪಯೋಗಿಸುವ ಉದ್ದೇಶವಿರುವ ಅಥವಾ ಉದ್ದೇಶವಿರದ ಸರ್ಕಾರೀ ಭೂಮಿಗಳು ಮತ್ತು ಕಟ್ಟಡಗಳು ಆದರೆ ಇವುಗಳಲ್ಲಿ ಸನ್ ೧೯೨೫ನೇ ಇಸ್ವಿಯ ಲೋಕಲ್ ಅಥಾರಿಟೀಜ ಟ್ಯಾಕ್ಸೇಶನ್ (ರಿಲೀಫ) ಕಾಯದೆಯ ೩ನೇ ಕಲಮಿನ ಪ್ರಕಾರ ತೆಗೆದ ನೋಟಿಫಿಕೇಶನ್ನಿನನುಸರಿಸಿ, ರೇಲ್ವೆ ಆಡಳಿತದವರು ಯಾವ ಭೂಮಿಗಳ ಮತ್ತು ಕಟ್ಟಡಗಳ ಸಲುವಾಗಿ ಕರವನ್ನು ಅಥವಾ ಅದರ ಬದಲು ಹಣವನ್ನು ಕೊಡಬೇಕಾಗುವದೋ ಅಂಥ ಮತ್ತು ಕಟ್ಟಡಗಳ ಸಮಾವೇಶವಾಗುವದಿಲ್ಲ

(ಬ) ಕೇವಲ ಧಾರ್ಮಿಕ, ಶೈಕ್ಷಣಿಕ ಮತ್ತು ಧರ್ಮಾದಾಯ ( ಪರೋಪಕಾರೀ ) ಉದ್ದೇಶಗಳಿಗಾಗಿ ಉಪಯೋಗಿಸಲ್ಪಡುವ ಭೂಮಿಗಳು ಮತ್ತು ಕಟ್ಟಡಗಳು

(ಕ) ೧೦೦ರೂಪಾಯಿಗಳಿಗಿಂತ ಕಡಿಮೆ ಬೆಲೆಯಿರುವ ಅಥವಾ ವರ್ಷಕ್ಕೆ ೬ರೂಪಾಯಿ ಅಥವಾ ಅದಕ್ಕಿಂತ ಕಡಿಮೆ ಭಾಡಿಗೆಯ ಬೆಲೆಯುಳ್ಳ ಭೂಮಿ ಮತ್ತು ಕಟ್ಟಡಗಳು

೩. ಗ್ರಾಮದ ಹದ್ದಿಯಲ್ಲಿರುವ ಮನೆ ಮತ್ತು ಭೂಮಿಗಳ ಒಡೆಯರ ಅಥವಾ ಭೋಗವಟ ಮಾಡುವವರ ಮೇಲೆ ನೋಟೀಸಿನಲ್ಲಿ ನಮೂದಿಸಿದ **ದರಗಳಂತೆ** ಕರಗಳನ್ನು ಹೇರಲಾಗುವದು ಎಂಬ ನೋಟೀಸಿನೊಂದಿಗೆ, ಪಂಚಾಯತಿಯ ಕಚೇರಿಯಲ್ಲಿ, ಈ **ನಿಯಮ** ಹಾಗೂ ಇಂಥ **ನಿಯಮಗಳ** ಮತ್ತು ನೋಟೀಸಿನ ಪ್ರತಿಗಳನ್ನು, ಪ್ರತಿಯೊಂದು ಪಂಚಾಯತವು ಹಚ್ಚಿ ಪ್ರಕಟಿಸಬೇಕು ಮತ್ತು ಪಂಚಾಯತವು ಇಂಥ ಪ್ರಕಟನೆಯನ್ನು ಡಂಗುರ ಸಾರಿ ಮಾಡಬೇಕು ಮತ್ತು ಆ ನೋಟೀಸಿನಲ್ಲಿ ಯಾವ ತಾರೀಖಿನಿಂದ ಕರವನ್ನು ಕೊಡಿಸಬೇಕಾಗುವದೋ **ಆ ತಾರೀಖನ್ನು ನಮೂದಿಸಬೇಕು.**

ಈ ತಾರೀಖು ನೋಟೀಸು ಪ್ರಸಿದ್ಧ ಮಾಡುವ ತಾರೀಖಿನಿಂದ ಒಂದು ತಿಂಗಳಿಗಿಂತ ಕಡಿಮೆ ಅಲ್ಲದಷ್ಟು ಮುದ್ದತಿನದಿರಬೇಕು

ಅಂಥ ತಾರೀಖಿನಿಂದ ಸರಕಾರೀ ನಿಯಮಗಳ ಪ್ರಕಾರ ಈ ರೀತಿಯಿಂದ ಕರವನ್ನು ಕೂಡ್ರಿಸಬೇಕು. ಆದರೆ, —

(೧) ಎಪ್ರಿಲ್ ೧ರಿಂದ ಪ್ರಾರಂಭವಾಗಿ ಮಾರ್ಚ ೩೧ಕ್ಕೆ ಮುಗಿಯುವ ವರ್ಷದ ಬಗ್ಗೆ ಕರವು ಹೇರಲ್ಪಡಬೇಕು. ಮತ್ತು ಯಾವದೇ ವರ್ಷದಲ್ಲಿ ಎಪ್ರಿಲ್ ೧, ಜುಲೈ ೧, ಅಕ್ಟೋಬರ ೧ ಅಥವಾ ಜಾನೇವರಿ ೧ ಈ ತಾರೀಖುಗಳ ಹೊರತಾಗಿ ಅದು ಇತರ ದಿವಸಗಳಲ್ಲಿ ಅಮಲಿನಲ್ಲಿ ಬರಲಾರದು ಮತ್ತು

(೨) ಅದು ಎಪ್ರಿಲ್ ೧ನೇ ತಾರೀಖನ್ನು ಬಿಟ್ಟು ಇತರ ಯಾವದೇ ದಿವಸದಲ್ಲಿ ಅಮಲಿನಲ್ಲಿ ಬಂದರೆ, ತ್ರೈಮಾಸಿಕ ಲೆಕ್ಕದಿಂದ ಮುಂಬರುವ ಎಪ್ರಿಲ ೧ನೇ ತಾರೀಖಿನ ವರೆಗೆ ಕರವು ಹೇರಲ್ಪಡಬೇಕು.

೪ (೧) ೩ನೇ ನಿಯಮದ ಪ್ರಕಾರ ಈ ನಿಯಮಗಳನ್ನು ಪ್ರಸಿದ್ಧಿಸಿದ ನಂತರ ಸರಪಂಚನು, ಶಕ್ಯವಿದ್ದಷ್ಟು ಬೇಗನೆ ಮತ್ತು ಯಾವದೇ ಪ್ರಸಂಗದಲ್ಲಿ ಮುಂಬರುವ ಡಿಸೆಂಬರ ೧ನೇ ತಾರೀಖಿಗಿಂತ ಹೆಚ್ಚಿಗೆ ತಡವಾಗದಂತೆ—

(ಅ) ಪ್ರತಿಯೊಂದು ಮನೆಯ ಅಥವಾ ಭೂಮಿಯ ಅನುಕ್ರಮ ನಂಬರನ್ನು,

(ಬ) ಗೊತ್ತಿದ್ದರೆ, ಒಡೆಯನ ಮತ್ತು ಭೋಗವಟಿ ಮಾಡುವವನ ಹೆಸರನ್ನು,

(ಕ) ಭಾಂಡವಲಿನ ಬೆಲೆಯನ್ನು ಅಥವಾ ವಾರ್ಷಿಕ ಬಾಡಿಗೆಯ ಬೆಲೆಯನ್ನು ಪ್ರಸಂಗವಿದ್ದಂತೆ, ಮತ್ತು

(ಡ) ಅವರ ಮೇಲೆ ಆಕರಿಸಲ್ಪಟ್ಟ ಕರದ ರಕಮನ್ನು ತೋರಿಸುವ **ಆಕರಣೆಯ ಯಾದಿ ಒಂದನ್ನು** ತಯಾರಿಸಬೇಕು ಅಥವಾ ತಯಾರ ಮಾಡಿಸಬೇಕು

(೨) ವಾರ್ಷಿಕ ಬಾಡಿಗೆಯ ಮೇಲೆ ಕರವನ್ನು ಆಕರಣೆ ಮಾಡುವ ಪ್ರಸಂಗದಲ್ಲಿ ಸದರಿ ಬೆಲೆಗೆ ನೂರಕ್ಕೆ ೧೦ರಷ್ಟು ರಕಮನ್ನು ದುರಸ್ತಿ ಇಲ್ಲವೆ ಬೇರೆ ವಚ್ಚದ ಸಲುವಾಗಿ ಅದರಲ್ಲಿ ವಜಾ ಮಾಡಬೇಕು

(೩) ಇಂಥ ಕರ ಆಕರಣೆಯ ಯಾದಿಯನ್ನು ತಯಾರಿಸುವ ಉದ್ದೇಶಕ್ಕಾಗಿ **ಸರಪಂಚನು** ಇಲ್ಲವೆ ಅವನ ಅಧಿಕಾರಿನಸ್ವಯ ಕೆಲಸಮಾಡುವ ಯಾವನೇ ಮನುಷ್ಯನು ಗ್ರಾಮದಲ್ಲಿ ಯಾವುದೇ **ಮನೆಯ ಅಥವಾ ಭೂಮಿಯ ತಪಾಸಣೇ ಪರೀಕ್ಷೆಯನ್ನು ಮಾಡಬಹುದು.**

(೪) ಕರವನ್ನು ಕೊಡಲು ಮುಖ್ಯವಾಗಿ ಪಾತ್ರನಿರುವ ಮನುಷ್ಯನ ಹೆಸರು ನಿಶ್ಚಿತವಾಗದೇ ಇದ್ದ ಸಮಯದಲ್ಲಿ, ಆಕರಣೆಯ ಯಾದಿಯಲ್ಲಿ ಮತ್ತು ಸದರಿ ಮನುಷ್ಯನ ಮೇಲೆ ಜಾರೀ ಮಾಡಲಿಕ್ಕೆ ಅಗತ್ಯವಿರುವ ಯಾವದೇ ನೋಟೀಸಿನಲ್ಲಿ, ಹೆಚ್ಚಿನ ವರ್ಣನೆಯನ್ನು ಕೊಡದೆ, ಅವನನ್ನು ಇಂಥ ಸ್ಥಳಗಳ “ಧಾರಣ ಮಾಡುವವನು” ಎಂದು ಕರೆದರೆ ಸಾಕು.

(೬) ಆಕರಣೆಯ **ಯಾದಿಯು ಪೂರ್ಣವಾದ ನಂತರ,** ಪಂಚಾಯತಿಯ ಕಚೇರಿಯಲ್ಲಿ ಯಾದಿಯನ್ನು ನೋಡುವದಕ್ಕಾಗಿ ಇಡಲಾಗಿದೆ ಎಂದು **ಡಂಗುರ ಸಾರಿ ಜಾಹೀರಪಡಿಸಬೇಕು.** ಮತ್ತು ಸದರೀ ನೋಟೀಸಿನ ತಾರೀಖಿನಿಂದ ೩೦ ದಿವಸದ ಒಳಗಾಗಿ ಒಂದು ದಿವಸ **ಆಕ್ಷೇಪಣೆಗಳನ್ನು ವಿಚಾರಿಸಿ ಅವುಗಳ ಮೇಲೆ ನಿರ್ಣಯವನ್ನು ಕೈಕೊಳ್ಳಲಾಗುವದು ಎಂದೂ,** ಡಂಗುರದ ಮುಖಾಂತರ ಜಾಹೀರಪಡಿಸಬೇಕು.

(೭) ಯಾದಿಯಲ್ಲಿ ಹೆಸರಿದ್ದ ಪ್ರತಿಯೊಬ್ಬ ಮನುಷ್ಯನಿಗೆ, ಯಾವದೇ ಆಸ್ತಿಯ ಒಡೆಯ ಅಥವಾ ಭೋಗವಟೆ ಮಾಡುವವನೆಂದು ಪ್ರತಿಪಾದಿಸುವ ಪ್ರತಿಯೊಬ್ಬ ಮನುಷ್ಯನಿಗೆ, ಯಾದಿಯಲ್ಲಿ ಸಮಾವೇಶ ಮಾಡಲ್ಪಟ್ಟ ಯಾವದೇ ಆಸ್ತಿಯ ಸ್ವಾಧೀನತೆಯುಳ್ಳ ಪ್ರತಿಯೊಬ್ಬ ಮನುಷ್ಯನಿಗೆ ಮತ್ತು ಇಂಥ ಮನುಷ್ಯನ ಎಜೆಂಟನಿಗೆ **ಹಣವಿಲ್ಲದೆ ಯಾದಿಯನ್ನು ಪರೀಕ್ಷಿಸಲು ಮತ್ತು ಅದರಿಂದ ಉತಾರಗಳನ್ನು ತಕ್ಕೊಳ್ಳಲು ಅಧಿಕಾರವಿದೆ.**

(೮) ಆಕರಣೆಯ ಬಗ್ಗೆ ಇರುವ ಎಲ್ಲ ಆಕ್ಷೇಪಗಳು, ೬ನೇ ನಿಯಮದ ಪ್ರಕಾರ ಪ್ರಸಿದ್ಧ ಮಾಡಲಾದ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ (ಗೊತ್ತುಪಡಿಸಿದ) ದಿವಸ ಅಥವಾ ಸಭೆಯು ಮುಂದೆ ಹಾಕಲ್ಪಟ್ಟಿದ್ದರೆ ನಂತರ ಒರುವ ಇಂಥ ದಿವಸ ಪಂಚಾಯತಿಯಿಂದ **ವಿಚಾರಿಸಲ್ಪಡುವವು** ಮತ್ತು **ನಿರ್ಣಯಿಸಲ್ಪಡುವವು** ಹಾಗೂ ಪಂಚಾಯತದ ನಿರ್ಣಯವನ್ನೂ **ಆಕರಣೆಯನ್ನೂ ವಿರೋಧಿಸುವ ಮನುಷ್ಯನಿಗೆ ತಿಳಿಸಲಾಗುವದು.** ಹೀಗೆ ನಿರ್ಣಯವು ತಿಳಿಸಲ್ಪಟ್ಟ ೩೦ ದಿವಸಗಳ ಒಳಗಾಗಿ ಅವಶ್ಯವಿದ್ದರೆ **ಲೋಕಲ್‌ಬೋರ್ಡಿನ ಕಡೆಗೆ ಅಂಥವರು ಅಪೀಲ ಮಾಡಬೇಕು.** ಮತ್ತು ಆಗ ಜಿಲ್ಹಾ ಲೋಕಲ್ ಬೋರ್ಡಿನ ಆಜ್ಞೆಯು ಕೊನೆಯದಾಗುವದು. ಅಪೀಲು ಮಾಡಲ್ಪಟ್ಟಾಗ, ಜಿಲ್ಹಾ ಲೋಕಲ್ ಬೋರ್ಡಿನ ಆಜ್ಞೆಗನುಸರಿಸಿ ಮತ್ತು ಉಳಿದ ಪ್ರಸಂಗಗಳಲ್ಲಿ ಪಂಚಾಯತದ ನಿರ್ಣಯಕ್ಕನುಸರಿಸಿ, ಆಕರಣೆಯ ಯಾದಿಯಲ್ಲಿ ಅವಶ್ಯವಿದ್ದ ತಿದ್ದುಪಡೆಗಳನ್ನು ಪಂಚಾಯತವು ಮಾಡಬೇಕು. ಮತ್ತು ನಿಜವಿರುವವವೆಂಬ ಬಗ್ಗೆ ಅದರ ಮೇಲೆ ಸರಪಂಚನ ಸಹಿ ಇರಬೇಕು.

೯. ಇದರ ಹಿಂದಿನ ನಿಯಮದ ಪ್ರಕಾರ, ನಿಜವಿರುವದೆಂಬ ಬಗ್ಗೆ ಸಹಿಮಾಡಿದ ಯಾದಿಯಲ್ಲಿಯ ದಾಖಲೆ (ನೋಂದು)ಗಳು ಹೇರಲ್ಪಡುವ ಕರದ ರಕಮಿಗೆ **ನಿರ್ಣಾಯಕ ಪುರಾವೆಗಳೆಂದು** ತಿಳಿಯಲ್ಪಡುವವು.

೧೦. (೧) ಯಾವದೊಂದು ದಾಖಲೆಯು ಮೋಸದಿಂದ, ಆಕಸ್ಮಾತ್ತಾಗಿ ಅಥವಾ ದೋಷದಿಂದ ವರ್ಜಿಸಲ್ಪಟ್ಟಿದ್ದರೆ ಅಥವಾ ಅಶುದ್ಧವಾಗಿ ಮಾಡಲ್ಪಟ್ಟಿದ್ದರೆ, ಯಾವದೇ ಆಸ್ತಿಯ ವಿಷಯದಲ್ಲಿ ದಾಖಲೆಯನ್ನು ಸೇರಿಸಿ ಅಥವಾ ಬದಲಿಸಿ ಇಲ್ಲವೆ ಆಕರಣೆಯ ಯಾದಿಯು ತಯಾರಿಸಲ್ಪಟ್ಟ ಮೇಲೆ ಯಾವುದೇ ಮನೆಯು ಸಂಪೂರ್ಣವಾಗಿ ಅಥವಾ ಅಂಶತಃ ರಚಿಸಲ್ಪಟ್ಟಿದ್ದರೆ, ಮಾರ್ಪಡಿಸಲ್ಪಟ್ಟಿದ್ದರೆ, ಬೆಳೆಯಿಸಲ್ಪಟ್ಟಿದ್ದರೆ ಅಥವಾ ಪುನರ್ರಚಿಸಲ್ಪಟ್ಟಿದ್ದರೆ, ಇಂಥ ರಚಿಸಲ್ಪಟ್ಟ, ಮಾರ್ಪಡಿಸಲ್ಪಟ್ಟ, ಬೆಳೆಯಿಸಲ್ಪಟ್ಟ ಅಥವಾ ಪುನರ್ರಚಿಸಲ್ಪಟ್ಟ ಮನೆಯ ಸಂಬಂಧದಲ್ಲಿ, ಆ ಯಾದಿಯ ಬದಲಾವಣೆಯಲ್ಲಿ ಹಿತಸಂಬಂಧ ಉಳ್ಳ ಯಾವದೇ ಮನುಷ್ಯನಿಗೆ, ಬದಲಾವಣೆಗಾಗಿ ಅವನು ತನ್ನ ಆಕ್ಷೇಪಣೆಯನ್ನು ಯಾವ

ತಾರೀಖಿನ ಒಳಗಾಗಿ ಕೊಡಬೇಕಾಗುವದೋ ಆ ತಾರೀಖಿನ ನೋಟೀಸನ್ನು ಕೊಟ್ಟನಂತರ, **ದಾಖಲೆಯನ್ನು ಸೇರಿಸಿ ಇಲ್ಲವೆ ಬದಲಿಸಿ, ಪಂಚಾಯತವು ಆಕರಣೆಯ ಯಾದಿಯನ್ನು ಯಾವುದೇ ಕಾಲಕ್ಕೆ ಬದಲಿಸಬಹುದು.** ಸದರಿ ತಾರೀಖು ಅಂಥ ನೋಟೀಸು ಜಾರೀ ಮಾಡಲ್ಪಟ್ಟ ಒಂದು ತಿಂಗಳಿಗಿಂತ ಕಡಿಮೆ ಅಲ್ಲದಷ್ಟು ಮುಂಚಿತವಾಗಿ ಇರಬಾರದು.

(೨) ಇಂಥ ಯಾವುದೇ ಬದಲಾವಣೆಯಲ್ಲಿ ಹಿತಸಂಬಂಧಉಳ್ಳ ಯಾವದೇ ಮನುಷ್ಯನು ಇಂಥ ನೋಟೀಸಿನಲ್ಲಿ ಗೊತ್ತುಪಡಿಸಿದ ಅವಧಿಗಿಂತ ಮೊದಲು ಮಾಡಿದ ಆಕ್ಷೇಪಣೆಯು, ೬ನೇ ನಿಯಮದ ಪ್ರಕಾರ ಮಾಡಿದ ಅರ್ಜಿಯಂತೆಯೇ ಎಂದು ತಿಳಿದು ಎಲ್ಲ ಬಾಬತುಗಳಲ್ಲಿ ವಿಚಾರಿಸಲ್ಪಡಬೇಕು.

(೩) ಈ ನಿಯಮದ ಪ್ರಕಾರ ಮಾಡಲ್ಪಟ್ಟ ದಾಖಲೆಯು ಅಥವಾ ಬದಲಾವಣೆಯು ರಚಿಸಲ್ಪಟ್ಟ, ಮಾರ್ಪಡಿಸಲ್ಪಟ್ಟ, ಬೆಳೆಯಿಸಲ್ಪಟ್ಟ ಅಥವಾ ಪುನರ್ರಚಿಸಲ್ಪಟ್ಟ ಮನೆಯ ಸಂಬಂಧದಲ್ಲಿ, ಇಂಥ ರಚನೆಯು, ಮಾರ್ಪಾಡು, ಬೆಳೆಯಿಸೋಣವು ಅಥವಾ ಪುನರ್ರಚನೆಯು ಮುಗಿದ ದಿವಸ ಅಥವಾ ಹೊಸರಚನೆಯು, ಮಾರ್ಪಾಡು, ಬೆಳೆಯಿಸೋಣವು ಅಥವಾ ಪುನರ್ರಚನೆಯು, ಮೊದಲಿಗೆ ಭೋಗಟಿ ಮಾಡಲ್ಪಟ್ಟ ದಿವಸ ಅಥವಾ ಇತರ ವಿಷಯಗಳಲ್ಲಿ ಸರಕಾರೀ ಚಾಲೂ ವರ್ಷದಲ್ಲಿ ಎಲ್ಲಕ್ಕೂ ಮೊದಲಿನ ಯಾವ ದಿವಸ ಇಂಥ ದಾಖಲೆಯನ್ನು ಅಥವಾ ಬದಲಾವಣೆಯನ್ನು ಮಾಡುವದು ಯೋಗ್ಯವೆನಿಸುವಂಥ ಪರಿಸ್ಥಿತಿಯು ಇತ್ತೋ ಆ ದಿವಸ ಮಾಡಲ್ಪಟ್ಟಂತೆಯೇ ಅಮಲಿನಲ್ಲಿ ಬರುವದು. ಮತ್ತು ಇಂಥ ವರ್ಷ ಪ್ರಸಂಗಾನುಸಾರವಾಗಿ ಕರವನ್ನು ಅಥವಾ ಬೆಳೆಯಿಸಲ್ಪಟ್ಟ ಕರವನ್ನು, **ಇಂಥ ದಿವಸದ ತರುವಾಯ ಉಳಿದ ವರ್ಷ ಮತ್ತು ಇಡೀ ವರ್ಷ ಇವುಗಳಲ್ಲಿ ಇರುವ ಪ್ರಮಾಣಕ್ಕನುಸರಿಸಿ ಹೇರಬೇಕು.**

೧೧. (೧) ಮನೆಗಳ ಮೇಲಿನ ಇಲ್ಲವೆ ಭೂಮಿಗಳ ಮೇಲಿನ ಇಲ್ಲವೆ ಇವೆರಡರ ಮೇಲಿನ ಕರವನ್ನು ಕೊಡಲು ಪಾತ್ರನಿದ್ದ ಯಾವದೇ ಮನೆಯು ಇಲ್ಲವೆ ಮನೆಯ ಯಾವುದೇ **ಭಾಗವು ಕೆಡವಲ್ಪಟ್ಟಾಗ ಇಲ್ಲವೆ ತೆಗೆಯಲ್ಪಟ್ಟಾಗ** ಸದರಿ ಕರವನ್ನು ಕೊಡಲು ಮೂಲತಃ ಪಾತ್ರನಿರುವ ಮನುಷ್ಯನು, ಸರಪಂಚನಿಗೆ **ಅದರ ಸಂಬಂಧದ ಲೇಖೀ ನೋಟೀಸನ್ನು** ಕೊಡಬೇಕು.

(೨) ಮೇಲೆ ಹೇಳಿದ ಮನುಷ್ಯನು, ಇಂಥ ಮನೆಯು ಅಥವಾ ಅದರ ಯಾವದೇ ಭಾಗವು ಕೆಡವಲ್ಪಡದಿದ್ದರೆ ಅಥವಾ ತೆಗೆದು ಹಾಕಲ್ಪಡದಿದ್ದರೆ ಅಂಥ ಮನೆಯ ಸಂಬಂಧದಲ್ಲಿ ಯಾವ ಕರವನ್ನು ಕೊಡಲು ಪಾತ್ರನಿರುತ್ತಿದ್ದನೋ, ಅಂಥ ಪ್ರತ್ಯೇಕ ಕರವನ್ನು ಅವನು ಇಂಥ ನೋಟೀಸು ಕೊಡುವ ವರೆಗೆ, ಇಂಥ ಮನೆಯ ಸಂಬಂಧದಲ್ಲಿಯೂ ಕೊಡಲು ಪಾತ್ರನಾಗುವದು ಮುಂದರಿಯುವದು. ( ಕೊಡಬೇಕಾಗುವದು ).

ಆದರೆ ಗೊತ್ತುಪಡಿಸುವದೇನಂದರೆ, ಈ ನಿಯಮದಲ್ಲಿಯ ಯಾವದೇ ವಿಷಯವು ಬಿದ್ದ ಅಥವಾ ಸುಡಲ್ಪಟ್ಟ ಯಾವದೇ ಮನೆಗೆ ಅಥವಾ ಮನೆಯ ಭಾಗಕ್ಕೆ ಅನ್ವಯಿಸುವದಿಲ್ಲ.

(೧೨) (೧) **ಪ್ರತಿವರ್ಷವೂ ಆಕರಣೆಯ ಹೊಸ ಯಾದಿಯನ್ನು ತಯಾರಿಸುವ ಅವಶ್ಯಕತೆ ಇಲ್ಲ.** ಆಕರಣೆಯ ಯಾದಿಯ ಪ್ರತಿಯೊಂದು ಭಾಗವು ಪ್ರತಿ ಮೂರು ವರ್ಷಗಳಿಗೆ ಒಂದಕ್ಕಿಂತ ಕಡಿಮೆಯಾಗದಷ್ಟು ಸಲ ಸಂಪೂರ್ಣವಾಗಿ ತಿದ್ದಲ್ಪಡಬೇಕೆಂಬ ಕರಾರಿಗೆ ಒಳಪಟ್ಟು, ಪಂಚಾಯತವು ಒಂದು ವರ್ಷದ ಯಾದಿಯಲ್ಲಿರುವ ಬೆಲೆ ಮತ್ತು ಆಕರಣೆಗಳನ್ನು, ಅವಶ್ಯವೆನಿಸಿದ ಬದಲಾವಣೆಗಳೊಂದಿಗೆ ಮುಂದಿನ ವರ್ಷಕ್ಕಾಗಿ ಸ್ವೀಕರಿಸಬಹುದು.

(೨) ಆದರೆ, ೪ರಿಂದ ೧೧ರ ವರೆಗಿನ ನಿಯಮಗಳ ಠರಾವುಗಳು, ಹೊಸ ಆಕರಣೆಯ ಯಾದಿಯು ಸರಕಾರೀ ವರ್ಷದ ಪ್ರಾರಂಭಕ್ಕೆ ಪೂರ್ಣಗೊಳಿಸಿದಂತೆ ಎಂದು ತಿಳಿದು, ಪ್ರತಿ ವರ್ಷವೂ ಅನ್ವಯಿಸುವವು.

(೧೩) ಕರವು, ಯಾವ ಮನೆಯ ಅಥವಾ ಭೂಮಿಯ ಮೇಲೆ ಆಕರಣೆ ಮಾಡಲ್ಪಟ್ಟಿರುವದೋ ಆ ಮನೆಯ ಇಲ್ಲವೆ ಭೂಮಿಯ ಪ್ರತ್ಯಕ್ಷ ಭೋಗವಟೆ ಮಾಡುವವನ ಕಡೆಯಿಂದ, ಇಂಥ ಭೋಗವಟೆ ಮಾಡುವ ಮನೆಯ ಇಲ್ಲವೆ ಭೂಮಿಯ ಒಡೆಯನಿದ್ದರೆ, ಪ್ರಥಮತಃ ವಸೂಲ ಮಾಡಲ್ಪಡಬೇಕು.

ಮನೆಯು ಅಥವಾ ಭೂಮಿಯು ಸ್ವತಃ ಒಡೆಯನಿಂದ ಭೋಗವಟೆ ಮಾಡಲ್ಪಡದಿದ್ದರೆ, ಕರವನ್ನು ಮುಖ್ಯವಾಗಿ—

(ಅ) ಆ ಆಸ್ತಿಯು ಭಾಡಿಗೆಯಿಂದ ಕೊಡಲ್ಪಟ್ಟಿದ್ದರೆ, ಭಾಡಿಗೆ ಕೊಡುವವನ ಕಡೆಯಿಂದ,

(ಬ) ಆಸ್ತಿಯು ಪೋಟ ಬಾಡಿಗೆಯಿಂದ ಕೊಡಲ್ಪಟ್ಟಿದ್ದರೆ, ಮುಖ್ಯ ( ವರಿಷ್ಠ ) ಬಾಡಿಗೆ ಕೊಡುವವನಿಂದ,

(ಕ) ಅದು ಭಾಡಿಗೆಯಿಂದ ಕೊಡಲ್ಪಡದಿದ್ದರೆ, ಅದನ್ನು ಭಾಡಿಗೆಯಿಂದ ಕೊಡುವ ಅಧಿಕಾರವಿದ್ದ ಮನುಷ್ಯನಿಂದ,

(ಡ) ಭೂಮಿಯ ಇಲ್ಲವೆ ಮನೆಯ ಒಡೆಯನು ಗ್ರಾಮವನ್ನು ಬಿಟ್ಟು ಹೋಗಿದ್ದರೆ ಅಥವಾ ಇತರ ರೀತಿಯಿಂದ ಸಿಗದಿದ್ದರೆ, ಆ ಮನೆಯು ಅಥವಾ ಭೂಮಿಯು ಯಾವನ ಸ್ವಾಧೀನದಲ್ಲಿರುವದೋ ಅವನಿಂದ ಕರವನ್ನು ವಸೂಲ ಮಾಡಬೇಕು.

ಮುಖ್ಯವಾಗಿ ಕರವನ್ನು ಕೊಡಲು ಪಾತ್ರನಿದ್ದ ಮನುಷ್ಯನಿಂದ ಇಂಥ ಕರದ ಸಂಬಂಧದ ಯಾವದೇ ಹಣವು ವಸೂಲ ಆಗದಿದ್ದರೆ, ಆ ಹಣದ ಭಾಗವನ್ನು, ಇಡೀ ಮನೆಯ ಮೇಲೆ ಆಕರಿಸಲ್ಪಟ್ಟ ಕರದ ಹಣದ ನಿಜವೆಂದು ಹೇಳಲ್ಪಡುವ ಯಾದಿಯ ಪ್ರಮಾಣದ ಮೇಲಿಂದ, ಯಾವ ಮನೆಯ ಸಂಬಂಧದ ಆ ಹಣವು ವಸೂಲಾಗತಕ್ಕದ್ದು ಇರುವದೋ **ಆ ಮನೆಯ ಯಾವುದೇ ಭಾಗವನ್ನು ಭೋಗವಟೆ ಮಾಡುವ ಮನುಷ್ಯನಿಂದ ಸರಪಂಚನು ಗೊತ್ತುಪಡಿಸುವ ಪ್ರಮಾಣದಲ್ಲಿ ವಸೂಲ ಮಾಡಬಹುದು.**

ಸರಪಂಚನು ಈ ವಿಷಯದ ಸಂಬಂಧ ಕೊಟ್ಟ ನಿರ್ಣಯದ ವಿರುದ್ಧ ಪಂಚಾಯತಿಗೆ ಅಪೀಲ ಮಾಡಲು ಬರುವದು. ಮತ್ತು ಆಗ ಪಂಚಾಯತಿಯ ನಿರ್ಣಯವೇ ಕೊನೆಯ ದಾಗುವದು

(೧೪) ಪ್ರತಿವರ್ಷ ಕೊಡಲ್ಪಡುವ ಕರವು ಯಾವ ಕಟ್ಟಡದ ಮೇಲೆ ಅಥವಾ ಭೂಮಿಯ ಮೇಲೆ ಯಾವ ವರ್ಷದ ಸಲುವಾಗಿ ಆಕರಿಸಲ್ಪಟ್ಟಿದೆಯೋ ಅಂಥ ಕಟ್ಟಡವು ಅಥವಾ ಭೂಮಿಯು ಇಡೀ ವರ್ಷ ಅಥವಾ ವರ್ಷದ ಕೆಲವು ಭಾಗದಲ್ಲಿ **ಖಾಲಿಯಾಗಿ ಮತ್ತು ಭಾಡಿಗೆ ಬಾರದೇ ಉಳಿದಾಗ್ಗೆ, ಕಟ್ಟಡವು ಅಥವಾ ಭೂಮಿಯು ಯಾವ ಅವಧಿಗಾಗಿ ಖಾಲಿ ಇರುವದೋ ಆ ಅವಧಿಯ ಪ್ರಮಾಣಕ್ಕನುಸರಿಸಿ, ಪಂಚಾಯತವು ಕರದ ರಕಮನ್ನು ಸೂಟುಮಾಡಬೇಕು ಇಲ್ಲವೆ ತಿರುಗಿ ಕೊಡಬೇಕು.**

ಆದರೆ ಗೊತ್ತುಪಡಿಸುವದೇನಂದರೆ, ಮೇಲೆ ಹೇಳಿದಂತೆ ಕಟ್ಟಡವು ಇಲ್ಲವೆ ಭೂಮಿಯು **ಒಂದೇ ಸವನೆ (ಅಖಂಡವಾಗಿ) ೬೦ ದಿವಸಗಳಿಗಿಂತ ಕಡಿಮೆ ಇಲ್ಲದ ಅವಧಿಯ ವರೆಗೆ ಖಾಲಿ ಇರದಿದ್ದರೆ ಮತುತ್ತು ಭಾಡಿಗೆಯು ಬಾರದ ಸ್ಥಿತಿಯಲ್ಲಿರದಿದ್ದರೆ** ಮತ್ತು ಆ ಕಟ್ಟಡವು ಅಥವಾ ಭೂಮಿಯು ಖಾಲಿ ಅದೆ ಅಥವಾ ಭಾಡಿಗೆಯು ಬರದ ಸ್ಥಿತಿಯಲ್ಲಿದೆ ಎಂಬ ಬಗ್ಗೆ **ಸರಪಂಚನಿಗೆ ಲೇಖೀ ನೋಟೀಸನ್ನು ಕೊಡದ** ವಿನಃ ಇಂಥ ಯಾವುದೇ ಮಾಫಿಗೆ ಅಥವಾ ರಕಮನ್ನು ತಿರುಗಿ ಕೊಡುವದಕ್ಕೆ ಅಪ್ಪಣೆ ಮಾಡಬಾರದು.

ಮತ್ತೂ ಗೊತ್ತುಪಡಿಸುವದೇನಂದರೆ, ಸರಪಂಚನಿಗೆ ಇಂಥ ನೋಟೀಸು ಕೊಡಲ್ಪಟ್ಟ ತಾರೀಖಿನ ಹಿಂದಿನ ಯಾವದೇ ಅವಧಿಗಾಗಿ ಯಾವದೇ ಮಾಫಿಯು ಮಾಡಲ್ಪಡಬಾರದು ಅಥವಾ ರಕಮು ತಿರುಗಿ ಕೊಡಲ್ಪಡಬಾರದು.

(೧೫) ಸರಪಂಚನಿಂದ ಅಥವಾ ಪಂಚಾಯತದಿಂದ ಈ ಬಗ್ಗೆ ಯೋಗ್ಯ ರೀತಿಯಿಂದ ಅಧಿಕಾರ ಪಡೆದ ಯಾವದೇ ಮನುಷ್ಯನಿಂದ ಕರವು ವಸೂಲ ಮಾಡಲ್ಪಡಬೇಕು ಮತ್ತು ಹಣ ಪಡೆಯುವವನು ಅಂಥ ಪ್ರತಿಯೊಂದು ವಸೂಲಿಗಾಗಿ ಪಾವತಿಯನ್ನು ಕೊಡಬೇಕು.

(೧೬) (೧) **ಕರವನ್ನು ರೋಖ ಹಣದಿಂದ ಅಥವಾ ಕೆಲಸ ಮತ್ತು ಕೂಲಿಗಳನ್ನು ಮಾಡಿ ಮುಟ್ಟಿಸಬಹುದು** ಆದರೆ ರೊಖ ಹಣದ ಬದಲಾಗಿ ಕೆಲಸ ಮತ್ತು ಕೂಲಿ ಮಾಡಲಾಗುವದೆಂದು ಸರಪಂಚರಿಗೆ ಲೇಖೀ ನೋಟೀಸು ಕೊಟ್ಟಿರದಿದ್ದರೆ, ರೋಖ ಹಣವನ್ನೇ ಕೊಡಬೇಕಾಗುವದು.

(೨) ನೋಟೀಸು "ಅ" ನಮೂನೆಯಲ್ಲಿರಬೇಕು. ಮತ್ತು ಪಂಚಾಯತವು ಇಂಥ ನಮೂನೆಯ ಪ್ರತಿಗಳನ್ನು ಬೇಡಿದಾಗ ಪುಕ್ಕಟೆಯಾಗಿ ಪೂರೈಸಬೇಕು.

## ನಮೂನೆ 'ಅ'

ಸರಪಂಚ, ಗ್ರಾಮಪಂಚಾಯತಿ .... ಗ್ರಾಮದ ಹೆಸರೂ.... ಇವರಿಗೆ—
ನಾನು, ... ( ಕರಕೊಡುವವನ ಹೆಸರು ) .... .... ಪಂಚಾಯತಿಗೆ ಕೊಡಬೇಕಾಗಿರುವ

ಮನೆಪಟ್ಟಿಯ ರೋಖ ರಕಮಿನ ಬದಲಾಗಿ ಕೆಲಸ ಮತ್ತು ಕೂಲಿಯನ್ನು ಮಾಡಲಿಕ್ಕೆ ಸಿದ್ಧನಿರುತ್ತೇನೆ. ತಾರೀಖು— ಸಹಿ

ಮಂಜೂರ.. ....                                        ...................

ಸರಪಂಚ

(೩) ಇಂಥ ನೋಟೀಸು ಯಾವದೇ ವರ್ಷದ ಎಪ್ರಿಲ್ ೧ನೇ ತಾರೀಖಿನ ಒಳಗಾಗಿ ಅಥವಾ ಕರವು ಏಪ್ರಿಲ್ ೧ನೇ ತಾರೀಖನ್ನು ಬಿಟ್ಟು ಇತರ ಯಾವದೇ ದಿವಸದಲ್ಲಿ ಅಮಲಿನಲ್ಲಿ ಬಂದರೆ, ಅಮಲಿನಲ್ಲಿ ಬಂದ ದಿವಸಕ್ಕಿಂತ ಮೊದಲು ಕೊಡಲ್ಪಡದಿದ್ದರೆ, ಸರಪಂಚನು ಈ ಬಗ್ಗೆ ಎರಡನೆಯ ಇಲ್ಲವೆ ಇಂಥ ಹುಕುಮನ್ನು ಮಾಡಿರದಿದ್ದರೆ, ಆ ನೋಟೀಸು ಕೂಡಲೇ ಮುಂಬರುವ ಎಪ್ರೀಲ ೧ನೇ ತಾರೀಖಿನಿಂದ ಅಮಲಿನಲ್ಲಿ ಬರುವದು.

(೪) ಇಂಥ ನೋಟೀಸು ಒಮ್ಮೆ ಕೊಡಲ್ಪಟ್ಟ ಮೇಲೆ, ಹಿಂತೆಗೆದುಕೊಳ್ಳಲ್ಪಡುವ ವರೆಗೆ ಅಥವಾ ಸರಪಂಚನಿಂದ, ಮಾಡುವದಕ್ಕಾಗಿ ನಿಯಮಿಸಲ್ಪಟ್ಟ ಕೆಲಸ ಅಥವಾ ಕೂಲಿಯು ನಿರಾಕರಿಸಲ್ಪಡುವವರೆಗೆ, ಅಥವಾ ಕೆಲಸದ ಇಲ್ಲವೆ ಕೂಲಿಯ ಬದಲು ಹಣವು ಕೊಡಲ್ಪಡುವವರೆಗೆ ಅಮಲಿನಲ್ಲಿರುವದು. ಇಂಥ ರೋಖ ಹಣವು ಕೊಡಲ್ಪಟ್ಟಾಗ್ಗೆ ಅದನ್ನು ಸ್ವೀಕರಿಸಬೇಕು.

(೫) ರೋಖ ಹಣದ ಬದಲು ಕೆಲಸ ಮತ್ತು ಕೂಲಿ ಮಾಡುವೆನೆಂದು ನೋಟೀಸು ಕೊಟ್ಟ ಕರ ಕೊಡಲು **ಪಾತ್ರರಿದ್ದ ಎಲ್ಲ ಜನರ ಹೆಸರುಗಳನ್ನು** ಸರಪಂಚನು **ಒಂದು ರಜಿಸ್ಟರದಲ್ಲಿ ದಾಖಲ ಮಾಡಬೇಕು.** ಮತ್ತು ಮಾಡಲ್ಪಡಬೇಕಾದ **ಕೆಲಸ ಮತ್ತು ಕೂಲಿ,** ಹಾಗೂ ಅದನ್ನು ಮಾಡುವ **ವೇಳೆ** ಇವುಗಳನ್ನು ಗೊತ್ತು ಪಡಿಸಬೇಕು ಮಾಡಲ್ಪಡುವ ಕೆಲಸದ ಬೆಲೆ, ಅದು ಮಾಡಲ್ಪಟ್ಟ ತಾರೀಖು ಅಥವಾ ತಾರೀಖುಗಳನ್ನು ಮತ್ತು ಇಂಥ ತಾರೀಖಿನ ದಿವಸ ಅಥವಾ ಇಂಥ ತಾರೀಖುಗಳ ಪ್ರತಿಯೊಂದು ದಿವಸ ಮಾಡಲ್ಪಟ್ಟ ಕೆಲಸದ ಅಥವಾ ಕೂಲಿಯ ಬೆಲೆಯನ್ನು **ಆ ರಜಿಸ್ಟರದಲ್ಲಿ ದಾಖಲ ಮಾಡಬೇಕು.** ದಿನದ ಕೆಲಸದ ರೋಖ ಬೆಲೆಯನ್ನು ಸರಪಂಚನಿಂದ ರಜಿಸ್ಟರದಲ್ಲಿ ಲೇಖೀಯಲ್ಲಿ ದಾಖಲ ಮಾಡಲ್ಪಡಬೇಕು.

**ಹೀಗೆ ಮಾಡಲ್ಪಟ್ಟ ಕೆಲಸದ ಬೆಲೆಯು ವಿಷಯದಲ್ಲಿ ಸರಪಂಚನ ಅಧಿಕಾರವೇ ಕೊನೆಯದು ಮತ್ತು ನಿರ್ಣಾಯಕವಾಗುವದು.**

(೬) ಮಾರ್ಚ ೩೧ನೇ ತಾರೀಖಿಗೆ ಮುಗಿಯುವ ಅವಧಿಯ ಬಗ್ಗೆ ಕೊಡಲ್ಪಡುವ ಕರದ ಎಲ್ಲ ಹಣವು, ಕೆಲಸ ಮತ್ತು ಕೂಲಿಯ ರೂಪದಿಂದ ಗೊತ್ತುಪಡಿಸಿದ ತಾರೀಖಿನ ಒಳಗಾಗಿ ಮುಟ್ಟದಿದ್ದರೆ, ಉಳಿದ ಹಣವನ್ನು ಕೂಡಲೇ ವಸೂಲ ಮಾಡಲ್ಪಡುವದು.

## ಅವಶ್ಯಕವಾದ ಕರನಿಯಮಗಳ ಸಮಾರೋಪ

**ಈ ಕಾಯದೆಯ ಕಲಮು** ೮೯ ಇದು ಕರ ಮತ್ತು ಫೀಗಳನ್ನು ಹಾಕುವ ಬಗ್ಗೆ ಅದೆ. **ಈ** ಕಲಮಿನಲ್ಲಿ ಎರಡು ಭಾಗಗಳಿರುತ್ತವೆ. ಮೊದಲನೆಯ ಭಾಗವು ಅವಶ್ಯವಾಗಿ ಹಾಕಬೇಕಾದ

ಕರಗಳ ಬಗ್ಗ ಅದೆ. ಎರಡನೇ ಭಾಗವು ಐಚ್ಛಿಕ ಕರಗಳ ಬಗ್ಗೆ ಅದೆ. ಕ. ೪೯ (೧), (೧ಅ), (೧ಬ) ಇವು ಅವಶ್ಯಕ ಕರಗಳ ಬಗ್ಗೆ ಇದ್ದು ಕ ೪೯ (೨), (೨ಅ) ಗಳು ಐಚ್ಛಿಕ ಕರಗಳಾಗಿ ಅವೆ.

ಮನೆ ಮತ್ತು ವಿಶಿಷ್ಟ ( ಭೂಕಂದಾಯಕ್ಕೆ ಪಾತ್ರವಿರದ ) ಭೂಮಿಗಳು ಅವಶ್ಯಕ ಕರಗಳಿಗೆ ಪಾತ್ರವಾಗುತ್ತವೆ.

ಅವುಗಳ ಸಂಬಂಧದಿಂದ ಸರಕಾರದ ಮುಖಾಂತರ— ಕಮೀಶನರರ ಕಡೆಯಿಂದ ( ಕಲಮು ೧೧೨ ) (೧)ರ ಆಧಾರದಿಂದ ತಯಾರ ಮಾಡಲ್ಪಟ್ಟ ನಿಯಮಗಳನ್ನು ಮೇಲೆ ಕೊಡಲಾಗಿದೆ. ಅವುಗಳಲ್ಲಿ ಕರ ಹಾಕುವ ಸಂಬಂಧ (೧) ರೀತಿ (೨) ದರ (ಕನಿಷ್ಟ ಮತ್ತು ಅತಿ ಹೆಚ್ಚು ಮರ್ಯಾದೆ) (೩) ಅದನ್ನು ಕೆಲಸ ಇಲ್ಲವೆ ಕೂಲಿ ಮಾಡಿ ಮುಟ್ಟಿಸುವ ಮಾರ್ಗ ಮತ್ತು (೪) ಅಪವಾದ (ಕರವು ಮಾಫಿ ಮಾಡಲ್ಪಟ್ಟ ಗಳಿಕೆಗಳು) ಈ (ಕ. ೪೯ರ ಮೊದಲನೇ ಭಾಗದಲ್ಲಿ ಕೊಡಲ್ಪಟ್ಟ) ವಿಷಯಗಳ ಸಮಾವೇಶ ಮಾಡಲಾಗಿದೆ.

## ಐಚ್ಛಿಕ ಕರ ನಿಯಮಗಳ ಪ್ರಸ್ತಾವನೆ

ಪೋಟ ಕಲಮು ೨ (ಅ)ದ ಪ್ರಕಾರ ಈ ಐಚ್ಛಿಕಗಳ ಪೈಕಿ ಒಂದು ಕರವನ್ನಾದರೂ ಕೂಡ್ರಿಸಲೇಬೇಕೆಂದು ಕಾಯದೆಯ ಆಗ್ರಹವಿರುತ್ತದೆ.

ಕಲಮು ೪೯ರ ಎರಡನೇ ಭಾಗವು ಐಚ್ಛಿಕ ಕರಗಳ ಬಗ್ಗೆ ಅದೆ. ಅದರ ವಿಷಯವು ೪೯ (೨) ರಿಂದ (೭) ರಲ್ಲಿ ಕೊಡಲಾಗಿದೆ. ಉದಾಹರಣೆ — ಯಾತ್ರಿಕರ ಮೇಲಿನ ಕರ, ಅಂಗಡಿ ಮತ್ತು ಉಪಹಾರ ಗೃಹಗಳ ಮೇಲಿನ ಕರ, ನೀರಿನ ಪೂರೈಕೆ ಮುಂ. ಈ ಪ್ರತಿಯೊಂದು ವಿಷಯದ ಮೇಲೆ ಸ್ವತಂತ್ರ ನಿಯಮಗಳನ್ನು ಮಾಡಲಾಗಿದೆ. ಈ ನಿಯಮಾವಳಿಗಳಲ್ಲಿ ಎರಡು ಭಾಗಗಳನ್ನು ಮಾಡಲಾಗಿದೆ ಮೊದಲನೆಯದು ಸಾಮಾನ್ಯ ನಿಯಮಗಳು ಮತ್ತು ಎರಡನೆಯದು ವಿಶಿಷ್ಟ ನಿಯಮಗಳು ಅವುಗಳನ್ನು ಅನುಕ್ರಮವಾಗಿ ಮುಂದೆ ಕೊಡಲಾಗಿದೆ.

# ಭಾಗಗಳ ಕಮಿಶನರರಿಂದ ಮಾಡಲ್ಪಟ್ಟ ಮುಂಬಯಿಯ ಗ್ರಾಮ ಪಂಚಾಯತಗಳ ಕರಗಳ ಮತ್ತು ಫೀಗಳ ವಿಷಯದ ಕಾನೂನುಗಳು.

ಪಂಚಾಯತ ಕಾಯದೆ ಕಲಮು ೪೯ (೨), ೧೦೮ (೧), ೧೧೨ (೧) ಜನರಲ್ ಡಿಪಾರ್ಟಮೆಂಟ ಎಸ್. ೧೭೪/೧—೩-೬-೧೯೪೧ ಮತ್ತು ೧೩-೧೦-೧೯೪೧

**ಪ್ರಿ. ಪಿ. ನಂಬರ ೨೯ ತಾ. ೨೭-೧೦-೧೯೪೩**

೨

# ಭಾಗ ೧.

## ಸಾಮಾನ್ಯ.

೧ ಈ ಕಾನೂನುಗಳಿಗೆ, ಸನ್ ೧೯೪೪ನೇ ಇಸವಿಯ ಮುಂಬಯಿಯ ಗ್ರಾಮಪಂಚಾಯತಗಳ ಕರಗಳ ಮತ್ತು ಫೀಗಳ ವಿಷಯದ ಕಾನೂನುಗಳೆಂದು ಕರೆಯುಬಹುದು.

೨. ಪ್ರತಿಯೊಂದು ಪಂಚಾಯತವು, ಸನ್ ೧೯೩೩ನೇ ಇಸವಿಯ ಮುಂಬಯಿಯ ಗ್ರಾಮ ಪಂಚಾಯತಗಳ ವಿಷಯದ ಆಕ್ಟಿನ ೮೯ನೇ ಕಲಮಿನ (೨)ನೇ ಪೋಟ ಕಲಮಿನನ್ವಯ ಯಾವದೊಂದು ಕರವನ್ನು ಅಥವಾ ಫೀಯನ್ನು ಕೂಡ್ರಿಸುವದನ್ನು ನಿಶ್ಚಯಿಸುವದರ ಪೂರ್ವದಲ್ಲಿ ಈ ಕೆಳಗಿನ ವಿಧಾನವನ್ನು ಅನುಸರಿಸತಕ್ಕದ್ದು, ಅಂದರೆ.—

(ಅ) ಪಂಚಾಯತವು, ಸದರಿ ಪಂಚಾಯತದ ಸಭೆಯಲ್ಲಿ, ಕೂಡ್ರಿಸಬೇಕೆಂದು ಯೋಚಿಸಿದ ಕರವನ್ನು ಅಥವಾ ಫೀಯನ್ನು ಆರಿಸಿ ಒಂದು ಗೊತ್ತುವಳಿಯನ್ನು ರಚಾಯಿಸತಕ್ಕದ್ದು

(ಬ) ಆ ನಂತರ ಪಂಚಾಯತವು, ಸಾರ್ವಜನಿಕರ ಮಾಹಿತಿಗಾಗಿ, ಸದರಿ ಕರಕ್ಕೆ ಸಂಬಂಧಿಸುವಂಥ ಈ ಕಾನೂನುಗಳ ಸದರಿ ಭಾಗದ ಸಹಿತವಾಗಿ ಸದರಿ ಸೂಚನೆಯನ್ನು, ಇಂಥ ಪ್ರಕಟನೆಯ ತಾರೀಖಿನಿಂದ ಒಂದು ತಿಂಗಳಿಗಿಂತ ಪೂರ್ವದಲ್ಲಿ ಅಲ್ಲದ ತಾರೀಖಿನ ದಿವಸ ಅಥವಾ ಅದರ ನಂತರ ಪಂಚಾಯತವು ಸದರಿ ಸೂಚನೆಯ ಬಗ್ಗೆ ವಿಚಾರಮಾಡುವದೆಂದು ನಿರ್ದಿಷ್ಟಪಡಿಸಿ, ಸದರಿ ಗ್ರಾಮದಲ್ಲಿ ಡಂಗುರ ಸಾರಿ ಮತ್ತು ಪಂಚಾಯತದ ಕಚೇರಿಯಲ್ಲಿ ಹಾಗೂ ಗ್ರಾಮದ ಚಾವಡಿಯಲ್ಲಿ ಒಂದು ನೋಟೀಸನ್ನು ಹಚ್ಚಿ ಪ್ರಕಟಮಾಡತಕ್ಕದ್ದು

(ಕ) ಪಂಚಾಯತದಿಂದ ಸೂಚಿಸಲ್ಪಟ್ಟ ಕರದ ಅಥವಾ ಫೀಯ ಆಕಾರಣೆಯ ಬಗ್ಗೆ ಆಕ್ಷೇಪಣೆಯನ್ನು ತಕ್ಕೊಳ್ಳುವ ಗ್ರಾಮದಲ್ಲಿಯ ಯಾವನೇ ರಹಿವಾಸಿಯು, ೨ನೇ ಕಾನೂನಿನಲ್ಲಿ ಪ್ರಸಿದ್ಧಿಸಲ್ಪಟ್ಟ ನೋಟೀಸಿನಲ್ಲಿ ನಿರ್ದಿಷ್ಟಮಾಡಲ್ಪಟ್ಟ ತಾರೀಖಿನ ದಿವಸ ಅಥವಾ ಅದಕ್ಕೂ ಪೂರ್ವದಲ್ಲಿ ಬರಹಮೂಲಕವಾಗಿ, ಅಥವಾ ಪಂಚಾಯತವು ಸದರ ಸೂಚನೆಯನ್ನು ವಿಚಾರಮಾಡುವ ದಿವಸ ಅಥವಾ ದಿವಸಗಳಲ್ಲಿ ಸಮಕ್ಷವಾಗಿ, ಯಾವದೇ ಆಕ್ಷೇಪಣೆಯನ್ನು ಅಥವಾ ಸೂಚನೆಯನ್ನು ಮಾಡಬಹುದು

(ಡ) ೨ನೇ ಕಾನೂನಿನನ್ವಯ ಗೊತ್ತುಮಾಡಲ್ಪಟ್ಟ ತಾರೀಖಿನ ದಿವಸ ಅಥವಾ ಅವಶ್ಯವಿದ್ದರೆ ಅದರ ನಂತರ ಬರುವ ದಿವಸಗಳಲ್ಲಿ ಪಂಚಾಯತವು (ಕ) ರಕಮಿನನ್ವಯ ಮಾಡಲ್ಪಟ್ಟ ಯಾವತ್ತೂ ಆಕ್ಷೇಪಣೆಗಳ ಹಾಗೂ ಸೂಚನೆಗಳ ಬಗ್ಗೆ ವಿಚಾರ ಮಾಡತಕ್ಕದ್ದು ಮತ್ತು ಅದು ಸದರಿ ಸೂಚನೆಯನ್ನು ಮಾನ್ಯಮಾಡಬಹುದು, ಸುಧಾರಿಸಬಹುದು ಅಥವಾ ನಾಕಾರಿಸಬಹುದು.

೩. ೮೯ನೇ ಕಲಮಿನ (೨)ನೇ ಪೋಟ ಕಲಮಿನಲ್ಲಿ ನಿರ್ದಿಷ್ಟಮಾಡಲ್ಪಟ್ಟ ಯಾವದೇ ಕರವನ್ನು ಅಥವಾ ಫೀಯನ್ನು ಹಾಕಬೇಕೆಂದು ಪಂಚಾಯತವು ನಿರ್ಧರಿಸಿದಾಗ, ಆ ಕರಕ್ಕೆ ಅಥವಾ ಫೀಗೆ ಸಂಬಂಧಿಸುವಂಥ ಈ ಕಾನೂನುಗಳಲ್ಲಿಯ ಆ ಭಾಗದಲ್ಲಿರುವ ಕಾನೂನುಗಳನ್ನು, ಮತ್ತು ಇದರ ಜೊತೆಗೆ ಸದರಿ ಭಾಗದಲ್ಲಿ ಗೊತ್ತುಪಡಿಸಲ್ಪಟ್ಟ ಕರವು ಅಥವಾ ಫೀಯು, ಅದರಲ್ಲಿ ನಿರ್ದಿಷ್ಟಮಾಡಲ್ಪಟ್ಟ ದರಗಳ ಪ್ರಕಾರ ಹಾಕಲ್ಪಡುವದೆಂದು ಒಂದು ನೋಟೀಸನ್ನು, ಪಂಚಾಯತವು, ಪಂಚಾಯತದ ಕಚೇರಿಯಲ್ಲಿ ಅವುಗಳ ನಕಲುಗಳನ್ನು ಹಚ್ಚಿ, ಪ್ರಸಿದ್ಧ ಪಡಿಸತಕ್ಕದ್ದು. ಅದು ಹೀಗೆ ಪ್ರಸಿದ್ಧ ಮಾಡಿರುವ ಸಂಗತಿಯನ್ನು ಸಹ ಗ್ರಾಮದಲ್ಲಿ ಡಂಗುರ ಸಾರಿ ತಿಳಿಸತಕ್ಕದ್ದು. ಸದರಿ ಕರವು ಅಥವಾ ಫೀಯು, ಸದರಿ ನೋಟೀಸಿನಲ್ಲಿ ನಿರ್ದಿಷ್ಟಪಡಿಸಲ್ಪಡತಕ್ಕ ತಾರೀಖಿನಿಂದ ಕೂಡ್ರಿಸಲ್ಪಡತಕ್ಕದ್ದು ಮತ್ತು ಅಂಥ ತಾರೀಖು, ನೋಟೀಸಿನ ಪ್ರಕಟನೆಯ ತಾರೀಖಿನಿಂದ ಒಂದು ತಿಂಗಳಿಗಿಂತ ಕಡಿಮೆಯಲ್ಲದ ತಾರೀಖಾಗಿರತಕ್ಕದ್ದು.

೪ ಯಾವದೊಂದು ಕರದ ಅಥವಾ ಫೀಯ ಆಕಾರಣೆಯು, ಕೂಡ್ರಿಸುವದರ ಅಥವಾ ಹೇರುವದರ ವಿರುದ್ಧ ಮಾಡಬಹುದಾದ ಅಪೀಲು, ಜಿಲ್ಹಾ ಲೋಕಲ್ ಬೋರ್ಡದ ಕಡೆಗೆ, ಸದರಿ ಕರದ ಅಥವಾ ಫೀಯ ಆಕಾರಣೆಯ, ಕೂಡ್ರಿಸುವದರ ಅಥವಾ ಹೇರುವದರ ಬಗ್ಗೆ ಪಂಚಾಯತದ ಠರಾವಿನ ತಾರೀಖಿನಿಂದ ೩೦ ದಿವಸಗಳೊಳಗಾಗಿ ಮಾಡಲ್ಪಡತಕ್ಕದ್ದು

---

## ಭಾಗ ೨.

## ಯಾತ್ರಿಕರ ಮೇಲಿನ ಕರ.

### ನಂಬರ ಎಸ್. ೧೭೪ ತಾರೀಖು ೭ನೇ ನವಂಬರ ಸನ್ ೧೯೫೦ನೇ ಇಸವಿ

೫— ಈ ಭಾಗದಲ್ಲಿ ಯಾತ್ರಿಕನು ಅಂದರೆ, ಜಿಲ್ಹಾ ಮಾಜಿಸ್ಟ್ರೇಟನ ಪೂರ್ವ ಸಮ್ಮತಿಯನ್ನು ಪಡೆದು ಯಾವದೊಂದು ಪಂಚಾಯತವು ಯಾತ್ರೆಯ ಅವಧಿಯೆಂದು ನಿಶ್ಚಯಿಸಬಹುದಾದಂಥ ಅವಧಿಯಲ್ಲಿ ಸದರಿ ಗ್ರಾಮಕ್ಕೆ ಭೆಟ್ಟಿಕೊಡುವ ಯಾವನೊಬ್ಬ ಮನುಷ್ಯನು ಎಂದರ್ಥವಾಗುತ್ತದೆ, ಆದರೆ ಅದರಲ್ಲಿ, ಮೂರು ವರ್ಷ ವಯಸ್ಸಿನ ಕೆಳಗಿರುವ ಅಥವಾ ಸದರಿ ಗ್ರಾಮದ ರಹವಾಸಿಯು ಅಥವಾ ಯಾತ್ರೆಯ ಸ್ಥಳದಲ್ಲಿ ಕರ್ತವ್ಯವನ್ನು ಮಾಡುವದಕ್ಕಾಗಿ ಕಳುಹಿಸಿಕೊಡಲಾದ ಸರಕಾರದವರ ಅಥವಾ ಸ್ಥಾನಿಕ ಸಂಸ್ಥೆಯ ನೌಕರನು ಆಗಿರುವಂಥ ಹೀಗೆ ಪ್ರವೇಶ ಮಾಡುವ ಮನುಷ್ಯನ ಸಮಾವೇಶವಾಗುವದಿಲ್ಲ.

೬— (೧) ಯಾತ್ರಿಕರ ಮೇಲಿನ ಕರವನ್ನು ಕೂಡ್ರಿಸಬೇಕೆಂದು ಠರಾಯಿಸುವ ಪಂಚಾಯತವು, ಜಿಲ್ಹಾ ಮ್ಯಾಜಿಸ್ಟ್ರೇಟನ ಪೂರ್ವಸಮ್ಮತಿಯನ್ನು ಪಡೆದು ಸದರಿ ಪಂಚಾಯತದಿಂದ ನಿಶ್ಚಯಿಸಲ್ಪಡಬಹುದಾದಂಥ, ಪ್ರತಿ ಯಾತ್ರಿಕನಿಗೆ ೨ಆಣೆಗಳಿಂದ ೬ಆಣೆಗಳ ವರೆಗೆ ಹೆಚ್ಚು ಕಡಿಮೆಯಾಗುವ ದರಗಳ ಮೇರೆಗೆ ಸದರಿ ಕರವನ್ನು ಕೂಡ್ರಿಸತಕ್ಕದ್ದು

—ನಂ. ೬೪೨೦ /೩೩ ತಾ. ೧–೧೨–೧೯೫೧

ಆದರೆ ಗೊತ್ತುಪಡಿಸುವದೇನಂದರೆ,—

(೧) ಸದರಿ ಕರವು ೩ ಹಾಗೂ ೧೨ ವರ್ಷಗಳ ವಯಸ್ಸುಗಳ ನಡುವಿನ ಮಕ್ಕಳ ಮೇಲೆ ಅರ್ಧದಷ್ಟು ದರದ ಮೇರೆಗೆ ಕೂಡ್ರಿಸಲ್ಪಡತಕ್ಕದ್ದು, ಮತ್ತು

(೨) ಆದಿವಾಸಿಯಾಗಿರುವ ಯಾವನೊಬ್ಬ ಯಾತ್ರಿಕನ ಮೇಲೆ ಯಾವದೇ ಕರವು ಕೂಡ್ರಿಸಲ್ಪಡತಕ್ಕದ್ದಲ್ಲ.

ಯಾವದೊಂದು ಮಗುವಿನ ವಯಸ್ಸಿನ ಬಗ್ಗೆ ಯಾವದೊಂದು ಪ್ರಶ್ನೆಯು ಉದ್ಭವಿಸಿದರೆ ಸರಪಂಚನ ನಿರ್ಣಯವು ಕೊನೆಯದಾಗತಕ್ಕದ್ದು.

**ವಿವರಣೆ :**— ಈ ಕಾನೂನುಗಳ ಉದ್ದೇಶದ ಸಲುವಾಗಿ, ಆದಿವಾಸಿಯು ಅಂದರೆ, ಈ ಕೆಳಗಿನ ಶೆಡ್ಯೂಲ್ಡ್ ಪಂಗಡಗಳ ಪೈಕಿ ಯಾವದೇ ಒಂದು ಪಂಗಡದ ಮೆಂಬರನಾಗಿರುವ ಮನುಷ್ಯನು ಎಂದರ್ಥವಾಗುತ್ತದೆ —

೧. ಬರ್ದಾ.
೨. ಬಾವಚಾ.
೩. ಭಾಗಲಿಯಾ ಭಿಲ್ಲ, ಗರಾಸಿಯಾ, ಢೋಲಿ ಭಿಲ್ಲ, ಡುಂಗರಿ ಭಿಲ್ಲ, ರಾವಳ ಭಿಲ್ಲ ಹಾಗೂ ತಡವಿ ಭಿಲ್ಲ ಇವರ ಸಹಿತವಾಗಿ, ಭಿಲ್ಲ.
೪. ಚೋದ್ರಾ
೫. ಧಾಣಕ.
೬. ಧೋಡಿಯಾ.
೭. ದುಬಳಾ.
೮. ಗಾಮಿತ ಅಥವಾ ಗಾಮಟಾ
೯. ಗೊಂಡ.
೧೦. ಕಾತೋಡಿ ಅಥವಾ ಕಾಟಕರಿ.
೧೧. ಕೊಂಕಣಾ.
೧೨. ಕೋಳಿ ಢೋರ.
೧೩. ಕೋಳಿ ಮಹಾದೇವ.
೧೪. ಮಾವಚಿ.
೧೫. ನಾಯಕವಾಡಾ ಅಥವಾ ನಾಯಕ
೧೬. ಅಡವಿ ಚಿಂಚರ ಹಾಗೂ ಫಾಂಸೆ ಪಾರಧಿ ಇವರ ಸಹಿತವಾಗಿ, ಪಾರಧಿ
೧೭. ಪಟೇಲಿಯಾ.
೧೮. ಪೋಮ್ಲಾ
೧೯. ಪೋವಾರಾ
೨೦. ರಾಥವಾ.
೨೧. ರಾಕೂರ.
೨೨. ವಲವಾಯಿ.
೨೩. ವಾರಲಿ.
೨೪. ವಸಾವಾ.

೭. ಇಂಥ ಕರವನ್ನು ಕೊಟ್ಟ ನಂತರ ಒಂದು ಪಾಸು ಪ್ರತಿಯೊಬ್ಬ ಯಾತ್ರಿಕನಿಗೆ ಕೊಡಲ್ಪಡುವದು. ಆದರೆ ಗೊತ್ತುಪಡಿಸುವದೇನಂದರೆ, ಯಾವದೇ ಕರವು ಕೊಡಲ್ಪಡದೆ ಆದಿವಾಸಿಗೆ ಪಾಸು ಕೊಡಲ್ಪಡತಕ್ಕದ್ದು.

೮. ಸದರಿ ಪಾಸು ೬ನೇ ಕಾನೂನಿನನ್ವಯ ನಿರ್ಧರಿಸಲ್ಪಟ್ಟ ಸಂಪೂರ್ಣ ಅವಧಿಯ ವರೆಗೆ ಕಾಯದೇಶೀರವಿರುವದು.

೯. ಪಂಚಾಯತವು, ಸದರಿ ಪಾಸುಗಳ ಆಕಾರ, ನಮೂನೆ ಮತ್ತು ಬಣ್ಣಗಳನ್ನು ನಿರ್ಣಯಿಸತಕ್ಕದ್ದು ಮತ್ತು ಅವುಗಳನ್ನು ಮುದ್ರಿಸತಕ್ಕದ್ದು.

೧೦. ಸದರಿ ಕರವು, ಅದನ್ನು ವಸೂಲ ಮಾಡುವ ಉದ್ದೇಶದಿಂದ ಪಂಚಾಯತದಿಂದ ಗೊತ್ತುಮಾಡಲ್ಪಡಬಹುದಾದ ಸ್ಥಳದಲ್ಲಿ ಅಥವಾ ಸ್ಥಳಗಳಲ್ಲಿ ವಸೂಲ ಮಾಡಲ್ಪಡುವದು.

---

## ಭಾಗ ೩.

## ಜಾತ್ರೆ ಮತ್ತು ಉತ್ಸವಗಳ ಮೇಲೆ.

೧೧. (೧) ಜಾತ್ರೆ ಮತ್ತು ಉತ್ಸವಗಳ ಮೇಲೆ ಕರವನ್ನು ಕೂಡ್ರಿಸಬೇಕೆಂದು ನಿಶ್ಚಯಿಸುವಂಥ ಯಾವದೊಂದು ಪಂಚಾಯತವು, ಈ ಭಾಗಕ್ಕೆ ಜೋಡಿಸಲ್ಪಟ್ಟ ಪರಿಶಿಷ್ಟದಲ್ಲಿ ನಿರ್ದಿಷ್ಟಗೊಳಿಸಲ್ಪಟ್ಟ ದರಗಳ ಪ್ರಕಾರ ಅದನ್ನು ಕೂಡ್ರಿಸತಕ್ಕದ್ದು

ಆದರೆ ಗೊತ್ತುಪಡಿಸುವದೇನಂದರೆ, ಈ ಕಾನೂನುಗಳು ಮಾಡಲ್ಪಟ್ಟ ತಾರೀಖಿನ ಲಗತು ಪೂರ್ವದಲ್ಲಿ ಯಾವದೊಂದು ಪಂಚಾಯತವು ಇಂಥ ಕರವನ್ನು ಕೂಡ್ರಿಸುತ್ತ ಬಂದಿದ್ದರೆ, ಪಂಚಾಯತವು, ಸದರಿ ತಾರೀಖಿನ ಹಿಂದಿನ ಲಗತು ತಾರೀಖಿನ ದಿವಸ ಅಮಲಿನಲ್ಲಿದ್ದ ದರಗಳ ಪ್ರಕಾರ ಕರವನ್ನು ಕೂಡ್ರಿಸತಕ್ಕದ್ದು.

೧೨ ಪಂಚಾಯತವು, ಜಿಲ್ಹಾ ಮ್ಯಾಜಿಸ್ಟ್ರೇಟನ ಅನುಮತಿಯನ್ನು ಪಡೆದು, ಕರದ ಅವಧಿ ಅಥವಾ ಅವಧಿಗಳನ್ನು ಮತ್ತು ಹದ್ದುಗಳನ್ನು ಗೊತ್ತುಮಾಡತಕ್ಕದ್ದು.

೧೩. ಯಾವನೇ ಮನುಷ್ಯನು, ೧೨ನೇ ಕಾನೂನಿನನ್ವಯ ಠರಾಯಿಸಲ್ಪಟ್ಟ ಅವಧಿಯಲ್ಲಿ ಮತ್ತು ಹದ್ದುಗಳೊಳಗೆ, ಅಂಗಡಿಯ ಅಥವಾ ಛಪ್ಪರದ ಕಾರಣದ ಬಗ್ಗೆ ಅಥವಾ ಯಾವದೇ ತರದ ವ್ಯಾಪಾರ ಮಾಡುವದರ ಸಲುವಾಗಿ ಇಲ್ಲವೆ ಸಿನೇಮಾ, ಸರ್ಕಸ್ ಅಥವಾ ಇತರ ಮನೋರಂಜನೆಯ ಸಲುವಾಗಿ, ಪಂಚಾಯತದಿಂದ ಪರ್ಮಿಟು ತೆಗೆದುಕೊಂಡ ಹೊರ್ತು, ಯಾವದೇ ತರದ ಸ್ಥಳವನ್ನು ಅಥವಾ ಭೂಮಿಯನ್ನು ಭೋಗವಟೆ ಮಾಡತಕ್ಕದ್ದಲ್ಲ.

೧೪ ಈ ಬಾಬತಿನಲ್ಲಿ ಪಂಚಾಯತದಿಂದ ಅಧಿಕಾರಕೊಡಲ್ಪಟ್ಟ ಮನುಷ್ಯನು ಕರದ ಹಣವನ್ನು ತೆಗೆದುಕೊಳ್ಳತಕ್ಕದ್ದು, ಅದರ ಬಗ್ಗೆ ಪಾವತಿಯನ್ನು ಕೊಡತಕ್ಕದ್ದು, ಮತ್ತು ಅದರ ನಂತರ ಒಂದು ಪರ್ಮಿಟನ್ನು ಕೊಡತಕ್ಕದ್ದು.

೧೫. ಸದರಿ ಪರ್ಮಿಟು, ೧-ನೇ ಕಾನೂನಿನನ್ವಯ ಠರಾಯಿಸಲ್ಪಟ್ಟ ಸಂಪೂರ್ಣ ಅವಧಿಯ ವರೆಗೆ ಕಾಯದೇಶೀರವಿರುವದು.

೧೬. ಪಂಚಾಯತವು ೧೪ನೇ ಕಾನೂನಿನನ್ವಯ ಕೊಡಲ್ಪಟ್ಟ ಪಾವತಿಯ ಹಾಗೂ ಪರ್ಮಿಟಿನ ಆಕಾರವನ್ನು ಗೊತ್ತುಪಡಿಸತಕ್ಕದ್ದು

೧೬. (ಅ) ವಿಷಯಕ್ಕೆ ಅಥವಾ ಸಂದರ್ಭಕ್ಕೆ ಬಾಧೆ ಬಾರದೇ ಇದ್ದರೆ,

(೧) " ಮನೋರಂಜನೆ " ಈ ಶಬ್ದದಲ್ಲಿ ಹಣ ಕೊಟ್ಟರೆ ಪ್ರವೇಶ ದೊರೆಯುವಂಥ ನಾಟಕ, ಸಿನಿಮಾ, ಸರ್ಕಸ ಪ್ರದರ್ಶನ, ಆಟ ಇವುಗಳ ಸಮಾವೇಶವಾಗುತ್ತದೆ

(೨) " ಪ್ರವೇಶಕ್ಕಾಗಿ ಹಣ " ಇದರಲ್ಲಿ

(ಅ) ಮನೋರಂಜನೆಯ ಸ್ಥಳದಲ್ಲಿಯ ಆಸನ ಅಥವಾ ಕೂಡ್ರುವ ಸ್ಥಳಕ್ಕೆ ಕೊಡುವ ಹಣ ಮತ್ತು (ಬ) ಮನೋರಂಜನೆಯ ಕಾರ್ಯಕ್ರಮಕ್ಕಾಗಿ ಕೊಡುವ ಹಣ ಸಮಾವೇಶ ವಾಗುತ್ತದೆ

(೩) " ಒಡೆಯ " ಈ ಶಬ್ದದಲ್ಲಿ ಮನೋರಂಜನೆಗೆ ಸಂಬಂಧಪಟ್ಟ ವ್ಯವಸ್ಥಾಪಕ ಎಜಂಟ, ಅಥವಾ ಮನೋರಂಜನೆಯ ವ್ಯವಸ್ಥೆಗಾಗಿ ಇರುವ ಯಾವದೇ ಜವಾಬದಾರ ಮನುಷ್ಯ ಇವರ ಸಮಾವೇಶವಾಗುತ್ತದೆ

(೪) " ಮನೋರಂಜನೆಗೆ ಪ್ರವೇಶ " ಇದರ ಅರ್ಥವು ಯಾವ ಸ್ಥಳದಲ್ಲಿ ಮನೋರಂಜನೆಯ ಕಾರ್ಯಕ್ರಮವು ನಡೆಯುತ್ತದೋ ಅದಕ್ಕೆ ಪ್ರವೇಶ.

೧೬. (ಬ) ಮನೋರಂಜನೆಗಳ ಮೇಲೆ ಕರವನ್ನು ಕೂಡ್ರಿಸಬೇಕೆಂದು ಠರಾಯಿಸುವ ಯಾವದೊಂದು ಪಂಚಾಯತವು ಅದನ್ನು ಈ ಕೆಳಗಿನ ದರಗಳ ಮೇರೆಗೆ ಕೂಡ್ರಿಸತಕ್ಕದ್ದು —

(೧) ಪ್ರದರ್ಶನದ, ವಿನೋದದ ಆಟದ ಪ್ರತಿದಿನಕ್ಕೆ ೧ರೂಪಾಯಿಯ ವರೆಗೆ

(೨) ನಾಟಕದ, ಸರ್ಕಸಿನ, ಸಿನೆಮಾ ಪ್ರತಿಯೊಂದು ಆಟಕ್ಕೆ ರೂ ೧–೮–೦ ವರೆಗೆ.

ಆದರೆ ಗೊತ್ತುಪಡಿಸುವದೇನಂದರೆ, ಯಾವ ಮನೋರಂಜನೆಯು ಪರೋಪಕಾರದ ಅಥವಾ ಧರ್ಮಾದಾಯದ ಉದ್ದೇಶಗಳ ಸಲುವಾಗಿ ಜರುಗಿಸಲ್ಪಡುತ್ತದೋ ಮತ್ತು ಯಾವದರಿಂದ ದೊರೆಯುವ ಉತ್ಪನ್ನವು ಇಂಥ ಉದ್ದೇಶಗಳ ಸಲುವಾಗಿ ಕೊಡಲ್ಪಡುತ್ತದೋ ಅಂಥ ಯಾವದೇ ಮನೋರಂಜನೆಯು ಸದರಿ ಕರವನ್ನು ಕೊಡುವದರಿಂದ ಗ್ರಾಮಪಂಚಾಯತದಿಂದ ಮಾಫುಮಾಡಲ್ಪಡುವದು. "

೧೬. (ಕ) ಈ ಕರವು ಪ್ರತಿಯೊಂದು ಕಾರ್ಯಕ್ರಮದ ಪ್ರಾರಂಭಕ್ಕೆ ಕೊಡಲ್ಪಡಬೇಕು.

೧೬. (ಡ) ಪಂಚಾಯತಿಯ ಸೆಕ್ರೆಟರಿಯು ಇಲ್ಲವೆ ಪಂಚಾಯತಿಯಿಂದ ಈ ಕೆಲಸಕ್ಕಾಗಿ ನಿಯಮಿಸಲ್ಪಟ್ಟ ಮನುಷ್ಯನು ಈ ಕರವನ್ನು ತೆಗೆದುಕೊಳ್ಳಬೇಕು ಮತ್ತು ಅದಕ್ಕಾಗಿ ಒಂದು ಪಾವತಿಯನ್ನು ಕೊಡಬೇಕು

೨೬. (ಇ) ಪಂಚಾಯತವು ಕಲೆಕ್ಟರನ ಸಮ್ಮತಿ ಪಡೆದು ಪಾವತಿಯ ನಮೂನೆಯನ್ನು ಠರಾಯಿಸಬೇಕು

೧೬. (ಫ) ಯಾವದೇ ಅನಿವಾರ್ಯ ಕಾರಣದ ಮೂಲಕ ಮನೋರಂಜನೆಯು ನಡೆಯದಿದ್ದರೆ, ತುಂಬಿದ ಹಣವನ್ನು ೪೮ ತಾಸುಗಳಲ್ಲಿ ಕೇಳಿದರೆ ತಿರುಗಿ ಅದನ್ನು ಕೊಡಬೇಕು

# ಪರಿಶಿಷ್ಟ.

[ ಕಾನೂನು ೧೧ ]

## ಜಾತ್ರೆ ಮತ್ತು ಉತ್ಸವಗಳ ಅವಧಿಯಲ್ಲಿ ಕರದ ದರ.

**ಸರಕಾರೀ ಜಾಹೀರನಾಮೆ ನಂ. ಎಸ್. ೧೭೪ (೧) ತಾ ೭-೧೧-೧೯೫೦**

(೧) ಜಿಲ್ಹಾ ಮ್ಯಾಜಿಸ್ಟ್ರೇಟನ ಪೂರ್ವ ಸಮ್ಮತಿಯನ್ನು ಪಡೆದು ಗ್ರಾಮಪಂಚಾಯತವು ನಿಶ್ಚಯಿಸಬಹುದಾದಂಥ, ೯ ಚೌರಸ ಫೂಟಿಗಿಂತ ಹೆಚ್ಚು ಅಳತೆ ಇರದ ಪ್ರತಿಯೊಂದು ಭೂಮಿಗೆ ಪ್ರತಿದಿನಕ್ಕೆ ಎರಡು ಆಣೆಗಳಿಂದ ನಾಲ್ಕು ಆಣೆಗಳ ವರೆಗೆ ಮತ್ತು ಪ್ರತಿಯೊಂದು ಹೆಚ್ಚಿನ ೯ ಚೌರಸ ಫೂಟಿನ ಭೂಮಿಗೆ ಅಥವಾ ಅದರ ಭಾಗಕ್ಕೆ ಪ್ರತಿದಿನಕ್ಕೆ ೬ ಪೈಗಳಿಂದ ಒಂದು ಆಣೆಯವರೆಗೆ ಹೆಚ್ಚುಕಡಿಮೆಯಾಗುವ ಯಾವದೇ ದರವು

(೨) ಸಿನೆಮಾ, ಸರ್ಕಸ್ಸು ಅಥವಾ ಬೇರೆ ಮನೋರಂಜನದ ಸಲುವಾಗಿ ತೆಗೆದುಕೊಂಡ ಭೂಮಿಗೆ ೧ ಗುಂಠೆಗೆ ೧ ದಿವಸಕ್ಕೆ ರೂ ೧-೦-೦ ಮತ್ತು ಭೋಗವಟ ಮಾಡಲ್ಪಟ್ಟ ಒಂದು ಗುಂಠೆಯ ಭಾಗಕ್ಕೆ ಒಂದು ಗುಂಠೆಯ ದರವನ್ನು ಆಕಾರಿಸತಕ್ಕದ್ದು.

---

# ಭಾಗ ೪.

## ಆಕ್ಟ್ರಾಯ.

೧೭. ಪಂಚಾಯತವು, ಕಲೆಕ್ಟರನ ಮಂಜೂರಿಯನ್ನು ಪಡೆದು, ಆಕ್ಟ್ರಾಯದ ಹದ್ದುಗಳನ್ನು ಮತ್ತು ಆಕ್ಟ್ರಾಯ ನಾಕೆಗಳ ಸಂಖ್ಯೆ ಮತ್ತು ಸ್ಥಳಗಳನ್ನು ಗೊತ್ತುಮಾಡತಕ್ಕದ್ದು.

೧೮. (೧) ಆಕ್ಟ್ರಾಯವನ್ನು ಕೂಡ್ರಿಸಬೇಕೆಂದು ನಿಶ್ಚಯಿಸುವ ಪಂಚಾಯತವು, ಈ ಭಾಗಕ್ಕೆ ಜೋಡಿಸಲ್ಪಟ್ಟ ಪರಿಶಿಷ್ಟದ ೧ನೇ ಆಸನದಲ್ಲಿ ನಿರ್ದಿಷ್ಟ ಮಾಡಲ್ಪಟ್ಟ, ಆಕ್ಟ್ರಾಯ ಹದ್ದುಗಳಲ್ಲಿ ತಿನ್ನುವದರ, ಉಪಯೋಗ ಮಾಡುವದರ ಅಥವಾ ಮಾರಾಟ ಮಾಡುವದರ ಸಲುವಾಗಿ ಆಮದು ಮಾಡಲ್ಪಡುವ, ಮತ್ತು ಸದರಿ ಪರಿಶಿಷ್ಟದ ೨ನೇ ಆಸನದಲ್ಲಿ ನಿರ್ದಿಷ್ಟಗೊಳಿಸಲ್ಪಟ್ಟ ಅನುಕ್ರಮವಾದ ದರಗಳ ಪ್ರಕಾರ, ಯಾವತ್ತೂ ಸರಕುಗಳ ಮೇಲೆ ಅದನ್ನು ಕೂಡ್ರಿಸತಕ್ಕದ್ದು.

ಆದರೆ ಗೊತ್ತುಪಡಿಸುವದೇನಂದರೆ, ಈ ಕಾನೂನುಗಳು ಮಾಡಲ್ಪಟ್ಟ ತಾರೀಖಿನ ಲಗತು ಪೂರ್ವದಲ್ಲಿ ಯಾವದೊಂದು ಪಂಚಾಯತವು ಸದರಿ ಯಾವದೇ ಸರಕುಗಳ ಮೇಲೆ ಆಕ್ಟ್ರಾಯವನ್ನು ಕೂಡ್ರಿಸುತ್ತ ಬಂದಿದ್ದರೆ, ಪಂಚಾಯತವು, ಈ ಸರಕುಗಳ ಬಾಬತಿನಲ್ಲಿ, ಸದರಿ ತಾರೀಖಿನ ಲಗತು ಹಿಂದಿನ ತಾರೀಖಿನ ದಿವಸ ಅಮಲಿನಲ್ಲಿದ್ದ ದರಗಳ ಪ್ರಕಾರ ಆಕ್ಟ್ರಾಯ ಕೂಡ್ರಿಸತಕ್ಕದ್ದು.

(೨) (೧)ನೇ ಪೋಟ-ಕಾನೂನಿಯಲ್ಲಿ ಉಲ್ಲೇಖಿಸಲ್ಪಟ್ಟ ದರಗಳು, ಸನ್ ೧೯೩೪ನೇ ಇಸವಿಯ ಡಿಸೆಂಬರ ತಿಂಗಳ ೧೮ನೇ ತಾರಿಖಿನ ಜನರಲ್ ಡಿಪಾರ್ಟಮೆಂಟಿನೊಳಗಿನ

ಸರಕಾರೀ ಜಾಹೀರನಾಮೆ ನಂಬರು ಎಸ್. ೧೭೪/೧ ಇದರಲ್ಲಿ ಗೊತ್ತುಪಡಿಸಲ್ಪಟ್ಟ ಪರಾಕಾಷ್ಠಕ್ಕೆ ಒಳಪಟ್ಟು ಇರತಕ್ಕದ್ದು.

ವಿವರಣೆ:—ಈ ಕಾನೂನಿನ ಉದ್ದೇಶಗಳ ಸಲುವಾಗಿ, ಯಾವವೇ ಸರಕುಗಳ ಆಮದು ಮಾಡಲ್ಪಟ್ಟ ಎರಡು ತಿಂಗಳೊಳಗಾಗಿ ರಫ್ತು ಮಾಡಲ್ಪಡದಿದ್ದರೆ, ಅಂಥ ಸರಕುಗಳ (ಇದಕ್ಕೆ ವಿರುದ್ಧವಾಗಿ ಸಿದ್ಧಮಾಡಲ್ಪಟ್ಟ ಹೊರ್ತು) ಆಕ್ಟ್ರಾಯ ಹದ್ದುಗಳೊಳಗೆ ತಿನ್ನುವದರ, ಉಪಯೋಗ ಮಾಡುವದರ ಅಥವಾ ಮಾರಾಟ ಮಾಡುವದರ ಸಲುವಾಗಿ ಆಮದು ಮಾಡಲ್ಪಟ್ಟಿರುವವೆಂದು ತಿಳಿಯಲ್ಪಡತಕ್ಕದ್ದು. (ಎಸ್ ೨೧೬. ತಾ. ೨೦-೫-೫೩)

೧೭. ಆಕ್ಟ್ರಾಯವನ್ನು ಆಕ್ಟ್ರಾಯ ನಾಕೆಯಲ್ಲಿ ಕೊಡತಕ್ಕದ್ದು.

೧೮. (ಅ) ಮೇಲಿನ ನಿಯಮದಲ್ಲಿ ಗೊತ್ತುಪಡಿಸಿದಂತೆ, ನಾಕೆಯಲ್ಲಿ ಆಕ್ಟ್ರಾಯವನ್ನು ಬೇಡಿದ ಮೇಲೆ ಕೊಡದಿದ್ದರೆ ನಾಕಾ ಕಾರಕೂನನು ತದ್ವಿರುದ್ಧ ವಿಶೇಷ ಕಾರಣಗಳು ಇರದ ವಿನಃ ಆಕ್ಟ್ರಾಯ ಆಕರಿಸಲ್ಪಟ್ಟ ಸರಕುಗಳನ್ನು ಇಲ್ಲವೆ (ಆಕ್ಟ್ರಾಯ) ಬೇಡಿಕೆಗೆ ಸರಿಯಾಗುವಷ್ಟು ಬೆಲೆಯ ಸರಕುಗಳ ಭಾಗವನ್ನು ಜಪ್ತಮಾಡಿ ಹಿಡಿದಿಡಬೇಕು. ಕರ (ಟೋಲ ಕೊಡಲು ತಪ್ಪಿದ್ದಕ್ಕೆ ಜಪ್ತಮಾಡಿದ ಆಸ್ತಿಯನ್ನು ಮಾರಾಟದಿಂದ ಅಥವಾ ಬೇರೆ ರೀತಿಯಿಂದ ಕೊಟ್ಟು ಬಿಡಲಿಕ್ಕೆ ಗೊತ್ತುಮಾಡಿದ, ತಾ. ೯-೩-೧೯೪೪ನೇ ಇಸ್ವಿ ದಿವಸ ಮುಂಬಯಿ ಸರಕಾರದ ಗ್ಯಾಝೆಟಿನ ೪-ಕ ಭಾಗದ ೨೨೬ರಿಂದ ೨೨೭ನೇ ಪುಟಗಳಲ್ಲಿ ಪ್ರಕಟಿಸಲ್ಪಟ್ಟ ಟೋಲ ನಿಯಮಗಳ ೫ನೇ ನಿಯಮದಲ್ಲಿ ಗೊತ್ತುಮಾಡಿದ ರೀತಿಯು ಆಕ್ಟ್ರಾಯ ಕೊಡದ್ದಕ್ಕೆ ಜಪ್ತಮಾಡಲ್ಪಟ್ಟು ಹಿಡಿದಿಡಲ್ಪಟ್ಟ ಆಸ್ತಿಯ ವ್ಯವಸ್ಥೆಗೆ ಅನ್ವಯಿಸುವದು

ಆಕ್ಟ್ರಾಯ (ರಿಫಂಡ) ತಿರುಗಿ ಕೊಡುವದು.

೧೯. (ಬ) ಯಾವ ಸರಕುಗಳಿಗೆ ಆಕ್ಟ್ರಾಯ ಕೊಡಲ್ಪಟ್ಟಿದೆಯೋ ಆ ಸರಕುಗಳನ್ನು ಆಯಾತ ಮಾಡಿದವನು ಸರಕುಗಳ ಪ್ರಮಾಣವನ್ನು ಕಡಿಮೆಮಾಡದೆ ಮೇರೆಯ ಹೊರಗೆ ಸದರ ಸರಕುಗಳ ನಿರ್ಯಾತದ ಮೇಲೆ ಹಾಗೆ ಕೊಡಲ್ಪಟ್ಟ (ಆಕ್ಟ್ರಾಯ) ಹಣವನ್ನು ತಿರುಗಿ ಪಡೆಯಲು ಪಾತ್ರನಾಗುವನು

೧೯. (ಕ) ಈ ನಿಯಮಗಳನ್ವಯ ತಿರುಗಿ ಕೊಡಲ್ಪಟ್ಟ ಆಕ್ಟ್ರಾಯ ಹಣಗಳನ್ನು ಗ್ರಾಮಪಂಚಾಯತಿಯ ಫಂಡಿನಲ್ಲಿ ಖರ್ಚು ಹಾಕಬೇಕು.

೧೯. (ಡ) ಹಣವನ್ನು ತಿರುಗಿ ಪಡೆಯುವ ಬೇಡಿಕೆಯನ್ನು ಮಾನ್ಯ ಮಾಡದಿರಲು ಸಾಕಷ್ಟು ಕಾರಣಗಳಿರದಿದ್ದರೆ, ಸರಪಂಚನು ಅಥವಾ ಅವನ ಗೈರಹಾಜರಿಯಲ್ಲಿ ಉಪ ಸರಪಂಚನು,

(೧) ನಿರ್ಯಾತದ ತಾರೀಖಿನಿಂದ ೩ ದಿವಸಗಳೊಗಾಗಿ ಸರಪಂಚನಿಗೆ ಲೇಖಿ ಅರ್ಜಿ ಮಾಡಿಕೊಂಡರೆ, ಮತ್ತು

(೨) ರೀಫಂಡ ಬೇಡುವವನು ಆಕ್ಟ್ರಾಯ ಕೊಟ್ಟ ಕಾಲಕ್ಕೆ ತನಗೆ ನಾಕಾಕಾರಕೂನನು ಸಹಿಮಾಡಿಕೊಟ್ಟ ಪಾವತಿಯನ್ನು ಹಾಜರ ಮಾಡಿದರೆ ಮಾತ್ರ, ರೀಫಂಡಿಗಾಗಿ ಒಪ್ಪಿಗೆಯನ್ನು ಕೊಡಬೇಕು.

೧೯. (ಈ) ರೀಫಂಡಿನ ಬೇಡಿಕೆಯನ್ನು ತಿರಸ್ಕರಿಸಿದ ಸಂಬಂಧದಲ್ಲಿಯ ಸರಪಂಚನ ಇಲ್ಲವೆ ಉಪಸರಪಂಚನ ಆಜ್ಞೆಯ ವಿರುದ್ಧ ಪಂಚಾಯತಿಗೆ ಅಪೀಲ ಮಾಡಬೇಕು ಮತ್ತು ಅದರ ನಿರ್ಣಯವು ಕೊನೆಯದಾಗುವದು.

| ಸರಕುಗಳು | | ಆಕ್ಟ್ರಾಯದ ದರ |
|---|---|---|
| (ಅ) ಕಟ್ಟಡದ ಸಾಮಾನುಗಳು :— | | ರೂ. ಆ ಪೈ. |
| ಇಟ್ಟಂಗಿಗಳು | ಪ್ರತಿ ಸಾವಿರಕ್ಕೆ | ೧–೦–೦ |
| ತಗಡುಗಳು | ಪ್ರತಿ ಮುಂಬಯಿ ಮಣಕ್ಕೆ | ೦–೬–೦ |
| ಮಂಗಳೂರ, ದೇಶೀ ಮತ್ತು ನೆಲಕ್ಕೆ ಹಾಕುವ ಹಂಚುಗಳು | ಪ್ರತಿ ೧೦೦ರೂ. ಬೆಲೆಗೆ | ೧–೯–೦ |
| ಸಿಮೆಂಟ ಮತ್ತು ಸಿಮೆಂಟಿನ ಸಾಮಾನುಗಳು | ,, | ೧–೯–೦ |
| ಸುಣ್ಣ, ಸುಣ್ಣದ ಕಲ್ಲು | ,, | ೧–೯–೦ |
| ಕಟ್ಟಡದ ಉದ್ದೇಶಗಳಿಗಾಗಿ ಉಸುಕು ಮತ್ತು ಹರಳುಗಳು | ,, | ೧–೯–೦ |
| ಕಟ್ಟಡದ ಉದ್ದೇಶಗಳಿಗಾಗಿ ಕಬ್ಬಿಣ, ಉಕ್ಕು ಅಥವಾ ಇವುಗಳಿಂದ ತಯಾರಾದ ಸಾಮಾನುಗಳು | ,, | ೨–೦–೦ |
| ಎಲ್ಲ ನಮೂನೆಯ ಬಣ್ಣಗಳು ಮತ್ತು ಬಣ್ಣದ ಎಣ್ಣೆಗಳು | ,, | ೧–೯–೦ |
| ಕಟ್ಟಿಗೆ | ,, | ೧–೯–೦ |
| (ಬ) ಅರಿವೆ | | |
| ನೂಲಿನದು | ,, | ೧–೯–೦ |
| ರೇಶಿಮೆಯದು | ,, | ೨–೦–೦ |
| ಉಣ್ಣೆಯದು | ,, | ೨–೮–೦ |
| ಹತ್ತಿಯ, ರೇಶಿಮೆಯ, ಕೃತ್ರಿಮ ರೇಶಿಮೆಯ ಮತ್ತು ಉಣ್ಣೆಯ ನೂಲು | ,, | ೦–೧೨–೬ |
| (ಕ) ಮೆತ್ತಗಿನ ಕೊಕ, ಬಿರುಸ ಕೊಕ ಮತ್ತು ಕಲ್ಲಿದ್ದಲಿಯಿಂದ ತಯಾರಿಸಲ್ಪಟ್ಟ ಬೇರೆ ಪದಾರ್ಥಗಳು. | ಪ್ರತಿಒಂದು ಟನ್ನಿಗೆ | ೦– ೪–೦ |
| ಸ್ಟೀಮಕೋಲ ಮತ್ತು ಸ್ಲ್ಯಾಕಕೋಲ | ಟನ್ನಿಗೆ | ೦– ೮–೦ |

* ಟೀಪು:— ಕೋಲ ಅಂದರೆ ಕಲ್ಲಿದ್ದಲಿ, ಕೋಕವು ಕಲ್ಲಿದ್ದಲಿಯ ಒಂದು ಪ್ರಕಾರ. ಇದ್ದಲಿಯ ಮೇಲೆ ಆಕ್ಟ್ರಾಯ ಹೇರಿಲ್ಲ

| | | |
|---|---|---|
| (ಡ) ಎಲ್ಲ ನಮೂನೆಯ ಮಿಠಾಯಿ ಮತ್ತು ಸಿಹಿ ಪದಾರ್ಥಗಳು | ಪ್ರತಿ ೧೦೦ ರೂ. ಬೆಲೆಗೆ | ೧–೯–೦ |
| (ಈ) ಟೆಂಗಿನಕಾಯಿ ಮತ್ತು ಖೊಬ್ರಿ | ,, | ೦–೧೨–೬ |
| (ಫ) ಚೂರಿ, ಚಾಕು, ಕತ್ತರಿ ಮೊದಲಾದವು ಮತ್ತು ಕಬ್ಬಿಣ ಸಾಮಾನುಗಳು. | ,, | ೨–೦–೦ |
| (ಗ) ಹತ್ತಿಯು ಮತ್ತು ಇತರ ಎಣ್ಣೆ ಕಾಳುಗಳು | ಪ್ರತಿ ಮುಂಬೈ ಮಣಕ್ಕೆ | ೦–೩–೦ |
| (ಹ) ನೂಲಿನ, ರೇಶಿಮೆಯ ಅಥವಾ ಉಣ್ಣೆಯ ಹೆಣೆದ ಸಾಮಾನುಗಳು (ಟೊಪ್ಪಿಗೆ ಮತ್ತು ತಯಾರಿ ಬಟ್ಟೆಗಳನ್ನೊಳಗೊಂಡು) | ಪ್ರತಿ ೧೦೦ ರೂ. ಬೆಲೆಗೆ | ೩–೦–೦ |
| (ಇ) ಚಿಮಣಿ ಎಣ್ಣೆ | ಪ್ರತಿ ಡಬ್ಬಿಗೆ | ೦–೮–೦ |
| (ಜ) ಅಡಿಕೆ ಮತ್ತು ಉತ್ತತ್ತಿ | ಪ್ರತಿ ೧೦೦ ರೂ ಬೆಲೆಗೆ | ೧–೯–೦ |
| (ಕ) ಎಣ್ಣೆಗಳು :— ಖೊಬ್ರಿ ಎಣ್ಣೆ, ಸೇಂಗಾ ಎಣ್ಣೆ, ಕುಸುಬಿ ಎಣ್ಣೆ, ಎಳ್ಳೆಣ್ಣೆ, ಔಡಲ ಎಣ್ಣೆ | ಪ್ರತಿ ೧೦೦ ರೂ ಬೆಲೆಗೆ | ೦–೪–೦ |
| (ಲ) ಸಿಗಾರ, ಸಿಗಾರೇಟ ಮತ್ತು ಬೀಡಿಗಳು | ,, | ೧–೯–೦ |
| (ಲ.ಲ) ತಂಬಾಕು | ,, | ೦–೧೩–೦ |
| (ಮ) ಇತರ ವಸ್ತುಗಳು :— ಒಣಮೆಣಸಿನಕಾಯಿ, ಬಳ್ಳೊಳ್ಳಿ, ಉಳ್ಳೀಗಡ್ಡಿ, ಅಂಟು, ಮಸಾಲೆ ಸಾಮಾನುಗಳು ಇತ್ಯಾದಿ. | ಪ್ರತಿ ಮುಂಬಯಿ ಮಣಕ್ಕೆ | ೦–೨–೦ |
| (ನ) ಕಡ್ಡಿಪೆಟ್ಟಿಗೆ ನಾಶಿಪುಡಿ ಸಾಬಾಣಗಳು | ಪ್ರತಿ ೧೦೦ ರೂ. ಬೆಲೆಗೆ | ೦–೧೨–೬ |
| (ಓ) ಎಲ್ಲ ವಿಧದ ಸಕ್ಕರೆ, ಸಕ್ಕರೆಯ ಪದಾರ್ಥಗಳು, ಬೆಲ್ಲ | ಪ್ರತಿ ಮುಂಬಯಿ ಮಣಕ್ಕೆ | ೬–೬–೦ |
| (ಪ) ಚಹ, ಕಾಫಿ, ಕೊಕೊ | ಪ್ರತಿ ೧೦೦ ರೂ. ಬೆಲೆಗೆ | ೧–೯–೦ |

**ಟಿಪ್ಪಣಿ ೧— ( ಅಪವಾದಗಳು ) —**

(೧) ಸರಕಾರದ ಇಲ್ಲವೆ ಸ್ಥಾನಿಕ ಸಂಸ್ಥೆಗಳ (ಲೋಕಲ್ ಫಂಡಿನ ಉದ್ದೇಶಗಳಿಗಾಗಿ) ಎಲ್ಲ ಸಂಗ್ರಹಗಳು

(೨) ಸರಕಾರ ಅಥವಾ ಸ್ಥಾನಿಕ ಸಂಸ್ಥೆಗಳ ಸೇವಕರ ಸ್ವಂತ ಆಸ್ತಿ (ವಸ್ತುಗಳು)

(೩) ಕೈನೂಲಿನ ಮತ್ತು ಕೈಮಗ್ಗದ ಖಾದಿ ಇವು ಆಕ್ಟ್ರಾಯದಿಂದ ಮುಕ್ತವಿರುತ್ತವೆ

ಆಕ್ಟ್ರಾಯ ಮೇರೆಯೊಳಗೆ ಆಯಾತಮಾಡಿದ ಸರಕುಗಳಿಗಾಗಿ ಆಯಾತ ಮಾಡಿದವನು ಆಕ್ಟ್ರಾಯ ಸಂಬಂಧ ಕೊಡಬೇಕಾದ ಹಣದ ಬಗ್ಗೆ ಭಿನ್ನಾಭಿಪ್ರಾಯವಾದರೆ, ಆಕ್ಟ್ರಾಯದಲ್ಲಿದ್ದ ನಾಕೆದಾರನು, ಕೊಡತಕ್ಕ ಕರದ ಹಣವನ್ನು ನಿರ್ಧರಿಸುವದಕ್ಕೆ ಆ ಸರಕುಗಳನ್ನು ಸರಪಂಚನ ಅಥವಾ ಈ ಸಂಬಂಧದಲ್ಲಿ ಅಧಿಕಾರ ಪಡೆದ ಪಂಚಾಯತಿಯ ಸೇವಕನ ಮುಂದೆ, ಆಯಾತ ಮಾಡುವವನು ಒಯ್ಯುವಂತೆ ಮಾಡಬೇಕು.

(೪) ಮೇಲಿನ ಪರಿಶಿಷ್ಟದಲ್ಲಿ ನಮೂದಿಸಿದ ಎಲ್ಲ ಸರಕುಗಳು ಪುಕ್ಕಟೆಯಾಗಿ ಇಲ್ಲವೆ ವಿಶೇಷ ಸೋಯಿ (ಕನ್ಸೆಶನ್)ದರದಿಂದ ಮಾರಲ್ಪಡುತ್ತಿದ್ದ ಮತ್ತು ಕಲೆಕ್ಟರರು ಈ ಬಗ್ಗೆ (ಪುಕ್ಕಟೆ ಅಥವಾ ಸೋಯಿದರದ ಬಗ್ಗೆ) ಸರ್ಟಿಫಿಕೇಟ ಕೊಟ್ಟಿದ್ದರೆ, ಟೋಲ ಹೇರಲ್ಪಡಬಾರದು

೨೦. ಹೀಗೆ ಕೊಡಲ್ಪಟ್ಟ ಹಣದ ಬಗ್ಗೆ ಪಾವತಿಯು ಕೊಡಲ್ಪಡತಕ್ಕದ್ದು. ಇಂಥ ಪಾವತಿಯು ಪಂಚಾಯತದಿಂದ ಠರಾಯಿಸಲ್ಪಡಬಹುದಾದ ನಮೂನೆಯಲ್ಲಿ ಇರತಕ್ಕದ್ದು.

---

## ಭಾಗ ೫.

### ವಿವಾಹ, ದತ್ತಕ ಮತ್ತು ಸುಖ ಭೋಜನಗಳ ಮೇಲಿನ ಕರ.

೨೧. (೧) ವಿವಾಹ, ದತ್ತಕ ಮತ್ತು ಸುಖ ಭೋಜನಗಳ ಮೇಲೆ ಕರವನ್ನು ಕೂಡ್ರಿಸಬೇಕೆಂದು ನಿಶ್ಚಯಿಸುವ ಪಂಚಾಯತವು, ಈ ಭಾಗಕ್ಕೆ ಜೋಡಿಸಲಾದ ಪರಿಶಿಷ್ಟದಲ್ಲಿ ಅನುಕ್ರಮವಾಗಿ ನಿರ್ದಿಷ್ಟಗೊಳಿಸಲ್ಪಟ್ಟ ವರ್ಗಗಳ ಪ್ರಕಾರ ಮತ್ತು ದರಗಳ ಪ್ರಕಾರ ಕರವನ್ನು ಕೂಡ್ರಿಸತಕ್ಕದ್ದು.

ಆದರೆ ಗೊತ್ತುಪಡಿಸುವದೇನಂದರೆ, ಈ ಕಾನೂನುಗಳು ಮಾಡಲ್ಪಟ್ಟ ತಾರೀಖಿನ ಲಗತು ಪೂರ್ವದಲ್ಲಿ ಯಾವದೊಂದು ಪಂಚಾಯತವು ಇಂಥ ಕರವನ್ನು ಕೂಡ್ರಿಸುತ್ತ ಬಂದಿದ್ದರೆ, ಪಂಚಾಯತವು, ಸದರಿ ತಾರೀಖಿನ ಲಗತು ಹಿಂದಿನ ತಾರೀಖದ ದಿವಸ ಅಮಲಿನಲ್ಲಿದ್ದ ದರಗಳ ಪ್ರಕಾರ ಕರವನ್ನು ಕೂಡ್ರಿಸತಕ್ಕದ್ದು.

(೨) ಸದರಿ ಪರಿಶಿಷ್ಟದ ಉದ್ದೇಶದ ಸಲುವಾಗಿ ಯಾವದೊಂದು ವಿವಾಹದ, ದತ್ತಕದ ಅಥವಾ ಸುಖ ಭೋಜನದ ವರ್ಗವನ್ನು ಪಂಚಾಯತವು ನಿರ್ಣಯಿಸತಕ್ಕದ್ದು. ಪಂಚಾಯತ

ದಿಂದ ಮಾಡಲ್ಪಟ್ಟ ವರ್ಗೀಕರಣದಿಂದ ಅಸಂತುಷ್ಟನಾದ ಯಾವನೇ ಮನುಷ್ಯನು, ಮಾಮಲೇದಾರನಿಗೆ ಅಪೀಲು ಮಾಡಬಹುದು ಮತ್ತು ಮಾಮಲೇದಾರನ ನಿರ್ಣಯವು ಕೊನೆಯದಾಗುವದು.

(೩) (೧)ನೇ ಪೋಟ-ಕಾನೂನಿನಲ್ಲಿ ನಿರ್ದಿಷ್ಟಗೊಳಿಸಲ್ಪಟ್ಟ ದರಗಳು, ಸನ್ ೧೯೩೪ನೇ ಇಸವಿಯ ಡಿಸೆಂಬರ ತಿಂಗಳ ೧೮ನೇ ತಾರೀಖಿನ ಜನರಲ್ ಡಿಪಾರ್ಟಮೆಂಟನೊಳಗಿನ ಸರಕಾರೀ ಜಾಹೀರನಾಮೆ ನಂಬರು ಎಸ್. ೧೭೪ (೧) ಇದರಲ್ಲಿ ಗೊತ್ತುಪಡಿಸಲ್ಪಟ್ಟ ಪರಾಕಾಷ್ಠಕ್ಕೆ ಒಳಪಟ್ಟು ಇರತಕ್ಕದ್ದು.

೨೨ (೧) ಗ್ರಾಮದಲ್ಲಿ ತಂದೆಯೆಂದಾಗಲೀ, ಪಾಲಕನೆಂದಾಗಲಿ ಅಥವಾ ಇತರ ಯಾವದೇ ನಾತೆಯಿಂದಾಗಲೀ ವಿವಾಹವನ್ನು ಮಾಡುವ ಮನುಷ್ಯನು, ಇಂಥ ವಿವಾಹದ ತಾರೀಖಿಗಿಂತ ಏನಿಲ್ಲೆಂದರೂ ಮೂರು ದಿವಸಗಳ ಪೂರ್ವದಲ್ಲಿ ಅದರ ನೋಟೀಸನ್ನು ಮತ್ತು ಅದರ ಜೊತೆಗೆ ವಿವಾಹದ ಬಗ್ಗೆ ಮಾಡಲ್ಪಡಬಹುದಾದ ವೆಚ್ಚದ ಬಗ್ಗೆ ಮಾಹಿತಿಯನ್ನು ಸರಪಂಚನಿಗೆ ಕೊಡತಕ್ಕದ್ದು.

(೨) ಗ್ರಾಮದಲ್ಲಿ ಹುಡುಗನನ್ನು ದತ್ತಕ ತೆಗೆದುಕೊಳ್ಳುವ ಮನುಷ್ಯನು, ಇಂಥ ದತ್ತಕದ ತಾರೀಖಿಗಿಂತ ಏನಿಲ್ಲೆಂದರೂ ಮೂರು ದಿವಸಗಳ ಪೂರ್ವದಲ್ಲಿ, ಅದರ ನೋಟೀಸನ್ನು ಮತ್ತು ಅದರ ಜೊತೆಗೆ ದತ್ತಕದ ತಾರೀಖಿನ ದಿವಸ ದತ್ತಕ ತೆಗೆದುಕೊಳ್ಳುವವನ ಆಸ್ತಿಯ ಬೆಲೆಯ ಬಗ್ಗೆ ಮಾಹಿತಿಯನ್ನು ಕೊಡತಕ್ಕದ್ದು.

(೩) ವಿವಾಹದ ಕಾಲಕ್ಕೆ ಅಥವಾ ದತ್ತಕದ ವೇಳೆಗೆ ಮಾಡಿಸುವ ಸುಖ ಭೋಜನವನ್ನು ಬಿಟ್ಟು ಗ್ರಾಮದಲ್ಲಿ ಸುಖ ಭೋಜನವನ್ನು ಮಾಡಿಸುವ ಮನುಷ್ಯನು, ಇಂಥ ಸುಖ ಭೋಜನದ ತಾರೀಖಿಗಿಂತ ಏನಿಲ್ಲೆಂದರೂ ಮೂರು ದಿವಸಗಳ ಪೂರ್ವದಲ್ಲಿ, ಅದರ ನೋಟೀಸನ್ನು ಮತ್ತು ಇಂಥ ಸುಖ ಭೋಜನದ ಬಗ್ಗೆ ಮಾಡಬೇಕೆಂದು ಯೋಚಿಸಲ್ಪಟ್ಟ ವೆಚ್ಚದ ರಕಮಿನ ಬಗ್ಗೆ ಮಾಹಿತಿಯನ್ನು ಕೊಡತಕ್ಕದ್ದು.

೨೩. (ಅ) ೨೨ (೧), (೨), ಮತ್ತು (೩) ಕಲಮಿನಲ್ಲಿ ಹೇಳಿದ ಮಾಹಿತಿಯನ್ನು ಯಾವದೇ ಮನುಷ್ಯನು ಕೊಡದಿದ್ದರೆ, ಅವನನ್ನು ಈ ರೀತಿಯ ದುರ್ಲಕ್ಷಕ್ಕಾಗಿ, ಅತಿ ಹೆಚ್ಚು ದರದಪ್ರಕಾರ ಕರವನ್ನು ಕೊಡಲು ಯಾಕೆ ಗುರಿ ಮಾಡಬಾರದೆಂಬ ವಿಷಯವಾಗಿ ನೋಟೀಸು ಮುಟ್ಟಿದ ಏಳು ದಿನಗಳಲ್ಲಿ ಕಾರಣ ಕೊಡಲು ಸರಪಂಚನಿಂದ ಅವನಿಗೆ ಒಂದು ನೋಟೀಸು ತೆಗೆಯಲ್ಪಡುವದು.

ಈ ನೋಟೀಸಿಗೆ ಇಂಥ ಮನುಷ್ಯನಿಂದ ಉತ್ತರ ದೊರೆಯಲಿ ಅಥವಾ ದೊರೆಯದಿರಲಿ, ನೋಟೀಸಿನ ಮುದ್ದತು ಮುಗಿದ ಬಳಿಕ ಪಂಚಾಯತಿಯು ಅವನ ಮೇಲೆ ಹೇರಬೇಕಾಗುವ ಕರದ ಬಗ್ಗೆ ವಿಚಾರ ಮಾಡುವದು ಮತ್ತು ಅದರ ನಿರ್ಣಯವೇ ಕೊನೆಯದಾಗುವದು.

೨೪. ೨೨ನೇ ಕಾನೂನಿನಲ್ಲಿ ನೋಟಿಸನ್ನು ಕೊಡಬೇಕಾಗಿರುವ ಮನುಷ್ಯನು ೨೧ನೇ ಕಾನೂನಿನನ್ವಯ ಕೂಡ್ರಿಸಲ್ಪಟ್ಟ ಕರವನ್ನು ಕೊಡತಕ್ಕದ್ದು.

## ಪರಿಶಿಷ್ಟ [ ಕಾನೂನು ೨೧ ]

| | ಕರದ ದರ | | |
|---|---|---|---|
| | ರೂ | ಆ. | ಪೈ. |
| (ಅ) ವಿವಾಹ-ವರ್ಗ— | | | |
| (೧) ೧,೦೦೦ ಕ್ಕಿಂತ ಹೆಚ್ಚಿಗೆ ರೂಪಾಯಿಗಳನ್ನು ವೆಚ್ಚ ಮಾಡಬೇಕೆಂದು ಯೋಚಿಸಲ್ಪಟ್ಟ .. .... | ೫ | ೦ | ೦ |
| (೨) ೫೦೦ ಕ್ಕಿಂತ ಹೆಚ್ಚಿಗೆ ಆದರೆ ೧,೦೦೦ಕ್ಕಿಂತ ಕಡಿಮೆ ರೂಪಾಯಿಗಳನ್ನು ವೆಚ್ಚ ಮಾಡಬೇಕೆಂದು ಯೋಚಿಸಲ್ಪಟ್ಟ | ೨ | ೦ | ೦ |
| (೩) ೨೦೦ಕ್ಕಿಂತ ಹೆಚ್ಚಿಗೆ ಆದರೆ ೫೦೦ಕ್ಕಿಂತ ಕಡಿಮೆ ರೂಪಾಯಿಗಳನ್ನು ವೆಚ್ಚ ಮಾಡಬೇಕೆಂದು ಯೋಚಿಸಲ್ಪಟ್ಟ .... | ೧ | ೦ | ೦ |
| (೪) ೧೦೦ಕ್ಕಿಂತ ಹೆಚ್ಚಿಗೆ ಆದರೆ ೨೦೦ಕ್ಕಿಂತ ಕಡಿಮೆ ರೂಪಾಯಿಗಳನ್ನು ವೆಚ್ಚ ಮಾಡಬೇಕೆಂದು ಯೋಚಿಸಲ್ಪಟ್ಟ .... | ೦ | ೮ | ೦ |
| (ಬ) ದತ್ತಕ-ವರ್ಗ— | | | |
| (೧) ದತ್ತಕ ತೆಗೆದುಕೊಳ್ಳುವ ತಾರೀಖಿನ ದಿವಸ ದತ್ತಕ ತೆಗೆದುಕೊಳ್ಳುವ ಮನುಷ್ಯನ ಆಸ್ತಿಯ ಕಿಮ್ಮತ್ತು ೫,೦೦೦ ರೂಪಾಯಿಗಿಂತ ಹೆಚ್ಚಿಗೆ ಇದ್ದ .... .... | ೫ | ೦ | ೦ |
| (೨) ದತ್ತಕ ತೆಗೆದುಕೊಳ್ಳುವ ತಾರೀಖಿನ ದಿವಸ ದತ್ತಕ ತೆಗೆದುಕೊಳ್ಳುವ ಮನುಷ್ಯನ ಆಸ್ತಿಯ ಕಿಮ್ಮತ್ತು ೨,೦೦೦ ರೂಪಾಯಿಗಿಂತ ಹೆಚ್ಚಿಗೆ ಆದರೆ ೫,೦೦೦ ರೂಪಾಯಿಗಿಂತ ಕಡಿಮೆ ಇದ್ದ .... .... .... .... | ೨ | ೦ | ೦ |
| (೩) ದತ್ತಕ ತೆಗೆದುಕೊಳ್ಳುವ ತಾರೀಖಿನ ದಿವಸ ದತ್ತಕ ತೆಗೆದುಕೊಳ್ಳುವ ಮನುಷ್ಯನ ಆಸ್ತಿಯ ಕಿಮ್ಮತ್ತು ೧,೦೦೦ ರೂಪಾಯಿಗಿಂತ ಹೆಚ್ಚಿಗೆ ಆದರೆ ೨,೦೦೦ ರೂಪಾಯಿಗಿಂತ ಕಡಿಮೆ ಇದ್ದ ... .... ... .... | ೧ | ೦ | ೦ |
| (೪) ದತ್ತಕ ತೆಗೆದುಕೊಳ್ಳುವ ತಾರೀಖಿನ ದಿವಸ ದತ್ತಕ ತೆಗೆದುಕೊಳ್ಳುವ ಮನುಷ್ಯನ ಆಸ್ತಿಯ ಕಿಮ್ಮತ್ತು ೫೦೦ ರೂಪಾಯಿಗಿಂತ ಹೆಚ್ಚಿಗೆ ಆದರೆ ೧,೦೦೦ ರೂಪಾಯಿಗಿಂತ ಕಡಿಮೆ ಇದ್ದ .... ... .... .... ... | ೦ | ೮ | ೦ |
| (ಕ) ಸುಖ ಭೋಜನಗಳು-ವರ್ಗ— | | | |
| (೧) ೫೦೦ರೂಪಾಯಿಗಿಂತ ಹೆಚ್ಚಿಗೆ ವೆಚ್ಚವನ್ನು ಮಾಡಬೇಕೆಂದು ಯೋಚಿಸಲ್ಪಟ್ಟ ... . .... ... | ೩ | ೦ | ೦ |

(೨) ೨೫೦ ರೂಪಾಯಿಗಳಿಗಿಂತ ಹೆಚ್ಚಿಗೆ ಆದರೆ ೫೦೦ ರೂ. ಗಿಂತ ಕಡಿಮೆ ವೆಚ್ಚವನ್ನು ಮಾಡಬೇಕೆಂದು ಯೋಚಿಸಲ್ಪಟ್ಟ .... ೨ ೦ ೦

(೩) ೧೦೦ ರೂಪಾಯಿಗಳಿಗಿಂತ ಹೆಚ್ಚಿಗೆ ಆದರೆ ೨೫೦ ರೂ. ಗಿಂತ ಕಡಿಮೆ ವೆಚ್ಚವನ್ನು ಮಾಡಬೇಕೆಂದು ಯೋಚಿಸಲ್ಪಟ್ಟ . ೧ ೦ ೦

(೪) ೫೦ ರೂಪಾಯಿಗಿಂತ ಹೆಚ್ಚಿಗೆ ಆದರೆ ೧೦೦ ರೂಪಾಯಿಗಿಂತ ಕಡಿಮೆ ವೆಚ್ಚವನ್ನು ಮಾಡಬೇಕೆಂದು ಯೋಚಿಸಲ್ಪಟ್ಟ . ೦ ೮ ೦

---

## ಭಾಗ ೬

## ಸಾಮಾನ್ಯ ಭಂಗೀ ಪಟ್ಟಿ.

೨೪ ಈ ಭಾಗದಲ್ಲಿ, ವಿಷಯದ ಅಥವಾ ಸಂದರ್ಭದ ಮೇಲಿಂದ ಯಾವದೇ ಬಾಧೆ ಬಾರದಿದ್ದರೆ—

(೧) "ಪಟ್ಟಿ" ಅಂದರೆ ಸಾಮಾನ್ಯ ಭಂಗೀ ಪಟ್ಟಿ ಎಂದರ್ಥವಾಗುತ್ತದೆ;

(೨) "ಮನೆ" ಅಂದರೆ, ಒಂದೇ ಆವಾರದಲ್ಲಿರುವ ಮತ್ತು ಒಬ್ಬನೇ ಭೋಗವಟೆ ಮಾಡುವವನಿಂದ ಉಪಯೋಗಿಸಲ್ಪಡುವ ಯಾವದೇ ಇಮಾರತು ಇಲ್ಲವೆ ಇಮಾರತುಗಳ ಗುಂಪು ಎಂದು ಅರ್ಥವಾಗುತ್ತದೆ;

(೩) "ಭೋಗವಟೆ ಮಾಡುವವನು" ಇದರಲ್ಲಿ, ಮಾಲಕನೆಂದಾಗಲಿ, ಮಾಲಕನ ಏಜಂಟನೆಂದಾಗಲಿ, ಬಾಡಿಗೇದಾರನೆಂದಾಗಲಿ ಯಾವನ ಪ್ರತ್ಯಕ್ಷ ತಾಬೆಯಲ್ಲಿ ಆ ಮನೆಯು ಇರುವದೋ ಆ ಮನುಷ್ಯನ ಸಮಾವೇಶವಾಗುತ್ತದೆ, ಮತ್ತು

(೪) "ಮಾಲಕನು" ಇದರಲ್ಲಿ ಮನೆಯ ಬಾಡಿಗೆಯನ್ನು, ಸದರಿ ಮನೆಯು ಬಾಡಿಗೆಯಿಂದ ಕೊಡಲ್ಪಟ್ಟಿದ್ದರೆ, ತಕ್ಕೊಳ್ಳುವ ಅಥವಾ ತಕ್ಕೊಳ್ಳಲಿಕ್ಕೆ ಬಾಧ್ಯನಿರುವ ಮನುಷ್ಯನ ಸಮಾವೇಶವಾಗುತ್ತದೆ

೨೫. (೧) ಪಟ್ಟಿಯನ್ನು ಕೂಡ್ರಿಸಬೇಕೆಂದು ನಿಶ್ಚಯಿಸುವ ಪಂಚಾಯತವು, ಗ್ರಾಮದ ಹದ್ದುಗಳಲ್ಲಿ ವಾಸಿಸಲ್ಪಟ್ಟ ಅಥವಾ ಭೋಗವಟೆ ಮಾಡಲ್ಪಟ್ಟ ಎಲ್ಲ ಮನೆಗಳ ಮೇಲೆ, ಈ ಭಾಗಕ್ಕೆ ಜೋಡಿಸಲಾದ ಪರಿಶಿಷ್ಟದಲ್ಲಿ ನಿರ್ದಿಷ್ಟ ಮಾಡಲ್ಪಟ್ಟ ದರದ ಪ್ರಕಾರ, ಪಟ್ಟಿಯನ್ನು ಕೂಡ್ರಿಸತಕ್ಕದ್ದು.

೨೬. ಸದರಿ ಪಟ್ಟಿಯು, ಎಪ್ರಿಲ ತಿಂಗಳ ೧ನೇ ತಾರೀಖಿನಿಂದ ಆರಂಭವಾಗುವ ಮತ್ತು ಮಾರ್ಚ ತಿಂಗಳ ೩೧ನೇ ತಾರೀಖಿಗೆ ಮುಗಿಯುವ ವರ್ಷದ ಬಗ್ಗೆ ಕೂಡ್ರಿಸಲ್ಪಡತಕ್ಕದ್ದು. ಎಪ್ರಿಲ ತಿಂಗಳ ೧ನೇ ತಾರೀಖಿನ ದಿವಸವಲ್ಲದ ಬೇರೆ ಯಾವದೇ ದಿವಸದಿಂದ

ಸದರಿ ಪಟ್ಟಿಯು ಅಮಲಿನಲ್ಲಿ ಬಂದರೆ ಲಗತು ನಂತರದ ಜುಲೈ ೧ನೇ ತಾರೀಖಿಗೆ, ಅಕ್ಟೋಬರ ೧ನೇ ತಾರೀಖಿಗೆ, ಜನವರಿ ೧ನೇ ತಾರೀಖಿಗೆ ಮತ್ತು ಎಪ್ರಿಲ ೧ನೇ ತಾರೀಖಿಗೆ ಮುಗಿಯುವ ತ್ರೈಮಾಸಿಕದ ಬಗ್ಗೆ ಮತ್ತು ಅದರ ನಂತರ ಪ್ರತಿ ವರ್ಷದ ಬಗ್ಗೆ ಪಟ್ಟಿಯನ್ನು ಕೊಡ್ರಿಸತಕ್ಕದ್ದು.

೨೭. (೧) ಸದರಿ ಪಟ್ಟಿಯು ಮನೆಯ ಭೋಗವಟಿದಾರನಿಂದ— ಅವನು ಮನೆಯ ಮಾಲಕನಿದ್ದರೆ— ಮುಖ್ಯವಾಗಿ ವಸೂಲ ಮಾಡಲ್ಪಡತಕ್ಕದ್ದು.

(೨) ಮನೆಯು ಸ್ವತಃ ಮಾಲಕನಿಂದ ಭೋಗವಟಿ ಮಾಡಲ್ಪಡದಿದ್ದರೆ, ಸದರಿ ಪಟ್ಟಿಯು—

(ಅ) ಮನೆಯು ಬಾಡಿಗೆಯಿಂದ ಕೊಡಲ್ಪಟ್ಟಿದ್ದರೆ, ಬಾಡಿಗೆ ಕೊಡುವವನಿಂದ,

(ಬ) ಮನೆಯು ಪೋಟ-ಬಾಡಿಗೆಗೆ ಕೊಡಲ್ಪಟ್ಟಿದ್ದರೆ, ವರಿಷ್ಠ ಬಾಡಿಗೆಗೆ ಕೊಡುವವನಿಂದ,

(ಕ) ಅದು ಬಾಡಿಗೆಯಿಂದ ಕೊಡಲ್ಪಟ್ಟಿದ್ದಿಲ್ಲವಾದರೆ ಅದನ್ನು ಬಾಡಿಗೆಗೆ ಅಧಿಕಾರವಿರುವ ಮನುಷ್ಯನಿಂದ—

ಮುಖ್ಯವಾಗಿ ವಸೂಲ ಮಾಡಲ್ಪಡತಕ್ಕದ್ದು

(೩) ಸದರಿ ಪಟ್ಟಿಯ ಬಗ್ಗೆ ಯಾವದೊಂದು ರಕಮು, ಅದು ಮುಖ್ಯವಾಗಿ ಕೊಡಲಿಕ್ಕೆ ಪಾತ್ರವಿರುವ ಮನುಷ್ಯನ ಕಡೆಯಿಂದ ವಸೂಲಾಗದಿದ್ದರೆ, ಅದು ಯಾವ ಮನೆಯ ಸಂಬಂಧದಿಂದ ಸಲ್ಲತಕ್ಕದ್ದಾಗಿರುವದೋ ಅದರ ಯಾವದೇ ಭಾಗವನ್ನು ಭೋಗವಟಿ ಮಾಡುವವನ ಕಡೆಯಿಂದ, ಆ ರಕಮಿನ ಯಾವ ಭಾಗವು ಸದರಿ ಮನೆಯ ಆ ಭಾಗದ ಬಗ್ಗೆ ಪ್ರಮಾಣಕ್ಕೆ ಸರಿಯಾಗಿ ವಸೂಲ ಮಾಡಲಿಕ್ಕೆ ಬರಬಹುದಾದ ಭಾಗವೆಂದು ಸರಪಂಚನು ಠರಾಯಿಸುವಷ್ಟು ಭಾಗವನ್ನು ವಸೂಲ ಮಾಡಬಹುದು.

## ಪರಿಶಿಷ್ಟ [ ಕಾನೂನು ೨೫. ]

### ಪಟ್ಟಿಯ ದರ

ಮನೆಯ ಭಂಡವಾಳದ ಬೆಲೆಯು ೧೫,೦೦ ರೂಪಾಯಿಗೆ ಮೀರದಿದ್ದಾಗ್ಗೆ, ಸದರಿ ಮನೆಯ ಭಂಡವಾಳದ ಬೆಲೆಯ ಪ್ರತಿ ನೂರು ರೂಪಾಯಿಗೆ ಪ್ರತಿ ವರ್ಷಕ್ಕೆ ೪ ಆಣೆಗಳು, ಅಥವಾ ಮನೆಯ ವಾರ್ಷಿಕ ಬಾಡಿಗೆಯ ಬೆಲೆಯು ೪೫ ರೂಪಾಯಿಗೆ ಮೀರದಿದ್ದಾಗ್ಗೆ, ಸದರಿ ಮನೆಯ ವಾರ್ಷಿಕ ಬಾಡಿಗೆಯ ಬೆಲೆ ಪ್ರತಿ ೩ ರೂಪ ಯಿಗೆ ಪ್ರತಿ ವರ್ಷಕ್ಕೆ ೪ ಆಣೆಗಳು; ಮತ್ತು

ಸದರಿ ಮನೆಯ ಭಂಡವಾಳದ ಬೆಲೆಯು ೧,೫೦೦ ರೂಪಾಯಿಗೆ ಮೀರಿದಾಗ್ಗೆ, ಪ್ರತಿ ವರ್ಷಕ್ಕೆ ೪ ರೂಪಾಯಿ, ಅಥವಾ ಸದರಿ ಮನೆಯ ವಾರ್ಷಿಕ ಬಾಡಿಗೆಯ ಬೆಲೆಯು ೪೫ ರೂಪಾಯಿಗೆ ಮೀರಿದಾಗ್ಗೆ ೪ ರೂಪಾಯಿ.

ಮುಂಬೈ ಸಬರ್ಬನ್ ಜಿಲ್ಹೆಯಲ್ಲಿ ಮಾತ್ರ ವಾರ್ಷಿಕ ಬಾಡಿಗೆಯ ಬೆಲೆಯು ೧೬೦ರೂ ಕ್ಕಿಂತ ಹೆಚ್ಚಿಗಿದ್ದರೆ ನೂರಕ್ಕೆ ೨ರೂ. ಪ್ರಮಾಣದಂತೆ

ವಿರವಣೆ— ಈ ಪರಿಶಿಷ್ಟದ ಉದ್ದೇಶಗಳ ಸಲುವಾಗಿ "ಭಂಡವಾಳದ ಬೆಲೆ" ಮತ್ತು "ವಾರ್ಷಿಕ ಬಾಡಿಗೆಯ ಬೆಲೆ" ಅಂದರೆ, ಸದರಿ ಆ್ಯಕ್ಟಿನ ೮೯ (೨) (೧)ನೇ ಕಲಮಿನನ್ವಯ ಗ್ರಾಮದಲ್ಲಿಯ ಮನೆಗಳ ಮತ್ತು ಭೂಮಿಯ ಮಾಲಕರ ಅಥವಾ ಭೋಗವಟಿದಾರರ ಮೇಲಿನ ಕರದ ಆಕರಣೆಯ ಉದ್ದೇಶದ ಸಲುವಾಗಿ ತಯಾರ ಮಾಡಲ್ಪಟ್ಟ ಆಕರಣೆಯ ಯಾದಿಯಲ್ಲಿ ನೋಂದಿಸಲ್ಪಟ್ಟ ಭಂಡವಾಳದ ಬೆಲೆ ಮತ್ತು ವಾರ್ಷಿಕ ಬಾಡಿಗೆಯ ಬೆಲೆ ಎಂದರ್ಥವಾಗ ತಕ್ಕದ್ದು

---

## ಭಾಗ ೭.

### ವಿಶಿಷ್ಟ ಭಂಗೀ ಪಟ್ಟಿ

೨೮. ಈ ಭಾಗದಲ್ಲಿ ವಿಷಯದ ಅಥವಾ ಸಂದರ್ಭದ ಮೇಲಿಂದ ಯಾವದೇ ಬಾಧೆ ಬಾರದಿದ್ದರೆ—

(೧) "ಪಟ್ಟಿ" ಅಂದರೆ ವಿಶಿಷ್ಟ ಭಂಗೀ ಪಟ್ಟಿ ಎಂದರ್ಥವಾಗುತ್ತದೆ.

(೨) "ಕುಟುಂಬ" ಅಂದರೆ, ಒಂದೇ ಮನೆಯಲ್ಲಿ ಒಟ್ಟಿಗೆ ಕೂಡಿ ಇರುವ ಮತ್ತು ಊಟ ಮಾಡುತ್ತಿರುವ ಜನರ ಸಮೂಹವೆಂದು ಅರ್ಥವಾಗುತ್ತದೆ, ಮತ್ತು ಅದರಲ್ಲಿ, ಮನೆಗೆ ಬಂದವರ, ಅತಿಥಿಗಳ ಮತ್ತು ನೌಕರರ ಸಮಾವೇಶ ವಾಗುತ್ತದೆ.

(೩) "ಮನೆ" ಮತ್ತು "ಮಾಲಕನು" ಎಂಬ ಶಬ್ದಗಳ ಅರ್ಥವು, ಸದರಿ ಕಾನೂನು ಗಳ ಭಾಗ ೬ ರಲ್ಲಿ ಕೊಟ್ಟಂತೆ ಇರುವದು.

೨೯. (೧) ಸದರಿ ಪಟ್ಟಿಯನ್ನು ಕೂಡ್ರಿಸಬೇಕೆಂದು ನಿಶ್ಚಯಿಸುವ ಪಂಚಾಯತವು, ಮನೆಗೆ ಜೋಡಿಸಲ್ಪಟ್ಟ ಪ್ರತಿಯೊಂದು ಪಾಯಖಾನೆಯ ಅಥವಾ ಶೌಚಕೂಪದ ಮೇಲೆ ಅಥವಾ ಇಂಥ ಪಾಯಖಾನೆಯನ್ನು ಅಥವಾ ಶೌಚಕೂಪವನ್ನು ಉಪಯೋಗಿಸುವ ಪ್ರತಿ ಯೊಂದು ಕುಟುಂಬದ ಮೇಲೆ, ಈ ಭಾಗಕ್ಕೆ ಜೋಡಿಸಲ್ಪಟ್ಟ ಪರಿಶಿಷ್ಟದಲ್ಲಿ ಗೊತ್ತುಮಾಡ ಲ್ಪಟ್ಟ ದರದ ಪ್ರಕಾರ ಅದನ್ನು ಕೂಡ್ರಿಸತಕ್ಕದ್ದು

೩ ಪಂಚಾಯತವು—

(ಅ) ಪಾಯಖಾನೆಯನ್ನು ಅಥವಾ ಶೌಚಕೂಪವನ್ನು ಮನುಷ್ಯರಿಂದ ಸ್ವಚ್ಛ ಮಾಡಿಸುವದರ ಸಲುವಾಗಿ ಅಥವಾ ಅವುಗಳ ನೀರನ್ನು ಪಂಚಾಯತದ ಗಟಾರು ಗಳಲ್ಲಿ ಬಿಡುವದರ ಅಥವಾ ಹೋಗುವದರ ಸಲುವಾಗಿ ತಜವೀಜು ಮಾಡಿದ ಹೊರ್ತು ಮತ್ತು ಮಾಡುವ ವರೆಗೆ;

(ಬ) ಪಟ್ಟಿ ಕೂಡ್ರಿಸಲ್ಪಡತಕ್ಕ ಜನರಿಗೆ ಪ್ರತ್ಯೇಕವಾಗಿಯಾಗಲೀ ಪಟ್ಟಿಯನ್ನು ಕೂಡ್ರಿಸಲ್ಪಡತಕ್ಕ ಗ್ರಾಮದ ಅಥವಾ ಗ್ರಾಮದ ಭಾಗದ ರಹಿವಾಸಿಗಳಿಗೆ ಸಾಮಾನ್ಯವಾಗಿಯಾಗಿರಲಿ, ಇಂಥ ತಜವೀಜು ಮಾಡುವ ಮತ್ತು ಪಟ್ಟಿಯನ್ನು ಕೂಡ್ರಿಸುವ ಪಂಚಾಯತದ ಇಚ್ಛೆಯ ಬಗ್ಗೆ ಒಂದು ತಿಂಗಳ ನೋಟೀಸನ್ನು ಕೊಟ್ಟ ಹೊರ್ತು ಹಾಗೂ ಕೊಡುವವರೆಗೆ,

೨೯ನೇ ಕಾನೂನಿನನ್ವಯ ಯಾವದೇ ಪಟ್ಟಿಯು ಕೂಡ್ರಿಸಲ್ಪಡತಕ್ಕದ್ದಲ್ಲ.

೩೧. ಸದರಿ ಪಟ್ಟಿಯು, ಎಪ್ರಿಲ ತಿಂಗಳ ೧ನೇ ತಾರೀಖಿನಿಂದ ಆರಂಭವಾಗುವ ಮತ್ತು ಮಾರ್ಚ ತಿಂಗಳ ೩೧ನೇ ತಾರೀಖಿಗೆ ಮುಗಿಯುವ ವರ್ಷದ ಬಗ್ಗೆ ಕೂಡ್ರಿಸಲ್ಪಡತಕ್ಕದ್ದು. ಎಪ್ರಿಲ ತಿಂಗಳ ೧ನೇ ತಾರೀಖಿನ ದಿವಸವಲ್ಲದೆ ಬೇರೆ ಯಾವದೇ ದಿವಸದಿಂದ ಸದರಿ ಪಟ್ಟಿಯು ಅಮಲಿನಲ್ಲಿ ಬಂದರೆ, ಲಗತು ಮುಂದಿನ ಜುಲೈ ೧ನೇ ತಾರೀಖಿಗೆ, ಅಕ್ಟೋಬರ ೧ನೇ ತಾರೀಖಿಗೆ, ಜನವರಿ ೧ನೇ ತಾರೀಖಿಗೆ ಮತ್ತು ಎಪ್ರಿಲ ೧ನೇ ತಾರೀಖಿಗೆ ಮುಗಿಯುವ ತ್ರೈಮಾಸಿಕದ ಬಗ್ಗೆ ಮತ್ತು ಅದರ ನಂತರ ಪ್ರತಿ ವರ್ಷದ ಬಗ್ಗೆ ಪಟ್ಟಿಯನ್ನು ಕೂಡ್ರಿಸತಕ್ಕದ್ದು

೩೨ ಸದರಿ ಪಟ್ಟಿಯು, ಪಾಯಖಾನೆಯು ಅಥವಾ ಶೌಚಕೂಪವು ಜೋಡಿಸಲ್ಪಟ್ಟ ಮನೆಯ ಮಾಲಕನಿಂದ ವಸೂಲ ಮಾಡಲ್ಪಡತಕ್ಕದ್ದು ಮತ್ತು ಅವನು ಹೀಗೆ ಕೊಡಲಿಕ್ಕೆ ತಪ್ಪಿದರೆ, ಸದರಿ ಪಟ್ಟಿಯು ಸಲ್ಲಬೇಕಾಗಿರುವ ಅವಧಿಯೊಳಗೆ ಯಾವದೇ ವೇಳೆಯಲ್ಲಿ ಪಾಯಖಾನೆಯನ್ನು ಅಥವಾ ಶೌಚಕೂಪವನ್ನು ಪ್ರತ್ಯಕ್ಷವಾಗಿ ಉಪಯೋಗಿಸುತ್ತಿರುವ ಯಾರಾದರೂ ಜನರ ಕಡೆಯಿಂದ ವಸೂಲ ಮಾಡಲ್ಪಡತಕ್ಕದ್ದು. ಯಾವದೊಂದು ಪಾಯಖಾನೆಯು ಅಥವಾ ಶೌಚಕೂಪವು ಒಂದಕ್ಕಿಂತ ಹೆಚ್ಚಿಗೆ ಕುಟುಂಬಗಳಿಂದ ಉಪಯೋಗ ಮಾಡಲ್ಪಡುತ್ತಿದ್ದರೆ, ಮತ್ತು ಸದರಿ ಪಟ್ಟಿಯ ದರವು ಪ್ರತಿಯೊಂದು ಕುಟುಂಬದ ಮೇಲೆ ಗೊತ್ತುಮಾಡಲ್ಪಟ್ಟಿದ್ದರೆ, ಅದು ಇಂಥ ಕುಟುಂಬಗಳು ವಾಸಿಸುತ್ತಿರುವ ಮನೆಯ ಇಲ್ಲವೆ ಮನೆಗಳ ಮಾಲಕನಿಂದ ಪ್ರಥಮತಃ ವಸೂಲಾಗತಕ್ಕದ್ದು, ಮತ್ತು ಆ ಮಾಲಕನು ಇಲ್ಲದೆ ವಸೂಲಿ ಕೊಡಲು ತಪ್ಪಿದಲ್ಲಿ ಅದು ಪಾಯಖಾನೆಯನ್ನು ಅಥವಾ ಶೌಚಕೂಪವನ್ನು ಉಪಯೋಗ ಮಾಡುತ್ತಿರುವ ಪ್ರತಿಯೊಂದು ಕುಟುಂಬದ ಮುಖ್ಯಸ್ಥನಿಂದ ವಸೂಲ ಮಾಡಲ್ಪಡತಕ್ಕದ್ದು.

೩೩. ಯಾವದೇ ಪಾಯಖಾನೆಯು ಅಥವಾ ಶೌಚಕೂಪವು ಮೂರು ತಿಂಗಳಿಗಿಂತ ಕಡಿಮೆಯಲ್ಲದ ಅವಧಿಯ ವರೆಗೆ ಪಾಯಖಾನೆಯೆಂದು ಅಥವಾ ಶೌಚಕೂಪವೆಂದು ಉಪಯೋಗ ಮಾಡುವದರಿಂದ ನಿಲ್ಲಿಸಲ್ಪಟ್ಟಿದ್ದರೆ, ಪಂಚಾಯತವು, ಸದರಿ ಅವಧಿಯ ಸಲುವಾಗಿ ಪಾಯಖಾನೆಯ ಅಥವಾ ಶೌಚಕೂಪದ ಬಗ್ಗೆ ಕೂಡ್ರಿಸಲ್ಪಟ್ಟ ಪಟ್ಟಿಯು ಎಲ್ಲ ರಕಮನ್ನು ಅಥವಾ ಅಂಥ ರಕಮಿನ ಯಾವದೊಂದು ಭಾಗವನ್ನು ತಿರುಗಿ ಕೊಡಬಹುದು.

ಆದರೆ ಗೊತ್ತು ಪಡಿಸುವದೇನಂದರೆ, ಯಾವದೊಂದು ಪಾಯಖಾನೆಯು ಅಥವಾ ಶೌಚಕೂಪವು ಉಪಯೋಗ ಮಾಡಲ್ಪಡುವದರಿಂದ ನಿಲ್ಲಿಸಲ್ಪಟ್ಟದೆಯೆಂಬ ಬಗ್ಗೆ ಪಂಚಾಯತಕ್ಕೆ

ಬರಹ ಮೂಲಕವಾದ ನೋಟೀಸು ಕೊಡಲ್ಪಟ್ಟಿಲ್ಲವಾದರೆ, ಸದರಿ ರಕಮು ತಿರುಗಿ ಕೊಡಲ್ಪಡ ತಕ್ಕದ್ದಲ್ಲ. ಆದರೆ ಇನ್ನೂ ಗೊತ್ತುಪಡಿಸುವದೇನಂದರೆ, ಇಂಥ ನೋಟೀಸನ್ನು ಕೊಟ್ಟ ತಾರೀಖಿನ ಪೂರ್ವದ ಯಾವದೇ ಅವಧಿಯ ಬಗ್ಗೆ ಸದರಿ ರಕಮು ತಿರಿಗಿ ಕೊಡಲ್ಪಡತಕ್ಕದ್ದಲ್ಲ

## ಪರಿಶಿಷ್ಟ [ ಕಾನೂನು ೨೯. ]

### ಪಟ್ಟಿಯು ದರವು

| ಗ್ರಾಮ ಪಂಚಾಯತದ ಹೆಸರು | ೨೯ನೇ ಕಾನೂನಿನನ್ವಯ ನಿರ್ದಿಷ್ಟ ಮಾಡಿದ ದರ. |
|---|---|
| ಎಲ್ಲ ಗ್ರಾಮಪಂಚಾಯತಗಳು | ಪ್ರತಿಯೊಂದು ಪಾಯಖಾನೆಗೆ ಅಥವಾ ಶೌಚಕೂಪಕ್ಕೆ ಪ್ರತಿವರ್ಷಕ್ಕೆ ೨೪ ರೂಪಾಯಿ, ಅಥವಾ ಯಾವದೊಂದು ಪಾಯಖಾನೆಯನ್ನು ಅಥವಾ ಶೌಚಕೂಪವನ್ನು ಉಪಯೋಗಿಸುವ ಪ್ರತಿಯೊಂದು ಕುಟುಂಬಕ್ಕೆ ಪ್ರತಿ ವರ್ಷಕ್ಕೆ ೨೪ ರೂಪಾಯಿ, ಮತ್ತು ಅದೇ ಕುಟುಂಬವು ಉಪಯೋಗಿಸುವ ಪ್ರತಿಯೊಂದು ಹೆಚ್ಚಿನ ಪಾಯಖಾನೆಗೆ ಅಥವಾ ಶೌಚಕೂಪಕ್ಕೆ ೧೨ ರೂಪಾಯಿ |
| ಸರಕಾರಿ ಠರಾವ ನಂ ೧೭೪ (೧) ತಾ ೬-೧-೧೯೫೧ | ಪ್ರತಿಯೊಂದು ಪಾಯಖಾನೆಗೆ ಅಥವಾ ಶೌಚಕೂಪಕ್ಕೆ ಪ್ರತಿವರ್ಷಕ್ಕೆ ೧೬ ರೂಪಾಯಿ, ಅಥವಾ ಯಾವದೊಂದು ಪಾಯಖಾನೆಯನ್ನು ಅಥವಾ ಶೌಚಕೂಪವನ್ನು ಉಪಯೋಗಿಸುವ ಪ್ರತಿಯೊಂದು ಕುಟುಂಬಕ್ಕೆ ಪ್ರತಿ ವರ್ಷಕ್ಕೆ ೧೨ |

ರೂಪಾಯಿ, ಮತ್ತು ಅದೇ ಕುಟುಂಬದಿಂದ ಉಪಯೋಗಿಸಲ್ಪಡುತ್ತಿದ್ದ ಪ್ರತಿಯೊಂದು ಹೆಚ್ಚಿನ ಪಾಯಖಾನೆಗೆ ಅಥವಾ ಶೌಚಕೂಪಕ್ಕೆ ೬ ರೂಪಾಯಿ

---

## ಭಾಗ ೮.

### ಮಾರ್ಕೆಟು ಮತ್ತು ವಾರದ ಸಂತೆಯ ಮೇಲಿನ ಫೀಗಳು.

೩೪ (೧) ಮಾರ್ಕೆಟುಗಳ ಮೇಲ ಸೀಗಳನ್ನು ಅಥವಾ ವಾರದ ಸಂತೆಗಳ ಮೇಲಿ ಸೀಯನ್ನು, ಪ್ರಸಂಗವಿದ್ದಂತೆ, ಕೂಡ್ರಿಸಬೇಕೆಂದು ಸಿಶ್ಚಯಿಸುವ ಯಾವದೊಂದು ಪಂಚಾಯತವು, ಈ ಭಾಗಕ್ಕೆ ಜೋಡಿಸಲ್ಪಟ್ಟ ಪರಿಶಿಷ್ಟದಲ್ಲಿ ನಿರ್ದಿಷ್ಟಗೊಳಿಸಿದ ದರಗಳ ಪ್ರಕಾರ ಕೂಡ್ರಿಸತಕ್ಕದ್ದು.

೩೫. ಪಂಚಾಯತವು, ಜಿಲ್ಹಾ ಮ್ಯಾಜಿಸ್ಟ್ರೇಟನ ಸಮ್ಮತಿ ಪಡೆದು, ಮಾರ್ಕೆಟುಗಳ ಮೇಲಿನ ಫೀಯು ಕೂಡ್ರಿಸಲ್ಪಡತಕ್ಕ ಕ್ಷೇತ್ರದ ಹದ್ದುಗಳನ್ನು ಮತ್ತು ಸಂತೆಗಳ ಮೇಲಿನ ಸೀಯು ಕೂಡ್ರಿಸಲ್ಪಡತಕ್ಕ ಕ್ಷೇತ್ರದ ಹದ್ದುಗಳನ್ನು ನಿಶ್ಚಯಿಸತಕ್ಕದ್ದು

೩೬. ಯಾವನೇ ಮನುಷ್ಯನು, ೩೫ನೇ ಕಾನೂನಿನನ್ವಯ ಠರಾಯಿಸಲ್ಪಟ್ಟ ಹದ್ದುಗಳೊಳಗೆ, ಅಂಗಡಿಯ ಅಥವಾ ಛಪ್ಪರದ ಕಾರಣದ ಬಗ್ಗೆ ಅಥವಾ ಯಾವದೇ ತರದ ವ್ಯಾಪಾರ ಮಾಡುವದರ ಸಲುವಾಗಿ ಪ್ರಸಂಗವಿದ್ದ ಪ್ರಕಾರ ಮಾರ್ಕೆಟಿನಲ್ಲಿ ಅಥವಾ ವಾರದ ಸಂತೆಯಲ್ಲಿ, ೩೪ನೇ ಕಾನೂನಿನನ್ವಯ ಕೂಡ್ರಿಸಲ್ಪಡುವ ಸೀಗಳ ರಕಮನ್ನು ಕೊಟ್ಟು ಪಂಚಾಯತದಿಂದ ಪರ್ಮಿಟು ತೆಗೆದುಕೊಂಡ ಹೊರತು, ಯಾವದೇ ತೆರೆದ ಸ್ಥಳವನ್ನು ಅಥವಾ ಭೂಮಿಯನ್ನು ಭೋಗವಟಿ ಮಾಡತಕ್ಕದ್ದಲ್ಲ.

**೩೬. ಅ** ಯಾವದೇ ಮನುಷ್ಯನು ರೂಲ ೩೬ನೆದ್ದರಲ್ಲಿ ಹೇಳಿದಂತೆ ಪರಮಿಟ ಪಡೆಯದೇ ಯಾವದೇ ಸ್ಥಳವನ್ನು ಅಥವಾ ಭೂಮಿಯ ಭಾಗವನ್ನು ಭೋಗವಟಿ ಮಾಡಿದರೆ, ನಿರ್ದಿಷ್ಟ ದರಗಳ ಎರಡಷ್ಟು ಕರ ಕೊಡಲು ಗುರಿಯಾಗಬೇಕಾಗುವದು.

**೩೬. ಬ** ಪಂಚಾಯತಿಯಿಂದ ಅಧಿಕಾರ ಪಡೆದ ಯಾವದೇ ಮನುಸ್ಯನು ರೂಲ ೩೬ ಅ ದ ಪ್ರಕಾರ ಬರುವ ಪಂಚಾಯತದ ಹಣವನ್ನು ಪರಮಿಟ ಪಡೆಯದೇ ಮಾಲನ್ನು ತಂದಾಗ ಅದೇ ಸ್ಥಳದಲ್ಲಿ ಆದರಲ್ಲಿಯ ಸಾಕಷ್ಟು ಮಾಲನ್ನು ತೆಗೆದುಕೊಂಡು ಮಾರಿ ವಸೂಲ ಮಾಡಬೇಕು

೩೭. ಮಾರ್ಕೆಟಿನ ಬಾಬತಿನಲ್ಲಿಯ ಪರ್ಮಿಟು, ಅದು ಕೊಡಲ್ಪಟ್ಟ ಅವಧಿಯು ಮುಗಿಯುವ ವರೆಗೆ ಕಾಯದೇಶೀರವಾಗುವದು, ಮತ್ತು ವಾರದ ಸಂತೆಯ ಬಾಬತಿನಲ್ಲಿಯ ಪರ್ಮಿಟಿನಲ್ಲಿ ನಿರ್ದಿಷ್ಟಗೊಳಿಸಲ್ಪಟ್ಟ ಸಂತೆಯ ದಿನದ ಸಲುವಾಗಿ ಕಾಯದೇಶೀರವಾಗುವದು.

೩೮. ಪಂಚಾಯತದಿಂದ ಅಧಿಕಾರ ಕೊಡಲ್ಪಟ್ಟ ಮನುಷ್ಯನು ಫೀಯ ರಕಮನ್ನು ತೆಗೆದುಕೊಳ್ಳತಕ್ಕದ್ದು, ಅದರ ಬಗ್ಗೆ ಪಾವತಿಯನ್ನು ಕೊಡತಕ್ಕದ್ದು ಮತ್ತು ಆಮೇಲೆ ಪರ್ಮಿಟನ್ನು ಕೊಡತಕ್ಕದ್ದು

೩೯. ೩೮ನೇ ಕಾನೂನಿನನ್ವಯ ಕೊಡಲಾಗುವ ಪಾವತಿಯು ಹಾಗೂ ಪರ್ಮಿಟಿನ ನಮೂನೆಯನ್ನು ಪಂಚಾಯತವು ನಿರ್ಣಯಿಸತಕ್ಕದ್ದು.

೪೦. ಒಮ್ಮೆ ವಸೂಲ ಮಾಡಲ್ಪಟ್ಟ ಫೀಯೊಳಗಿಂದ ಸೂಟು ಕೊಡಲ್ಪಡಲಿಕ್ಕಿಲ್ಲ ಅಥವಾ ಯಾವದೇ ರಕಮು ತಿರುಗಿ ಕೊಡಲ್ಪಡಲಿಕ್ಕಿಲ್ಲ

೪೧. ಈ ಕಾನೂನುಗಳು, ಸನ್ ೧೯೩೯ನೇ ಇಸವಿಯ ಮುಂಬಯಿಯ ಒಕ್ಕಲತನದ ಹುಟ್ಟುವಳಿಯ ಮಾರ್ಕೆಟುಗಳ ವಿಷಯದ ಆಕ್ಟಿನ ಉದ್ದೇಶಗಳ ಸಲುವಾಗಿ ಸ್ಥಾಪಿಸಲ್ಪಟ್ಟ ಮಾರ್ಕೆಟಿಗೆ ಲಾಗೂ ಆಗಲಿಕ್ಕಿಲ್ಲ.

## ಪರಿಶಿಷ್ಟ [ ಕಾನೂನು ೩೪ ]

### ಫೀಯ ದರ

೯ ಚೌರಸ ಫೂಟಿಗಿಂತ ಹೆಚ್ಚಿಗೆ ಆಳತೆಯಾಗದಂಥ ಪ್ರತಿಯೊಂದು ತೆರೆದ ಜಾಗೆಯ ಬಗ್ಗೆ ಪ್ರತಿ ದಿನಕ್ಕೆ ಎರಡು ಆಣೆ ಅಥವಾ ಪ್ರತಿ ತಿಂಗಳಿಗೆ ೩ ರೂಪಾಯಿ, ಮತ್ತು

೯ ಚೌರಸ ಫೂಟಿನ ಪ್ರತಿಯೊಂದು ಹೆಚ್ಚಿನ ತೆರೆದ ಜಾಗೆಯ ಅಥವಾ ಆದರ ಭಾಗದ ಬಗ್ಗೆ ಪ್ರತಿ ದಿನಕ್ಕೆ ಒಂದು ಆಣೆ ಅಥವಾ ಪ್ರತಿ ತಿಂಗಳಿಗೆ ರೂ. ೧–೮–೦.

ವ್ಯಾಪಾರದ ಉದ್ದೇಶಗಳಿಗಾಗಿ ಪೇಟೆಗೆ ಅಥವಾ ಸಂತೆಗೆ ತರಲ್ಪಟ್ಟ ಯಾವದೇ ಸರಕಿಗಾಗಿ ಒಂದು ಬುಟ್ಟಿಗೆ ೬ ಪೈ ಅಥವಾ ಒಂದು ಚೀಲಕ್ಕೆ ೩ ಆಣೆ ಅಥವಾ (೧೬ ಮುಂಬೈ ಮಣದ) ಪ್ರತಿ ಚಕ್ಕಡಿ ವಜ್ಜೆಗೆ ೧೨ ಆಣೆಗಳು

---

## ಭಾಗ ೯.

### ವಾಹನಗಳ ಹಾಗೂ ಪ್ರಾಣಿಗಳ ಮೇಲಿನ ಜಕಾತಿ.

೪೨. ಈ ಭಾಗದಲ್ಲಿ—

(ಅ) "ಪರಿಶಿಷ್ಟ" ಅಂದರೆ, ಈ ಭಾಗಕ್ಕೆ ಜೋಡಿಸಲ್ಪಟ್ಟ ಪರಿಶಿಷ್ಟವೆಂದರ್ಥ ವಾಗುತ್ತದೆ ;

(ಬ) “ವಾಹನ” ಅಂದರೆ, ಪರಿಶಿಷ್ಟದ ೧ನೇ ಆಸನದಲ್ಲಿ ನಿರ್ದಿಷ್ಟ ಮಾಡಿದ ವಾಹನವೆಂದರ್ಥವಾಗುತ್ತದೆ, ಆದರೆ ಅದರಲ್ಲಿ, ಮೋಟರ ವಾಹನದ ಅಥವಾ ಟ್ರೇಲರದ ಸಮಾವೇಶವಾಗುವದಿಲ್ಲ.

೪೩. (೧) ಯಾವದೊಂದು ಜಾತ್ರೆ ಅಥವಾ ಉತ್ಸವದ ಕ್ಷೇತ್ರದೊಳಗೆ ಪ್ರವೇಶಿಸುವ, ಪರಿಶಿಷ್ಟದ ೧ನೇ ಆಸನದಲ್ಲಿ ನಿರ್ದಿಷ್ಟ ಮಾಡಿದ ಪ್ರಾಣಿಗಳ ಹಾಗೂ ವಾಹನಗಳ ಮೇಲೆ ಜಕಾತಿಯನ್ನು ಕೂಡ್ರಿಸಬೇಕೆಂದು ನಿಶ್ಚಯಿಸುವ ಪಂಚಾಯತವು, ಪರಿಶಿಷ್ಟದ ೨ನೇ ಆಸನದಲ್ಲಿ ಅವುಗಳ ಮುಂದೆ ನಿರ್ದಿಷ್ಟ ಮಾಡಿದ ದರಗಳ ಪ್ರಕಾರ ಅದನ್ನು ಕೂಡ್ರಿಸತಕ್ಕದ್ದು.

(೨) (೧)ನೇ ಪೋಟ-ಕಾನೂನಿನಲ್ಲಿ ಉಲ್ಲೇಖಿಸಲ್ಪಟ್ಟ ದರಗಳು, ಸನ್ ೧೯೪೪ನೇ ಇಸವಿಯ ಜನವರಿ ತಿಂಗಳ ೧೦ನೇ ತಾರೀಖಿನ ಜನರಲ್ ಡಿಪಾರ್ಟಮೆಂಟನೊಳಗಿನ ಸರಕಾರೀ ಜಾಹೀರನಾಮೆ ನಂಬರು ಎಸ್. ೧೭೪(೧) ಇದರಿಂದ ಸುಧಾರಿಸಲ್ಪಟ್ಟ, ಸನ್ ೧೯೩೪ನೇ ಇಸವಿಯ ಡಿಸೆಂಬರ ತಿಂಗಳ ೧೮ನೇ ತಾರೀಖಿನ ಸರಕಾರೀ ಜಾಹೀರನಾಮೆ ನಂಬರು ಎಸ್. ೧೭೪(೧) ಇದರಲ್ಲಿ ಗೊತ್ತುಪಡಿಸಲ್ಪಟ್ಟ ಪರಾಕಾಷ್ಠಕ್ಕೆ ಒಳಪಟ್ಟು ಇರತಕ್ಕದ್ದು.

೪೪. ಪಂಚಾಯತವು, ಜಿಲ್ಹಾ ಲೋಕಲ್ ಬೋರ್ಡದ ಮತ್ತು ಕಲೆಕ್ಟರನ ಮುಂಚಿತವಾಗಿ ಪಡೆದ ಸಮ್ಮತಿಯಿಂದ, ೪೩ನೇ ಕಾನೂನಿನನ್ವಯ ಜಕಾತಿಯನ್ನು ಕೂಡ್ರಿಸುವದರ ಉದ್ದೇಶದ ಸಲುವಾಗಿ ಯಾವದೊಂದು ಜಾತ್ರೆಯ ಅಥವಾ ಉತ್ಸವದ ಕ್ಷೇತ್ರದ ಹದ್ದುಗಳನ್ನು ನಿರ್ಣಯಿಸತಕ್ಕದ್ದು.

೪೫. ೪೩ನೇ ಕಾನೂನಿನನ್ವಯ ಒಂದು ದಿವಸದಲ್ಲಿ ಒಂದು ಸಾರೆಗಿಂತ ಹೆಚ್ಚಿಗೆ ಜಕಾತಿಯು ಕೂಡಿಸಲ್ಪಡತಕ್ಕದ್ದಲ್ಲ (ಮಧ್ಯರಾತ್ರಿಯಿಂದ ಮುಂದಿನ ಮಧ್ಯರಾತ್ರಿಯವರೆಗೆ ಒಂದು ದಿವಸವೆಂದು ಎಣಿಸಲ್ಪಡತಕ್ಕದ್ದು).

೪೬. ಯಾವದೊಂದು ಪ್ರಾಣಿಯ ಮೇಲೆ ಇಂಥ ಪ್ರಾಣಿಯಿಂದ ಎಳೆಯಲ್ಪಡುವ ಯಾವದೊಂದು ವಾಹನದ ಮೇಲೆ ಜಕಾತಿಯು ಕೂಡ್ರಿಸಲ್ಪಡತಕ್ಕದ್ದಲ್ಲ.

**೪೭. (೧) ಸರಕಾರೀ ನೌಕರರ ಸಾಮಾನುಗಳನ್ನು, ಅಥವಾ ಜಾತ್ರೆಯ ಅಥವಾ ಉತ್ಸವದ ಕ್ಷೇತ್ರದಲ್ಲಿ ಕೆಲಸದ ಮೇಲೆ ಇರುವ ಪಂಚಾಯತದ ಮೆಂಬರರ ಮತ್ತು ನೌಕರರ ಸಾಮಾನುಗಳನ್ನು ಒಯ್ಯುವ ವಾಹನದ ಅಥವಾ ಪ್ರಾಣಿಯ ಬಾಬತಿನಲ್ಲಿ;**

**(೨) ಗೊಬ್ಬರವನ್ನು, ತಮ್ಮ ಹೊಲಗಳ ಒಕ್ಕಲತನದ ಹುಟ್ಟುವಳಿಯನ್ನು ಅಥವಾ ಉಪಕರಣಗಳನ್ನು ಒಯ್ಯುವ ಗ್ರಾಮದಲ್ಲಿಯ ಸಾಗುವಳಿದಾರರ ಬಂಡಿಗಳ ಬಾಬತಿನಲ್ಲಿ; ಮತ್ತು**

(೬) ಪ್ರತಿಯೊಂದು ಎಮ್ಮೆ, ಗಂಡು ಕುದುರೆ ಹೆಣ್ಣು ಕುದುರೆ, ಬೀಜ ತೆಗೆದ ಕುದುರೆ, ಟಾಕಣ, ಹೇಸರಗತ್ತೆ, ಎತ್ತು, ಆಕಳು, ಮಣಕ, ಇವರ ಮೇಲೆ . .... ೦ ೧ ೦

(೭) ಪ್ರತಿಯೊಂದು ಕುದುರೆಯ ಗಂಡು ಮರಿ, ಕುದುರೆಯ ಹೆಣ್ಣು ಮರಿ, ಕರು, ಕತ್ತೆ, ಕುರಿ, ಮೇಕೆ, ನಾಯಿ, ಹಂದಿ, ಇದರ ಮೇಲೆ ... .... .... ೦ ೦ ೬

## ಭಾಗ ೧೨

### ಅಂಗಡಿ ಮತ್ತು ಹಾಟೆಲ್‌ಗಳ ಮೇಲಿನ ಕರ

೫೨. ವಿಷಯದ ಅಥವಾ ಸಂದರ್ಭದ ಮೇಲಿಂದ ಯಾವದೇ ಬಾಧೆ ಬಾರದೇ ಇದ್ದರೆ

(೧) "ಅಂಗಡಿ" ಅಂದರೆ ಯಾವ ಕಟ್ಟಡದಲ್ಲಿ ಸರಕುಗಳು ಕಿರುಗಳ ಅಥವಾ ಥೋಕ ರೀತಿಯಿಂದ ಇಲ್ಲವೆ ಎರಡೂ ರೀತಿಯಿಂದ ಮಾರಲ್ಪಡುತ್ತಡೆಯೋ ಅಥವಾ ಎಲ್ಲ ಗಿರಾಕಿಗಳಿಗೆ ಸೇವೆಯನ್ನು ಸಲ್ಲಿಸಲಾಗಿದೆಯೋ ಅದು ಎಂದರ್ಥ ಮತ್ತು ಇದರಲ್ಲಿ ಇಂಥ ಅಂಗಡಿಗೆ ಜೋಡಿಸಲ್ಪಟ್ಟ ಇಲ್ಲವೆ ಜೋಡಿಸಲ್ಪಡದ ಕಚೇರಿಗಳು ಗೋಡವುನಗಳು, ಸ್ಟೋರ ರೂಮುಗಳು ಮತ್ತು ವಖಾರಗಳು ಸಮಾವೇಶವಾಗುತ್ತವೆ, ಆದರೆ ಹಾಟೆಲ್, ರೆಸ್ಟೋರೆಂಟ. ಭೋಜನಾಲಯ ಅಥವಾ ವಾಣಿಜ್ಯ ಸಂಸ್ಥೆ ಇವುಗಳ ಸಮಾವೇಶವಾಗುವದಿಲ್ಲ.

(೨) "ಹಾಟೆಲ್" ಅಂದರೆ ಆಹಾರ ಪದಾರ್ಥಗಳನ್ನು ಅಥವಾ ಪಾನೀಯಗಳನ್ನು ಇಲ್ಲವೆ ಇವೆರಡನ್ನು ಕೊಡುವ ಭೋಜನಾಲಯ ಮತ್ತು ರೆಸ್ಟಾರೆಂಟ ಎಂದರ್ಥ, ಮತ್ತು "ಹಾಟೆಲಿ" ನಲ್ಲಿ ಭೋಜನಾಲಯ ಮತ್ತು ರೆಸ್ಟಾರೆಂಟಗಳು ಸಮಾವೇಶವಾಗುತ್ತವೆ.

(೩) "ಒಡೆಯ" ಅಂದರೆ, ಮಾಲಕ, ಮ್ಯಾನೇಜರ, ಎಜೆಂಟ ಅಥವಾ ಇಂಥ ಅಂಗಡಿಯ ಇಲ್ಲವೆ ಹಾಟೇಲಿನ ಮೇಲ್ವಿಚಾರಣೆ ಮಾಡುವ ಕಾಲಕ್ಕಿದ್ದ ಯಾವನೇ ಇತರ ಮನುಷ್ಯನೆಂದರ್ಥ, ಮತ್ತು "ಒಡೆಯ" ಶಬ್ದದಲ್ಲಿ ಇವರೆಲ್ಲರ ಸಮಾವೇಶವಾಗುತ್ತದೆ.

೫೩. ಅಂಗಡಿ ಅಥವಾ ಹಾಟೆಲಗಳ ಮೇಲೆ ಕರಹೇರಬೇಕೆಂದು ನಿರ್ಧರಿಸುವ ಪಂಚಾಯತು ಈ ಭಾಗಕ್ಕೆ ಜೋಡಿಸಿದ ಪರಿಶಿಷ್ಟದಲ್ಲಿ ನಿರ್ದಿಷ್ಟಪಡಿಸಿದ ದರಗಳಂತೆ ಕರವನ್ನು ಆಕರಣೆ ಮಾಡಬೇಕು

ಆದರೆ ಗೊತ್ತುಪಡಿಸುವದೇನಂದರೆ, ಪಂಚಾಯತುಗಳಿಂದ, ಸ್ಥಾನಿಕ ಸಂಸ್ಥೆಗಳಿಂದ ಅಥವಾ ಸರಕಾರದವರಿಂದ ತೆರೆಯಲ್ಪಟ್ಟ ಮತ್ತು ನಡೆಸಲ್ಪಡುವ ಅಂಗಡಿಗಳು ಕರದಿಂದ ಮುಕ್ತವಿರುತ್ತವೆ.

೫೪ ಕರವು ಅಂಗಡಿಯ ಅಥವಾ ಹಾಟೇಲಿನ ಒಡೆಯನಿಂದ ಕೊಡಲ್ಪಡಬೇಕು, ಮತ್ತು ಅದನ್ನು ಎಪ್ರೀಲ ೧ರಿಂದ ಪ್ರಾರಂಭವಾಗಿ ಮಾರ್ಚ ೩೧ಕ್ಕೆ ಮುಗಿಯುವ ಇಡೀ ವರ್ಷಕ್ಕಾಗಿ,

ಅಂಗಡಿಯು, ಅಥವಾ ಹಾಟೇಲು ವರ್ಷದ ಯಾವದೇ ಭಾಗದಲ್ಲಿ ತೆರೆಯಲ್ಪಟ್ಟಿದ್ದರೂ ಆಕರಣೆ ಮಾಡಬೇಕು, ಮತ್ತು ಕರವು ಎಪ್ರೀಲ ೧೫ರ ಪೂರ್ವದಲ್ಲಿ ಇಲ್ಲವೆ ಹೊಸ ಅಂಗಡಿಯು ಅಥವಾ ಹಾಟೇಲು ತೆರೆಯಲ್ಪಟ್ಟ ೧೫ ದಿವಸಗಳೊಳಗಾಗಿ ಕೊಡಲ್ಪಡಬೇಕು

೫೫. ಪಂಚಾಯತಿಯ ಸೆಕ್ರೆಟರಿಯು, ಅಥವಾ ಇದರ ಸಂಬಂಧ ಪಂಚಾಯತಿಯಿಂದ ಅಧಿಕಾರ ಪಡೆದ ಮನುಷ್ಯನು ಕರದ ಹಣವನ್ನು ಸ್ವೀಕರಿಸಬೇಕು, ಮತ್ತು ಅದಕ್ಕೆ ಪಾವತಿಯನ್ನು ಕೊಡಬೇಕು

೫೬. ಪಂಚಾಯತು, ಕಲೆಕ್ಟರನ ಅನುಮತಿ ಪಡೆದು ಪಾವತಿಯ ನಮೂನೆಯನ್ನು ಗೊತ್ತು ಮಾಡಬೇಕು.

## ಪರಿಶಿಷ್ಟ

| | | | |
|---|---|---|---|
| ೧. | ಅಂಗಡಿಗಳು | ಪ್ರತಿವರ್ಷಕ್ಕೆ ಕರದ ದರ | ೫–೦–೦ |
| ೨ | ಹಾಟೇಲಗಳು | ,, | ೧೦–೦–೦ |

---

# ಭಾಗ ೧೧

## ಕಾರಖಾನೆ ಮತ್ತು ಗಿರಣಿಗಳ ಮೇಲೆ ಕರ

೫೭. ವಿಷಯದ ಅಥವಾ ಸಂದರ್ಭದ ಮೇಲಿಂದ ಯಾವದೇ ಬಾಧೆ ಬಾರದೆ ಇದ್ದರೆ—

(೧) "ಕಾರಖಾನೆ ಅಥವಾ ಗಿರಣಿ" ಅಂದರೆ, ಯಾವ ಕಟ್ಟಡದಲ್ಲಿ ಯಂತ್ರವು, ಉಗಿ, ಎಣ್ಣೆ ಅಥವಾ ಒಕ್ಕಲತನದ ಉದ್ದೇಶಗಳನ್ನು ಇತರ ಯಾವದೇ ಉದ್ದೇಶಕ್ಕಾಗಿ ನಡೆಯುವದೋ ಅದು ಎಂದರ್ಥ ಮತ್ತು ಕಾರಖಾನೆ ಅಥವಾ ಗಿರಣಿ" ಈ ಶಬ್ದದಲ್ಲಿ ಕಟ್ಟಡದ ಸಮಾವೇಶವಾಗುತ್ತದೆ.

(೨) "ಒಡೆಯ" ಅಂದರೆ, ಮಾಲಿಕ, ಮ್ಯಾನೇಜರ, ಎಜೆಂಟ, ಇಲ್ಲವೆ ಇಂಥ ಕಾರಖಾನೆಯ, ಅಥವಾ ಗಿರಣಿಯ ಮೇಲ್ವಿಚಾರಣೆ ಮಾಡುವ ಕಾಲಕ್ಕಿದ್ದ ಇತರ ಯಾವದೇ ಮನುಷ್ಯನೆಂದರ್ಥ.

೫೮. ಕಾರಖಾನೆ ಅಥವಾ ಗಿರಣಿಯ ಮೇಲೆ ಕರವನ್ನು ಹೇರಲು ನಿರ್ಧರಿಸುವ ಪಂಚಾಯತು ಈ ಭಾಗಕ್ಕೆ ಜೋಡಿಸಿದ ಪರಿಶಿಷ್ಟದಲ್ಲಿ ನಿರ್ದಿಷ್ಟಪಡಿಸಿದ ದರಗಳಂತೆ ಕರವನ್ನು ಆಕರಣೆ ಮಾಡಬೇಕು

೫೯. ಕರವನ್ನು ಕಾರಖಾನೆಯ ಅಥವಾ ಗಿರಣಿಯ ಒಡೆಯನು ಕೊಡಬೇಕು, ಮತ್ತು ಅದನ್ನು ಎಪ್ರೀಲ ೧ರಿಂದ ಪ್ರಾರಂಭವಾಗಿ ಮಾರ್ಚ ೩೧ಕ್ಕೆ ಮುಗಿಯುವ ಇಡೀ ವರ್ಷಕ್ಕಾಗಿ

ಕಾರಖಾನೆಯು ಅಥವಾ ಗಿರಣಿಯು ವರ್ಷದ ಯಾವದೇ ಭಾಗದಲ್ಲಿ ತೆರೆಯಲ್ಪಟ್ಟಿದ್ದರೂ, ಆಕರಣೆ ಮಾಡಬೇಕು. ಮತ್ತು ಕರವು ಎಪ್ರೀಲ ೧೫ರ ಪೂರ್ವದಲ್ಲಿ ಇಲ್ಲವೆ ಹೊಸ ಕಾರ ಖಾನೆಯು ಅಥವಾ ಗಿರಣಿಯು ತೆರೆಯಲ್ಪಟ್ಟ ೧೫ ದಿವಸಗಳೊಳಗಾಗಿ ಕೊಡಲ್ಪಡಬೇಕು.

೬೭. ಪಂಚಾಯತಿಯ ಸೆಕ್ರೆಟರಿ ಅಥವಾ ಇದರ ಬಗ್ಗೆ ಪಂಚಾಯತದಿಂದ ಅಧಿಕಾರ ಪಡೆದ ಮನುಷ್ಯನು ಕರದ ಹಣವನ್ನು ವಸೂಲ ಮಾಡಬೇಕು ಮತ್ತು ಅದಕ್ಕೆ ಪಾವತಿಯನ್ನು ಕೊಡಬೇಕು.

೬೮. ಪಂಚಾಯತಿಯು ಕಲೆಕ್ಟರನ, ಅನುಮತಿಯಿಂದ ಪಾವತಿಯ ನಮೂನೆಯನ್ನು ನಿರ್ಧರಿಸಬೇಕು.

## ಪರಿಶಿಷ್ಟ

| | | ಕರದ ದರ |
|---|---|---|
| | | ರೂ. ಆ. ಪೈ |
| ೧. ಉಗಿಯಿಂದ ಅಥವಾ ಎಣ್ಣೆಯಿಂದ ನಡೆಯುವ ಕಾರಖಾನೆಗಳು ಇಲ್ಲವೆ ಗಿರಣಿಗಳು | ಪ್ರತಿ ವರ್ಷಕ್ಕೆ | ೨೫–೦–೦ |
| ೨. ವಿದ್ಯುಚ್ಛಕ್ತಿಯಿಂದ ನಡೆಯುವ ಕಾರಖಾನೆಗಳು ಅಥವಾ ಗಿರಣಿಗಳು | | ೫೦–೦–೦ |

---

## ಭಾಗ ೧೨

### ಎಸ್. ನಂ. ೧೭೪ (೧) (ಅ) ೨೦–೨–೧೯೫೧.

### ಸಾಮಾನ್ಯ ನೀರಿನ ಪಟ್ಟಿಯು

೬೭. ಈ ಭಾಗದಲ್ಲಿ ವಿಷಯಕ್ಕೆ ಅಥವಾ ಸಂದರ್ಭಕ್ಕೆ ಯಾತರಿಂದಲೂ ಬಾಧೆ ಬಾರದಿದ್ದರೆ,—

(೧) "ಮನೆ", "ಭೋಗವಟೆ ಮಾಡುವವನು" ಹಾಗೂ "ಮಾಲಕನು" ಎಂಬ ಶಬ್ದಗಳಿಗೆ, ಈ ಕಾನೂನುಗಳ ಪೈಕಿ ೬ನೇ ಭಾಗದಲ್ಲಿ ಅವುಗಳಿಗೆ ಕೊಡಲಾದ ಅರ್ಥಗಳೇ ಇರುತ್ತವೆ,

(೨) "ಪಟ್ಟಿ" ಅಂದರೆ ಸಾಮಾನ್ಯ ನೀರಿನ ಪಟ್ಟಿಯು ಎಂದರ್ಥವಾಗುತ್ತದೆ

೬೨. ೮೯ (೨)ನೇ ಕಲಮಿನ (೬)ನೇ ರಕಮಿನನ್ವಯ ಪಟ್ಟಿಯನ್ನು ಕೂಡ್ರಿಸ ಬೇಕೆಂದು ನಿರ್ಣಯಿಸುವ ಪಂಚಾಯತವು, ಮನೆಯ ಕರದ ದರದ ಅರ್ಧದಷ್ಟಕ್ಕೆ ಮೀರದ ದರದ ಮೇರೆಗೆ ಸದರಿ ಗ್ರಾಮದ ಹದ್ದುಗಳೊಳಗೆ ಇದ್ದ ಯಾವತ್ತೂ ಮನೆಗಳ ಮೇಲೆ ಅದನ್ನು ಕೂಡ್ರಿಸತಕ್ಕದ್ದು.

೬೩. ಸದರಿ ಪಟ್ಟಿಯು, ಎಪ್ರೀಲತಿಂಗಳ ೧ನೇ ತಾರೀಖಿನಿಂದ ಪ್ರಾರಂಭವಾಗಿ ಮಾರ್ಚತಿಂಗಳ ೩೧ನೇ ತಾರೀಖಿಗೆ ಮುಗಿಯುವ ವರ್ಷದಬಗ್ಗೆ ಕೂಡ್ರಿಸತಕ್ಕದ್ದು. ಸದರಿ ಪಟ್ಟಿಯು ಎಪ್ರೀಲತಿಂಗಳ ೧ನೇ ತಾರೀಖಿನ ಹೊರ್ತಾಗಿ ಇತರ ಯಾವದೇ ತಾರೀಖಿನ ದಿವಸ ಅಮಲಿನಲ್ಲಿ ಬಂದರೆ, ಅದು, ಲಗತು ನಂತರ ಬರುವ ಜುಲೈತಿಂಗಳ ೧ನೇ ತಾರೀಖಿಗೆ, ಅಕ್ಟೋಬರ ತಿಂಗಳ ೧ನೇ ತಾರೀಖಿಗೆ, ಜಾನೇವಾರಿ ತಿಂಗಳ ೧ನೇ ತಾರೀಖಿಗೆ ಹಾಗೂ ಎಪ್ರೀಲತಿಂಗಳ ೧ನೇ ತಾರೀಖಿಗೆ ಮುಗಿಯುವ ತ್ರೈಮಾಸಿಕದ ಬಗ್ಗೆ ಮತ್ತು ಆ ಬಳಿಕ ಪ್ರತಿ ವರ್ಷದ ಬಗ್ಗೆ ಕೂಡ್ರಿಸತಕ್ಕದ್ದು.

೬೪ (೧) ಸದರಿ ಪಟ್ಟಿಯು, ಸದರ ಮನೆಯ ಪ್ರತ್ಯಕ್ಷ ಭೋಗವಟೆಯನ್ನು ಮಾಡುವ ಮನುಷ್ಯನ ಕಡೆಯಿಂದ,—ಅವನು ಮನೆಯ ಮಾಲಕನಿದ್ದರೆ—, ಪ್ರಥಮತಃ ವಸೂಲು ಮಾಡತಕ್ಕದ್ದು.

(೨) ಸದರಿ ಮನೆಯು ಸದರಿ ಮಾಲಕನಿಂದ ಭೋಗವಟೆ ಮಾಡಲ್ಪಡದಿದ್ದರೆ, ಸದರಿ ಪಟ್ಟಿಯು,—

(ಅ) ಸದರಿ ಮನೆಯು ಬಾಡಿಗೆಯಿಂದ ಕೊಡಲ್ಪಟ್ಟಿದ್ದರೆ, ಒಟ್ಟಿಗೆ ಕೊಡುವವನ ಕಡೆಯಿಂದ,

(ಬ) ಸದರಿ ಮನೆಯು ಪೋಟ ಬಾಡಿಗೆಗೆ ಕೊಡಲ್ಪಟ್ಟಿದ್ದರೆ, ಪರಿಸ್ತ ಪಟ್ಟಿಗೆ ಕೊಡುವವನ ಕಡೆಯಿಂದ,

(ಕ) ಅದು ಭಾಡಿಗೆಯಿಂದ ಕೊಡಲ್ಪಟ್ಟಿರದಿದ್ದರೆ, ಅದನ್ನು ಭಾಡಿಗೆ ಕೊಡುವ ಹಕ್ಕು ನಿರ್ದಿಷ್ಟವಾಗಿರುವ ಮನುಷ್ಯನ ಕಡೆಯಿಂದ,

ಪ್ರಥಮತಃ ವಸೂಲು ಮಾಡತಕ್ಕದ್ದು.

(೩) ಯಾವ ಮನುಷ್ಯನ ಕಡೆಯಿಂದ ಸದರಿ ಪಟ್ಟಿಯ ಬಗ್ಗೆ ಸಲ್ಲತಕ್ಕ ಯಾವದೇ ರಕಮು ಪ್ರಥಮತಃ ವಸೂಲು ಮಾಡಲ್ಪಡಲು ಪಾತ್ರವಿರುವದೋ ಅಂಥ ಮನುಷ್ಯನ ಕಡೆಯಿಂದ ಅದನ್ನು ವಸೂಲು ಮಾಡಲು ತಪ್ಪಿದರೆ, ಯಾವ ಮನೆಯ ಸಂಬಂಧದಿಂದ ಸದರಿ ಪಟ್ಟಿಯು ಸಲ್ಲತಕ್ಕದ್ದಿರುವದೋ ಅಂಥ ಮನೆಯ ಯಾವದೇ ಭಾಗದ ಭೋಗವಟೆಯನ್ನು ಮಾಡುವ ಮನುಷ್ಯನ ಕಡೆಯಿಂದ, ಸದರಿ ಮನೆಯ ಆ ಭಾಗದ ಸಂಬಂಧದಿಂದ ಪ್ರಮಾಣಕ್ಕನುಸಾರವಾಗಿ ವಸೂಲು ಮಾಡಲ್ಪಡಲಿಕ್ಕೆ ಪಾತ್ರವಿರುವದೆಂದು ಸರಪಂಚನು ನಿರ್ಣಯಿಸುವಂಥ ಆ ರಕಮಿನ ಭಾಗವು ವಸೂಲು ಮಾಡಲ್ಪಡಬಹುದು.

(೪) ಸದರಿ ಪಂಚಾಯತವು, ಮಾಲಕನಿಗೆ ಅಥವಾ ಜಿಮ್ಮೆದಾರನಿಗೆ ಯಾವದೇ ಭಾಡಿಗೆಯು ಬರದಿರುವಂಥ, ಧರ್ಮಾದಾಯದ, ಶೈಕ್ಷಣಿಕ ಅಥವಾ ಧಾರ್ಮಿಕ ಉದ್ದೇಶಗಳ ಸಲುವಾಗಿ ಉಪಯೋಗಿಸಲ್ಪಟ್ಟ ಯಾವದೇ ಮನೆಯನ್ನು ಸದರಿ ಪಟ್ಟಿಯನ್ನು ಕೊಡುವದರಿಂದ ಸಂಪೂರ್ಣವಾಗಿ ಅಥವಾ ಅಂಶತಃ ಮಾಫು ಮಾಡಬಹುದು.

೬೫. ನೀರಿನ ಕಾಮಗಿರಿಗಳ ಏರ್ಪಾಡುಗಳಲ್ಲಿ ಯಾವದೇ ಅಪಘಾತವು ಸಂಭವಿಸಿದ ಮೂಲಕ ಅಥವಾ ನೀರಿನ ಪುರವರೆಯು ತಾತ್ಪೂರ್ತಿಕವಾಗಿ ನಿಲ್ಲಿಸಲ್ಪಟ್ಟರೆ, ಸಾಮಾನ್ಯ ನೀರಿನ ಪಟ್ಟಿಯನ್ನು ಕಡಿಮೆ ಮಾಡುವ ಬಗ್ಗೆ ಯಾವದೇ ಹಕ್ಕು ಹೇಳಲ್ಪಡತಕ್ಕದ್ದಲ್ಲ ಮತ್ತು ನಷ್ಟದ ಪರಿಹಾರ ದ್ರವ್ಯದ ಬಗ್ಗೆ ಅಥವಾ ಸದರಿ ಪಟ್ಟಿಯನ್ನು ಕೊಡುವವನಿಗೆ ಉಂಟಾದ ಯಾವದೇ ಹಾನಿಯ ಅಥವಾ ಅನಾನುಕೂಲತೆಯ ಬಗ್ಗೆ ಯಾವದೊಂದು ದಿವಾಣಿ ಕೋರ್ಟಿನಲ್ಲಿ ಸದರಿ ಪಂಚಾಯತವು ಪಾತ್ರವಾಗತಕ್ಕದ್ದಲ್ಲ. ವಿಶಿಷ್ಟ ಬಾಬತುಗಳಲ್ಲಿ, ಸದರಿ ಪಂಚಾಯತವು, ಜಿಲ್ಹಾ ಲೋಕಲ್ ಬೋರ್ಡಿನ ಸಮ್ಮತಿಯನ್ನು ಪಡೆದು, ಒಂದು ತಿಂಗಳಿಗಿಂತ ಹೆಚ್ಚಿಗೆ ಇರುವ ಸತತವಾದ ಅವಧಿಯ ವರೆಗೆ ನೀರಿನ ಪುರವರೆ ನಿಲ್ಲಿಸಲ್ಪಟ್ಟದ್ದರೆ, ಪ್ರಮಾಣಕ್ಕನುಸಾರವಾಗಿ ಸೂಟುಗಳನ್ನು ಕೊಡಬಹುದು.

೬೬ ಈ ಭಾಗದ ಕೆಳಗಿನ ಪಟ್ಟಿಯು ಅದು ಜಿಲ್ಹಾ ಲೋಕಲ್ ಬೋರ್ಡಿನಿಂದ ಪಸಂದ ಮಾಡಲ್ಪಟ್ಟ ಹೊರ್ತು, ಕೂಡ್ರಿಸಲ್ಪಡತಕ್ಕದ್ದಲ್ಲ.

## ಭಾಗ ೧೩.

## ವಿಶಿಷ್ಟ ನೀರಿನ ಪಟ್ಟಿಯು

೬೭. ಈ ಭಾಗದಲ್ಲಿ, ವಿಷಯಕ್ಕೆ ಅಥವಾ ಸಂದರ್ಭಕ್ಕೆ ಯಾತರಿಂದಲೂ ಬಾಧೆ ಬಾರದಿದ್ದರೆ, —

(೧) "ಜೋಡಣೆಯು" ಅಂದರೆ, ನೀರಿನ ಪೈಪಿನ ಯಾವದೋದು ಜೋಡಣೆಯು ಎಂದರ್ಥವಾಗುತ್ತದೆ:

(೨) "ಮನೆ" "ಭೋಗವಟೆ ಮಾಡುವವನು" ಹಾಗೂ 'ಮಾಲಕನು" ಎಂಬ ಶಬ್ದಗಳಿಗೆ, ಈ ಕಾನೂನುಗಳ ಪೈಕಿ ೬ನೇ ಭಾಗದಲ್ಲಿ ಅವುಗಳಿಗೆ ಕೊಡಲಾದ ಅರ್ಥಗಳೆ ಇರುತ್ತವೆ,

(೩) 'ಪಟ್ಟಿ" ಅಂದರೆ, ವಿಶಿಷ್ಟ ನೀರಿನ ಪಟ್ಟಿಯು ಎಂದರ್ಥವಾಗುತ್ತದೆ.

೬೮. (೧) ಯಾವದೇ ಜೋಡಣೆಯು, ಸದರಿ ಮನೆಯ ಮಾಲಕನು ಅಥವಾ ಅವನ ಅಧಿಕೃತ ಏಜಂಟನು ಅಥವಾ ಸದರಿ ಮಾಲಕನ ಲೇಖೀ ಒಪ್ಪಿಗೆಯನ್ನು ಪಡೆದು ಸದರಿ ಮನೆಯ ಭೋಗವಟೆಯನ್ನು ಮಾಡುವ ಮನುಷ್ಯನು, ಅಥವಾ ಧರ್ಮಾದಾಯದ, ಶೈಕ್ಷಣಿಕ ಅಥವಾ ಧಾರ್ಮಿಕ ಉದ್ದೇಶಗಳ ಸಲುವಾಗಿ ಉಪಯೋಗಿಸಲ್ಪಟ್ಟ ಯಾವದೊಂದು ಮನೆಯ ಬಾಬತಿಯಲ್ಲಿ, ಸದರಿ ಧರ್ಮಾದಾಯದ, ಶೈಕ್ಷಣಿಕ ಅಥವಾ ಧಾರ್ಮಿಕ ಸಂಸ್ಥೆಯ ಜಿಮ್ಮೆದಾರರು, ಮ್ಯಾನೇಜರರು ಅಥವಾ ಸಂಚಾಲಕರು ಬರಹ ಮೂಲಕವಾಗಿ ಮಾಡಿದ ಅರ್ಜಿಯ ಮೇಲಿಂದ ಹೊರ್ತಾಗಿ ಕೊಡಲ್ಪಡತಕ್ಕದ್ದಲ್ಲ.

(೨) (೧)ನೇ ಪೋಟ ಕಾನೂನಿನಲ್ಲಿ ಉಲ್ಲೇಖಿಸಲಾದ ಅರ್ಜಿಯು ಸದರಿ ಪಂಚಾಯತ ಠರಾಯಿಸಲ್ಪಟ್ಟ ನಮೂನೆಯಲ್ಲಿ ಇರತಕ್ಕದ್ದು ಮತ್ತು ಅದರ ಜೊತೆಗೆ, ಯಾವ ಜೋಡ

ಣೆಯ ಸಲುವಾಗಿ ಅರ್ಜಿಯನ್ನು ಮಾಡಲ-ಗಿರುವದೋ ಅಂಥ ಜೋಡಣೆಯ ವೆಚ್ಚದ ಅಂದಾಜನ್ನು ತಯಾರಿಸುವ ಬಗ್ಗೆ ಗಿರೂಪಾಯಿಯ ಫೀಯು ಇರತಕ್ಕದ್ದು.

೬೯ ಯಾವದೊಂದು ಬಗ್ಗೆ ಇರುವ ಯಾವದೇ ಅರ್ಜಿಯು, ಸದರಿ ಅರ್ಜದಾರನು ಪಂಚಾಯತದ ಕಡೆಗೆ ಸದರಿ ಜೋಡಣೆಯ ಅಂದಾಜು ಮಾಡಲಾದ ವೆಚ್ಚಕ್ಕೆ ಸರಿಯಾಗು ವಷ್ಟು ರಕಮನ್ನು ಅಮಾನತ್ತಿಟ್ಟ ಹೊರ್ತು, ಸದರಿ ಪಂಚಾಯತಿದಿಂದ ಸ್ವೀಕರಿಸಲ್ಪಡತಕ್ಕ ದ್ದಲ್ಲ. ಸದರಿ ಅರ್ಜದಾರನಿಂದ ಹೀಗೆ ಅಮಾನತಿಡಲ್ಪಟ್ಟ ರಕಮಿನ ಪೈಕಿ, ಸದರಿ ಜೋಡ ಣೆಯ ಪ್ರತ್ಯಕ್ಷವೆಚ್ಚಕ್ಕೆ ಸರಿಯಾಗುವಷ್ಟು ರಕಮನ್ನು ಸದರಿ ಪಂಚಾಯತವು ಇಟ್ಟುಕೊಳ್ಳ ತಕ್ಕದ್ದು ಮತ್ತು ಹೆಚ್ಚಿಗೆ ಯಾವದಾದರೂ ರಕಮು ಉಳಿದರೆ ಅದನ್ನು ಸದರಿ ಕಾಮಗಿರಿಯು ಮುಗಿದ ಒಂದು ತಿಂಗಳೊಳಗಾಗಿ ಸದರಿ ಅರ್ಜದಾರನಿಗೆ ಹಿಂತಿರಿಗಿ ಕೊಡತಕ್ಕದ್ದು.—

ಆದರೆ ಗೊತ್ತುಪಡಿಸುವದೇನಂದರೆ, ಸದರಿ ಅರ್ಜದಾರನು, ಅವನು ಅಮಾನತಿಟ್ಟ ರಕಮು ಸದರಿ ಜೋಡಣೆಯ ಪ್ರತ್ಯಕ್ಷ ವೆಚ್ಚವನ್ನು ಒಳಗೊಳ್ಳುವಷ್ಟಿರದಿದ್ದರೆ, ಸದರಿ ಪಂಚಾಯತಕ್ಕೆ ಕಡಿಮೆ ಬಿದ್ದ ರಕಮನ್ನು ಕೊಡತಕ್ಕದ್ದು

೭೦ (ಅ) ಸದರಿ ಪಂಚಾಯತವು, ಯಾವದೇ ಕಾಲಕ್ಕೆ, ಈ ಕೆಳಗಿನ ಕಾರಣಗಳ ಪೈಕಿ ಯಾವದೇ ಕಾರಣದ ಸಲುವಾಗಿ ಸದರಿ ಜೋಡಣೆಯನ್ನು ಕತ್ತರಿಸಬಹುದು, ಆ ಕಾರಣ ಗಳು ಯಾವವೆಂದರೆ —

(೧) ಸದರಿ ಜೋಡಣೆಯು ಸಂಬಂಧದಿಂದಿರುವ ಪಟ್ಟಿಯನ್ನು ಅಥವಾ ಇತರ ಯಾವದೇ ಚಾರ್ಜುಗಳನ್ನು ಅಂದರೆ, ಹೊಸ ಜೋಡಣೆಯ ಬಗ್ಗೆ, ಜೋಡಣೆಯನ್ನು ಕತ್ತರಿಸುವ ಬಗ್ಗೆ ಅಥವಾ ದುರಸ್ತಿಗಳ ಬಗ್ಗೆ ಇರುವ ಚಾರ್ಜುಗಳನ್ನು ಅವುಗಳ ಬಗ್ಗೆ ಒಂದು ಬಿಲ್ಲು ಕೊಡಲ್ಪಟ್ಟ ತಾರೀಖಿನಿಂದ ಒಂದು ತಿಂಗಳೊಳಗಾಗಿ ಕೊಡಲು ತಪ್ಪಿದ ಬಗ್ಗೆ,

(೨) ಸದರಿ ಜೋಡಣೆಯಲ್ಲಿಯ ಪೈಪುಗಳನ್ನು, ಬಿರಡೆಗಳನ್ನು ( ಕಾರ್ಕುಗಳನ್ನು ) ಒಡೆದ ಬಗ್ಗೆ ಅಥವಾ ಅವುಗಳಿಗೆ ನಷ್ಟವನ್ನುಂಟು ಮಾಡಿದ ಬಗ್ಗೆ ಅಥವಾ ಸದರಿ ಜೋಡಣೆ ಯಲ್ಲಿಯ ಇತರ ದೋಷಗಳ ಬಗ್ಗೆ ಸದರಿ ಪಂಚಾಯತಕ್ಕೆ ಖಾತ್ರಿಯಾಗುವಂತೆ ನಷ್ಟಭರ್ತಿ ಮಾಡಿಕೊಡುವ ವರೆಗೆ, ಸದರಿ ಜೋಡಣೆಯಲ್ಲಿ ಪೈಪುಗಳನ್ನು ಅಥವಾ ಬಿರಡೆಗಳನ್ನು (ಕಾರ್ಕು ಗಳನ್ನು) ಅದನ್ನು ಒಡೆದ ಬಗ್ಗೆ ಅಥವಾ ಅವುಗಳಿಗೆ ನಷ್ಟವನ್ನುಂಟುಮಾಡಿದ ಬಗ್ಗೆ ಅಥವಾ ಅದರಲ್ಲಿಯ ದೋಷಗಳ ಬಗ್ಗೆ;

(೩) ನೀರನ್ನು ವ್ಯರ್ಥವಾಗಿ ಹರಿಬಿಡುವದನ್ನು ಸದರಿ ಪಂಚಾಯತಕ್ಕೆ ಖಾತ್ರಿಯಾ ಗುವ ಹಾಗೆ ನಿಲ್ಲಿಸುವ ವರೆಗೆ ಹೀಗೆ ನೀರನ್ನು ವ್ಯರ್ಥವಾಗಿ ಹರಿಬಿಟ್ಟ ಬಗ್ಗೆ;

(೪) ಸಲ್ಲತಕ್ಕ ವಿಶಿಷ್ಟ ನೀರಿನ ಪಟ್ಟಿಯನ್ನು ಕೊಡದಿರುವ ಬಗ್ಗೆ.

(ಬ) ಜೋಡಣೆಯನ್ನು ಕತ್ತರಿಸುವ ಬಗ್ಗೆ ಗ್ರಾಮಪಂಚಾಯತಗಳು ಮಾಡಿದ ಹುಕು ಮಿನ ವಿರುದ್ಧ, ಇಂಥ, ಹುಕುಮಿನ ತಾರೀಖಿನಿಂದ ೩೦ ದಿವಸಗಳೊಳಗಾಗಿ ಜಿಲ್ಹಾ

ಲೋಕಲ್ ಬೋರ್ಡಿನ ಕಡೆಗೆ ಅಪೀಲು ನಡೆಯತಕ್ಕದ್ದು ಸದರಿ ಜಿಲ್ಲಾ ಲೋಕಲ್ ಬೋರ್ಡಿನ ನಿರ್ಣಯವು ಕೊನೆಯದಾಗಿರತಕ್ಕದ್ದು.

೭೧. ಸದರಿ ಪಟ್ಟಿಯನ್ನು ಕೂಡ್ರಿಸಬೇಕೆಂದು ನಿರ್ಣಯಿಸುವ ಗ್ರಾಮಪಂಚಾಯತವು, ಈ ಕೆಳಗಿನ ದರಗಳಿಗೆ ಮೀರಿದ ಸದರಿ ಪಂಚಾಯತದಿಂದ ನಿಶ್ಚಯಿಸಲ್ಪಡತಕ್ಕ ದರದ ಮೇರೆಗೆ ಅದನ್ನು ಕೂಡ್ರಿಸತಕ್ಕದ್ದು, ಆ ದರಗಳು ಯಾವವೆಂದರೆ.—

| ರೂ. ಆ. ಪೈ. | |
|---|---|
| ೪೮-೦-೦ | ⅜ ಇಂಚು ವ್ಯಾಸದ ನೀರಿನ ಪೈಪಿನ ಜೋಡಣೆಯ ಬಗ್ಗೆ |
| ೯೬-೦-೦ | ¾ ಇಂಚು ವ್ಯಾಸದ ನೀರಿನ ಪೈಪಿನ ಜೋಡಣೆಯ ಬಗ್ಗೆ |
| ೧೨೦-೦-೦ | ೧ ಇಂಚು ವ್ಯಾಸದ ನೀರಿನ ಪೈಪಿನ ಜೋಡಣೆಯ ಬಗ್ಗೆ |

ಯಾವ ನಿವೇಶನಗಳಲ್ಲಿ ಯಾವದೇ ವ್ಯಾಪಾರದ ಅಥವಾ ತಯಾರಿಕೆಗಳ ಉದ್ದೇಶದ ಸಲುವಾಗಿ ನೀರು ಉಪಯೋಗಿಸಲ್ಪಡುತ್ತದೋ ಇಂಥ ಖಾಸಗಿ ನಿವೇಶನಗಳ ಮೇಲೆ ಕೂಡ್ರಿಸಲ್ಪಟ್ಟ ಪಟ್ಟಿಯು ಮೇಲೆ ಹೇಳಿದ ದರಗಳ ನಾಲ್ಕು ಪಟ್ಟನಷ್ಟು ಆಗಿರತಕ್ಕತದ್ದು.

೭೨. ಸದರಿ ಪಟ್ಟಿಯು ಎಪ್ರೀಲ ತಿಂಗಳ ೧ನೇ ತಾರೀಖಿನಿಂದ ಪ್ರಾರಂಭವಾಗಿ ಮಾರ್ಚ ತಿಂಗಳ ೩೧ನೇ ತಾರೀಖಿಗೆ ಮುಗಿಯುವ ವರ್ಷದ ಬಗ್ಗೆ ಕೂಡ್ರಿಸಲ್ಪಡತಕ್ಕದ್ದು ಸದರಿ ಪಟ್ಟಿಯು ಎಪ್ರೀಲ ತಿಂಗಳ ೧ನೇ ತಾರೀಖಿನ ಹೊರತಾಗಿ ಇತರ ಯಾವದೇ ತಾರೀಖಿಗೆ ಅಮಲಿನಲ್ಲಿ ಬಂದರೆ ಅದು, ಲಗತು ನಂತರದ ಜುಲೈ ತಿಂಗಳ ೧ನೇ ತಾರೀಖಿಗೆ, ಅಕ್ಟೋಬರ ತಿಂಗಳ ೧ನೇ ತಾರೀಖಿಗೆ, ಜಾನೇವರಿ ತಿಂಗಳ ೧ನೇ ತಾರೀಖಿಗೆ ಮತ್ತು ಎಪ್ರೀಲ ತಿಂಗಳ ೧ನೇ ತಾರೀಖಿಗೆ ಮುಗಿಯುವ ತ್ರೈಮಾಸಿಕದ ಬಗ್ಗೆ ಮತ್ತು ಆದರ ನಂತರ ಪ್ರತಿವರ್ಷದ ಬಗ್ಗೆ ಕೂಡ್ರಿಸಲ್ಪಡಲು ಪಾತ್ರವಾಗತಕ್ಕದ್ದು.

೭೩ (೧) ಸದರಿ ಪಟ್ಟಿಯು, ಸದರಿ ಮನೆಯನ್ನು ಪ್ರತ್ಯಕ್ಷವಾಗಿ ಭೋಗವಟಿ ಮಾಡುವ ಮನುಷ್ಯನ ಕಡೆಯಿಂದ— ಅವನು ಸದರಿ ಮನೆಯ ಮಾಲಕನಿದ್ದರೆ— ಪ್ರಥಮತಃ ವಸೂಲು ಮಾಡತಕ್ಕದ್ದು.

(೨) ಸದರಿ ಮನೆಯ ಮಾಲಕನಿಂದ ಭೋಗವಟಿ ಮಾಡಲ್ಪಡದಿದ್ದರೆ, ಸದರಿ ಪಟ್ಟಿಯು—

(ಅ) ಸದರಿ ಮನೆಯ ಭಾಡಿಗೆಯಿಂದ ಕೊಡಲ್ಪಟ್ಟಿದ್ದರೆ, ಪಟ್ಟಿಗೆ ಕೊಡುವವನ ಕಡೆಯಿಂದ,

(ಬ) ಅದು ಪೋಟ ಭಾಡಿಗೆಗೆ ಕೊಡಲ್ಪಟ್ಟಿದ್ದರೆ, ವರಿಷ್ಠ ಪಟ್ಟಿಗೆ ಕೊಡುವವನ ಕಡೆಯಿಂದ, ಅಥವಾ

(ಕ) ಅದು ಭಾಡಿಗೆಯಿಂದ ಕೊಡಲ್ಪಟ್ಟಿರದಿದ್ದರೆ, ಅದನ್ನು ಭಾಡಿಗೆಗೆ ಕೊಡುವ ಹಕ್ಕು ನಿರ್ದಿಷ್ಟವಾಗಿರುವಂಥ ಮನುಷ್ಯನ ಕಡೆಯಿಂದ ಪ್ರಥಮತಃ ವಸೂಲು ಮಾಡಲ್ಪಡಲಿಕ್ಕೆ ಪಾತ್ರವಾಗಿರತಕ್ಕದ್ದು.

(೩) ಯಾವ ಮನುಷ್ಯನ ಕಡೆಯಿಂದ ಸದರಿ ಪಟ್ಟಿಯ ಬಗ್ಗೆ ಸಲ್ಲತಕ್ಕ ಯಾವದೇ ರಕಮು ಪ್ರಥಮತಃ ವಸೂಲು ಮಾಡಲ್ಪಡಲಿಕ್ಕೆ ಪಾತ್ರವಿರುವದೋ ಅಂಥ ಮನುಷ್ಯನ ಕಡೆಯಿಂದ ಅದನ್ನು ವಸೂಲು ಮಾಡಲು ತಪ್ಪಿದರೆ ಯಾವ ಮನೆಯ ಸಂಬಂಧದಿಂದ ಸದರಿ ಪಟ್ಟಿಯು ಸಲ್ಲತಕ್ಕದ್ದಿರುವದೋ ಅಂಥ ಮನೆಯ ಯಾವದೇ ಭಾಗದ ಭೋಗವಟೆಯನ್ನು ಮಾಡುವ ಮನುಷ್ಯನ ಕಡೆಯಿಂದ, ಸದರಿ ಮನೆಯ ಆ ಭಾಗದ ಸಂಬಂಧದಿಂದ ಪ್ರಮಾಣಕ್ಕನುಸಾರವಾಗಿ ವಸೂಲು ಮಾಡಲಿಕ್ಕೆ ಪಾತ್ರವಿರುವದೆಂದು ಸರಪಂಚನು ನಿರ್ಣಯಿಸುವಂಥ ಆ ರಕಮಿನ ಭಾಗವು ವಸೂಲು ಮಾಡಲ್ಪಡಬಹುದು.

೭೪. ನೀರಿನ ಪುರವರೆಯನ್ನು ನಿಲ್ಲಿಸಿದ ಬಗ್ಗೆ ಯಾವದೇ ಖಾಸಗೀ ಜೋಡಣೆಯನ್ನು ಕತ್ತರಿಸಿದ ಬಗ್ಗೆ ಈ ಕಾನೂನುಗಳನ್ವಯ ಸದರಿ ಪಟ್ಟಿಯನ್ನು ಹಿಂತಿರುಗಿ ಕೊಡಲು ಅಥವಾ ಅದನ್ನು ಸೂಟು ಬಿಡಲು ಮತ್ತು ಯಾವದೇ ಪ್ರಕಾರದ ಯಾವದೇ ಲುಕ್ಸಾನ ಭರಪಾಯಿಯನ್ನು ಕೊಡಲು ಯಾವದೇ ಹಕ್ಕು ಹೇಳಲ್ಪಡಲಿಕ್ಕೆ ಪಾತ್ರವಿರತಕ್ಕದ್ದಲ್ಲ ಮತ್ತು ಹೀಗೆ ನೀರಿನ ಪುರವರೆಯನ್ನು ನಿಲ್ಲಿಸಿದ್ದರಿಂದ ಅಥವಾ ಜೋಡಣೆಯನ್ನು ಕತ್ತರಿಸಿದ್ದರಿಂದ, ಅದಕ್ಕಿಂತ ಮುಂಚೆ ಯಾವನೇ ಮನುಷ್ಯನ ಬಾಬತಿನಲ್ಲಿ ಉಂಟಾಗಬಹುದಾದ ಯಾವದೇ ಪಾತ್ರತೆಗಳಿಂದ ಅವನು ಮುಕ್ತನಾಗತಕ್ಕದ್ದಲ್ಲ ವಿಶಿಷ್ಟ ಬಾಬತುಗಳಲ್ಲಿ ಸದರಿ ಪಂಚಾಯತವು, ಜಿಲ್ಹಾ ಲೋಕಲ್ ಬೋರ್ಡಿನ ಸಮ್ಮತಿಯನ್ನು ಪಡೆದು, ಒಂದು ತಿಂಗಳಿಗಿಂತ ಹೆಚ್ಚಿಗೆ ಇರುವ ಸತತವಾದ ಅವಧಿಯ ವರೆಗೆ ನೀರಿನ ಪುರವರೆಯು ನಿಲ್ಲಿಸಲ್ಪಟ್ಟರೆ ಪ್ರಮಾಣಕ್ಕನುಸಾರವಾಗಿ ಸೂಟನ್ನು ಕೊಡಬಹುದು.

(೭೫) ಈ ಭಾಗದ ಕೆಳಗಿನ ಪಟ್ಟಿಯು, ಅದು ಜಿಲ್ಹಾ ಲೋಕಲ್ ಬೋರ್ಡಿನಿಂದ ಪಸಂದು ಮಾಡಲ್ಪಟ್ಟ ಹೊರ್ತು, ಕೂಡ್ರಿಸಲ್ಪಡತಕ್ಕದ್ದಲ್ಲ.

---

## ಭಾಗ ೧೪

ಎಸ್ ನಂ ೧೭೪ (೧) (ಅ) ತಾ. ೨೩–೧–೧೯೫೧.

### ಚಕ್ಕಡಿ ನಿಲ್ಲುವ ಸ್ಥಳದ ಸಂಬಂಧದ ಫೀಗಳು

೭೬. ಪಂಚಾಯತದ ಹದ್ದುಗಳೊಳಗಿಂದ ಹಾಯ್ದು ಹೋಗುವ ಚಕ್ಕಡಿಗಳು ಯಾವದೇ ಚಕ್ಕಡಿ ನಿಲ್ಲುವ ಸ್ಥಳದ ಉಪಯೋಗ ಮಾಡಿದ ಬಗ್ಗೆ ಫೀಯನ್ನು ಕೂಡ್ರಿಸಬೇಕೆಂದು ನಿರ್ಣಯಿಸುವ ಯಾವದೊಂದು ಪಂಚಾಯತವು, ಈ ಭಾಗಕ್ಕೆ ಜೋಡಿಸಲ್ಪಟ್ಟ ಪರಿಶಿಷ್ಟದಲ್ಲಿ ನಿರ್ದಿಷ್ಟ ಮಾಡಿದ ದರಗಳ ಪ್ರಕಾರ ಅದನ್ನು ಕೂಡ್ರಿಸತಕ್ಕದ್ದು.

ಆದರೆ ಗೊತ್ತುಪಡಿಸುವದೇನಂದರೆ, ಇಂಥ ಫೀಯನ್ನು ಕೂಡ್ರಿಸುವ ಪಂಚಾಯತವು ಕಲೆಕ್ಟರನ ಕೂಡ ಆಲೋಚನೆಯನ್ನು ಮಾಡಿ ಸದರ ಉದ್ದೇಶದ ಸಲುವಾಗಿ ಸದರಿ ಪಂಚಾ

